# ಅಪರಂಜಿ



ತಿಳಿನಗೆಯ ಕಾರಂಜಿ



ಸಂಪುಟ 28
ಸಂಚಿಕೆ - 4
ಜನವರಿ - 2011



**ಚಂದಾ ವಿವರ:**
ಬಿಡಿ ಪ್ರತಿ: ರೂ. 10/-
ವಾರ್ಷಿಕ ಚಂದಾ: ರೂ. 100/-
ಹತ್ತು ವರ್ಷದ ಚಂದಾ: ರೂ. 750/-
ಕೆಲಸದ ವೇಳೆ:
ಬೆಳಿಗ್ಗೆ 8 ರಿಂದ 10 ಗಂಟೆಯವರೆಗೆ
ಮುದ್ರಣ: ರವಿ ಗ್ರಾಫಿಕ್ಸ್
ಅಕ್ಷರ ಜೋಡಣೆ:
ಒಮೇಗಾ ಲೇಸರ್‌ಟೆಕ್

## ಈ ಸಂಚಿಕೆಯಲ್ಲಿ.....



ಪ್ರಕಾಶಕರು: ಕೊರವಂಜಿ ಅಪರಂಜಿ ಟ್ರಸ್ಟ್, 36, 6ನೇ ಮುಖ್ಯರಸ್ತೆ, ಮಲ್ಲೇಶ್ವರಂ,
ಬೆಂಗಳೂರು - 560 003. email: aparanji@hotmail.com website: aparanjimag.com

ಸಂಪರ್ಕ ವಿಳಾಸ: **ಶ್ರೀ ಬೇಲೂರು ರಾಮಮೂರ್ತಿ**, ಉಪ ಸಂಪಾದಕರು, ಅಪರಂಜಿ ಮಾಸಪತ್ರಿಕೆ,
ನಂ. 96, 'ಸುಕೇಶವ' ಎರಡನೇ ಅಡ್ಡರಸ್ತೆ, 20ನೇ ಮುಖ್ಯರಸ್ತೆ, ಮೊದಲನೇ ಫೇಸ್, ಬಿ.ಟಿ.ಎಂ. ಲೇಔಟ್,
ಬೆಂಗಳೂರು - 560 068. ದೂರವಾಣಿ: 080-26688488. email: brmurthy@dataone.in

# ಮೊದಲ ಮಾತು

ಹಾಸ್ಯೋತ್ಸವ 2010 ನಮ್ಮ ಸರಣಿಯ ಹದಿನಾರನೆಯ ಹಾಸ್ಯೋತ್ಸವ. ಈ ಸಂಭ್ರಮವನ್ನು ನಾವು ದಿವಂಗತ ಎಚ್ಚೆನ್ ಅವರ ನೆನಪಿನಲ್ಲಿ ಆಚರಿಸುತ್ತಿದ್ದೇವೆ. ಹಾಸ್ಯೋತ್ಸವವನ್ನು ಪ್ರಾರಂಭಿಸಿದ ಮೊದಲ ದಿನಗಳಿಂದಲೂ ಮಾನ್ಯ ಎಚ್ಚೆನ್ ನಮಗೆ ಸದಾ ಬೆಂಬಲ ನೀಡುತ್ತಿದ್ದರು. 'ಚೆನ್ನಾಗಿ ನಡೆಯುತ್ತಿದೆ ಶಿವಕುಮಾರ್, ಎಂದಿಗೂ ನಿಲ್ಲಿಸಬೇಡಿ, ಮುಂದುವರಿಸಿಕೊಂಡು ಹೋಗಿ' ಅಂತ ಅವರು ಹುರಿದುಂಬಿಸುತ್ತಿದ್ದುದು ಇಂದಿಗೂ ಕಿವಿಗಳಲ್ಲಿ ಗುಣಗುಣಿಸುತ್ತಿದೆ.

ಈ ಸಂದರ್ಭದಲ್ಲಿ ಬಿಡುಗಡೆಯಾಗುತ್ತಿರುವ ಈ ವಿಶೇಷ ಸಂಚಿಕೆ ಹೊಸವರ್ಷದ ಮೊದಲ ಸಂಚಿಕೆಯೂ ಹೌದು. ಅನೇಕ ಬರಹಗಾರರು ಈ ಸಂಚಿಕೆಗೆ ತಮ್ಮ ಲೇಖನಗಳನ್ನು ನೀಡಿ ಸಹಕರಿಸಿದ್ದಾರೆ. ಅವರೆಲ್ಲರಿಗೂ ಅಪರಂಜಿ ಆಭಾರಿ. ಈ ಬಾರಿಯ ಪ. ರಮಾನಂದರಾವ್ ನಗೆಲೇಖನ ಸ್ಪರ್ಧೆಗೆ ಬಂದ ಲೇಖನಗಳನ್ನು ಪರಿಶೀಲಿಸಿ, ಅವುಗಳಲ್ಲಿ ಉತ್ತಮ ಲೇಖನಗಳನ್ನು ಆಯ್ಕೆ ಮಾಡಿಕೊಟ್ಟ ಮಾನ್ಯ ಪ್ರೊಫೆಸರ್ ಜಿ. ಅಶ್ವತ್ಥನಾರಾಯಣ ಅವರಿಗೆ ನಮ್ಮ ಕೃತಜ್ಞತೆಗಳು. ಕರಡನ್ನು ಬಹು ಮುತುವರ್ಜಿಯಿಂದ ತಿದ್ದಿರುವ ಗೆಳೆಯರಾದ ಆನಂದ ಹಾಗೂ ಗೋಪಾಲ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಜಾಹೀರಾತುಗಳನ್ನು ಹೊಂದಿಸಲು ನೆರವಾದ ರಾಜಗೋಪಾಲ್, ನಾಥ್ ಹಾಗೂ ಶ್ರೀನಿವಾಸ್ ಅವರುಗಳು ಸದಾ ಅಪರಂಜಿಯ ಬೆಂಬಲಿಗರು ಎಂದು ತಿಳಿಸಲು ಸಂತಸವಾಗುತ್ತದೆ. ಹಾಸ್ಯೋತ್ಸವ ಹಾಗೂ ಅಪರಂಜಿಯ ಯುಗಳ ಸಾರಥ್ಯವನ್ನು ಬಹು ಸಮರ್ಥವಾಗಿ ನಡೆಸುತ್ತಿರುವ, ಸದಾ ಸಂತಸದ ಚಿಲುಮೆಯಂತಿರುವ ಮಿತ್ರ ಹಾಗೂ ನಮ್ಮ ಉಪಸಂಪಾದಕರಾದ ಬೇಲೂರರ ಉತ್ಸಾಹ ಎಂದೂ ಕುಂದದಿರಲಿ ಎಂದು ಹಾರೈಸುವೆ.

ಎಂದಿನಂತೆ ಸಂಚಿಕೆಯನ್ನು ಅಚುಕಟ್ಟಾಗಿ ಸಿದ್ಧಪಡಿಸಿರುವ ಒಮೇಗಾದ ಶ್ವೇತ ಹಾಗೂ ರವಿ ಗ್ರಾಫಿಕ್ಸ್‌ನ ಸಂತೋಷ್ ಅವರಿಗೆ ಅಪರಂಜಿ ಆಭಾರಿ. ಹೊಸ ವರುಷ ಎಲ್ಲರಿಗೂ ಶುಭದಾಯಕವಾಗಿರಲೆಂದು ಅಪರಂಜಿ ಭಗವಂತನಲ್ಲಿ ಪ್ರಾರ್ಥಿಸುತ್ತಾಳೆ.

**ಶಿವಕುಮಾರ್**



# ಅಪರಂಜಿ ಕಿಡಿ

● ಪ್ರಕಾಶ್

ಬಿ.ಜೆ.ಪಿ. ಭಿನ್ನರ ಅನರ್ಹತೆ ಊರ್ಜಿತ – ಶೀರ್ಷಿಕೆ

● ಅಂಗಂದ್ರೆ ಕನ್ನಡದಲ್ಲಿ ಏನ್‌ಸಾರ್ ??

★★★

ಸರ್ಕಾರಿ ಪೂಜಾರಿಗಳು ಹಂಚುವ ಪ್ರಸಾದ – ರಾಜ್ಯೋತ್ಸವ ಪ್ರಶಸ್ತಿಗಳ ಬಗ್ಗೆ ಟೀಕೆ

● ಸದ್ಯ, ದೇವರು ಬಚಾವಾದನಲ್ಲಾ !!

★★★

2-G ಹಗರಣ ; ಶಿವರಾಜ್ ಪಾಟೀಲ್ ನೇತೃತ್ವದ ಸಮಿತಿ – ಸುದ್ದಿ

● ಶಿವಪ್ಪ ಕಾಯೋ ತಂದೆ........!!

★★★

ಲೋಕಾಯುಕ್ತ ಸಂವಿಧಾನಾತ್ಮಕ ಸಂಸ್ಥೆಯಾಗಲಿ – ಹೇಳಿಕೆ

● ಸಂತೋಷದ ವಿಷಯ !!

★★★

ಎಸ್.ಎಂ.ಎಸ್. ಮೂಲಕ ಲೋಕಾಯುಕ್ತರಿಗೆ ಬೆಂಬಲ ನೀಡಿ – ಪತ್ರಿಕೆ

● ಬಾಹ್ಯಾಕಾಶ ರೋದನ ಎಂದರೆ ಇದೇ !!

★★★

ಹೋದೆಯಾ ........ ಅಂದರೆ, ಬಂದೆ ಗಡ್ಡಕರೀಲಿ ಅಂದಂತೆ !!

★★★

ದಕ್ಷಿಣ ಆಫ್ರಿಕಾದಲ್ಲಿ ವಿರಾಟಪರ್ವ ಬಲಿಷ್ಟವಾಗಲಿ !!

★★★

ಮೆಟ್ರೋ ಮಾರ್ಗದಲ್ಲಿ ಸ್ಕೈವಾಕ್ – ಪತ್ರಿಕೆ

● ದುರ್ಭಿಕ್ಷದಲ್ಲಿ ಅಧಿಕಮಾಸ !!

★★★

# ನಮ್ಮ ನಿಮ್ಮಲ್ಲಿ

**ಭ**ಗವಾನ್ ಗೌತಮ ಬುದ್ಧ ಹೇಳಿರುವ 'ಆಸೆಯೇ ದುಃಖಕ್ಕೆ ಮೂಲ' ಎಂಬ ಉಪದೇಶ ನನಗೆ ತಿಳಿದಿಲ್ಲ ಅಂತೇನೂ ಅಲ್ಲ. ನಾರ್ಮಲ್ ಸ್ಕೂಲಿನ ಎರಡನೇ ಕ್ಲಾಸಿನಲ್ಲೇ ನಮ್ಮ ನರಸಿಂಹ ಮೂರ್ತಿ ಮೇಷ್ಟರು ಈ ಬುದ್ಧ ತತ್ವದ ಜೊತೆಗೆ ಎಂಟು ಗೇಣಿನ ದೇಹ, ಇದಕ್ಕೆಷ್ಟು ಉಪಚಾರ ಎಂಬ ವೈರಾಗ್ಯ ಭಾವವನ್ನೂ, ಆತ್ಮನು ದೇಹವನ್ನು ಹಳೆಯ ಬಟ್ಟೆಯಂತೆ ಕಿತ್ತೊಗೆಯುವುದನ್ನೂ ಆರು ವರ್ಷ ವಯಸ್ಸಿನ ಹಸುಳೆಗಳ ಮನಮುಟ್ಟುವಂತೆ ವಿವರಿಸಿದ್ದರು. ಆದರೂ ನನಗೊಂದು ಆಸೆ ಇದೆ. ಎಂದಾದರೂ ನಮ್ಮ ಈ ಭಾರತ ದೇಶಕ್ಕೆ ಸರ್ವಾಧಿಕಾರಿಯ ಆಳ್ವಿಕೆ ಬಂದು ನಾನು ಸರ್ವಾಧಿಕಾರಿಯಾದರೆ, ಅರ್ನಾಬ್ ಗೋಸ್ವಾಮಿ ಮತ್ತು ರಾಜ್‌ದೀಪ್ ಸರ್‌ದೇಸಾಯಿ ಅವರಿಬ್ಬರ ನಡುವೆ ಒಂದು ಚರ್ಚೆ ಏರ್ಪಡಿಸಿ ಯಾರ ಗಂಟಲು ಮೊದಲು ಹರಿಯುತ್ತದೆ ಎಂಬುದನ್ನು ನೋಡಬೇಕೆಂಬ ಆಸೆ ಇದು. ಅಲ್ಲಾರಿ ಅದೇನು ಗಂಟಲುಗಳು ಈ ಜನರದ್ದು ಅಂತೀನಿ. ಪ್ರತಿ ಸಂಜೆ ಟಿ.ವಿ., ಡಿಬೇಟ್ ಅನ್ನೋ ನೆವದಲ್ಲಿ ಹಲವಾರು ಸಂಭಾವಿತರನ್ನು ಕಲೆಹಾಕಿ (ಅವರುಗಳು ಯಾಕೆ ಈ ಚಿತ್ರಹಿಂಸೆಗೆ ಒಪ್ಪುತ್ತಾರೋ, ದೇವರೇ ಬಲ್ಲ) ಒಬ್ಬೊಬ್ಬರನ್ನು ಒಂದೊಂದು ಕಿಟಕಿಯಲ್ಲಿ ಕೂಡಿಹಾಕಿ ಅವರುಗಳು ಏನಾದರೂ ಮಾತನಾಡಲು ಶುರು ಮಾಡಿದರೆ, ತಾನೂ ಅವರುಗಳೊಂದಿಗೆ ಕೂಗಲು ಪ್ರಾರಂಭಿಸಿ ಒಟ್ಟಿನಲ್ಲಿ ಎಲ್ಲರೂ ಆನಂದದಿಂದ ಕೂಗುವ ಪ್ರಕ್ರಿಯೆಯನ್ನು ನಮ್ಮ ಈ ಹೀರೋಗಳಿಬ್ಬರು ಚರ್ಚೆ ಎಂದು ಹೆಸರಿಸುತ್ತಾರಲ್ಲಾ ಅದಕ್ಕೇನು ಹೇಳೋಣ. ಈ ಬಗ್ಗೆ ನನ್ನ ಗೋಳನ್ನು ಮಿತ್ರ ರಾಜನಿಗೆ ಹೇಳಿದಾಗ, ಅಷ್ಟು ಕಷ್ಟಪಟ್ಟುಕೊಂಡಾದರೂ ಆ ಕಾರ್ಯಕ್ರಮಾನ ಯಾಕೆ ನೋಡಬೇಕು ನೀನು, ಬೇರೆ ಯಾವುದಾದರು ತಮಿಳು ಸಿನಿಮಾ ಚಾನಲ್‌ಗೆ ಬದಲಿಸಬಾರದೇ, ಅಥವಾ ರಂಗಶಂಕರಕ್ಕೆ ಹೋಗಿ ಯಾವುದಾದರು ಒಳ್ಳೆಯ ನಾಟಕ ನೋಡಬಾರದೇ ಅಂತ ಬುದ್ಧಿವಾದ ಹೇಳಿದ. ಅವನ ಸಲಹೆಯನ್ನು ಅನುಮೋದಿಸಿ ಚಾನಲ್ ಬದಲಿಸಿದೆ.

ಆದೊಂದು ತಮಿಳು ಚಿತ್ರ. ಯಾವುದೋ ಚಿತ್ರವಿಚಿತ್ರ ವೇಷ ಧರಿಸಿದ ತಮಿಳು ಕೌಬಾಯ್ ಒಬ್ಬ ಆಗತಾನೆ ಗುಂಡಿನ ಏಟು ಬಿದ್ದು ಸತ್ತಿದ್ದ. ನೋಡುತ್ತಿದ್ದಂತೆ ಯಮರಾಜ ಒಂದು ಆಟೋರಿಕ್ಷಾದಲ್ಲಿ ಬಂದು ಅವನನ್ನು ಸ್ವರ್ಗಕ್ಕೆ ಕರೆದೊಯ್ದ. ಅರೆ ಇದ್ಯಾವ ಸಿನಿಮಾ ಇದು ಅಂತ ಅದರ ಟೈಟಲ್ ನೋಡಿದೆ. ಕ್ವಿಕ್‌ಗನ್ ಮುರುಗನ್ ಅಂತ ಹೆಸರಿತ್ತು. ಸಾಮಾನ್ಯವಾಗಿ ನನಗೆ ತಮಿಳು ಸಿನಿಮಾ ನೋಡುವ ಖಯಾಲಿ ಇಲ್ಲ. ಆದರೆ ಈ ಚಿತ್ರವನ್ನು



ಮಂತ್ರಮುಗ್ಧನಾಗಿ ನೋಡಿದೆ. ಅವತ್ತು ನಕ್ಕಷ್ಟು ನಾನು ಈಚಿನ ದಿನಗಳಲ್ಲಿ ನಕ್ಕೇ ಇಲ್ಲ ಅಂತ ಧಾರಾಳವಾಗಿ ಹೇಳಬಹುದು. ಯಾವುದೇ ಅತ್ಯುತ್ತಮ ಇಂಗ್ಲೀಷ್ ಕಾಮಿಡಿ ಸಿನಿಮಾಕ್ಕೆ ಸರಿಸಾಟಿಯಾಗಿ ನಿಲ್ಲಬಲ್ಲಂತಹ ಸಿನಿಮಾ ಕ್ವಿಕ್‌ಗನ್ ಮುರುಗನ್.

ಸ್ಫಗೆಟ್ಟೀ ವೆಸ್ಟರ್ನ್ ಅನ್ನುವ ಹಾಗೆ ಇದೊಂದು ಇಡ್ಲಿ ಸಾಂಬಾರ್ ವೆಸ್ಟರ್ನ್. ವಿಚಿತ್ರ ಹಾಡುಗಳು, ಅಸಂಬದ್ಧ ಚಿತ್ರಕಥೆ, ಅನುಪಮ ನಟನಾ ಚಾತುರ್ಯ (ರಾಜೇಂದ್ರ ಪ್ರಸಾದ್ ಇದರ ಹೀರೋ) ಇವುಗಳೆಲ್ಲದರ ಸಮ್ಮಿಲನ ಈ ಸಿನಿಮಾದ ತಿರುಳು. ಒಂದು ಕಡೆ ಇಬ್ಬರು ಕೌಬಾಯ್‌ಗಳು ಮುಂಬಯಿನ ರಸ್ತೆಯಲ್ಲಿ ತಮ್ಮ ಬಂದೂಕು ಡ್ಯುಯಲ್‌ಗೆ ಉದ್ಯುಕ್ತರಾಗುತ್ತಾರೆ. ಆದರೆ ಮುಂಬಯಿನ ರಸ್ತೆ ಅಂದರೆ ಗೊತ್ತಲ್ಲ. ಯಾವಾಗಲು ಟ್ರಾಫಿಕ್ ಜಾಮ್. ಅದಕ್ಕೆ ನಮ್ಮ ಹೀರೋಗಳು ನಿಂತಿರುವ ಕಾರುಗಳ ಮೇಲೇ ನಡೆದು ತಮ್ಮ ಡ್ಯುಯಲ್ ಪ್ರಾರಂಭಿಸುತ್ತಾರೆ.

ಚಿತ್ರಕಥೆ ಬಹು ಅಸಂಬದ್ಧ. ಕ್ವಿಕ್‌ಗನ್ ಮುರುಗನ್ ಒಬ್ಬ ಕೌಬಾಯ್. ಅಂದರೆ ಗೋವುಗಳ ರಕ್ಷಣೆಗೆ ಟೊಂಕಕಟ್ಟಿ ನಿಂತಿರುವ ಶೂರ. ಇವನಿಗೆದುರಾಗಿರುವ ವಿಲನ್ ರೈಸ್‌ಪ್ಲೇಟ್ ರೆಡ್ಡಿ. ಈತನಿಗೆ ಮೆಕ್‌ದೋಸಾ ಎಂಬ ಗೋಮಾಂಸದ ದೋಸೆಯನ್ನು ತಯಾರಿಸಿ ಮಾರಾಟಮಾಡಿ ಖ್ಯಾತನಾಗಬೇಕೆಂಬ ಹಂಬಲ. ಸಸ್ಯಾಹಾರ ಮತ್ತು ಮಾಂಸಾಹಾರಗಳ ನಡುವಣ ಇವರ ಘೋರ ಕದನ ತಮಿಳುನಾಡಿನ ಒಂದು ಪುಟ್ಟಹಳ್ಳಿಯಲ್ಲಿ ಶುರುವಾಗಿ, ಸ್ವರ್ಗವನ್ನು ಹಾದು ಗಜಿಬಿಜಿಯ ಮುಂಬಯಿಯಲ್ಲಿ ಕ್ಲೈಮ್ಯಾಕ್ಸ್ ತಲುಪುತ್ತದೆ. ಗುಂಡಿನ ಕಾಳಗದಲ್ಲೊಮ್ಮೆ ವಿಲನ್ ಹೀರೋನ ಅತ್ತಿಗೆಯನ್ನು ಗುರಾಣಿಯಂತೆ ಬಳಸಲು ಉದ್ಯುಕ್ತನಾದಾಗ ನಮ್ಮ ಹೀರೋ 'ಲೀವ್ ದ ಲೇಡೀಸ್ ಐ ಸೇ' ಎಂದು ಕೂಗಿ ಗುಂಡು ಹಾರಿಸುವ ಚೇತೋಹಾರಿ ಸಂಭಾಷಣೆ ಸ್ಫೂರ್ತಿಯುತವಾಗಿತ್ತು. ಒಟ್ಟಿನಲ್ಲಿ ಮನಸ್ಸನ್ನು ಮುದಗೊಳಿಸಲು ಅತ್ಯಂತ ಪರಿಣಾಮಕಾರಿ ಸಾಧನ ಕ್ವಿಕ್‌ಗನ್ ಮುರುಗನ್.

ಈಚಿನ ದಿನಗಳಲ್ಲಿ ನಾನು ನೋಡಿದ ಒಂದು ಚೇತೋಹಾರಿ ನಾಟಕವೆಂದರೆ ಆಕ್ಸ್‌ಫರ್ಡ್ ಪ್ಲೇಹೌಸ್‌ನವರ ನಾಟಕ 'ಒನ್ ಸ್ಮಾಲ್ ಸ್ಟೆಪ್.' ರಂಗಶಂಕರದಲ್ಲಿ ಪ್ರಯೋಗಗೊಂಡ ಈ ನಾಟಕದಲ್ಲಿ ಕೇವಲ ಇಬ್ಬರು ಪಾತ್ರಧಾರಿಗಳು. ನಾಟಕದ ಪ್ರಾರಂಭಕ್ಕೆ ಮುಂಚೆ ನಾಟಕದ ರಂಗಭೂಮಿಯಲ್ಲಿ ಸಾಮಾನ್ಯ ದಿನಬಳಕೆ ವಸ್ತುಗಳನ್ನು ಅಸ್ತವ್ಯಸ್ತವಾಗಿ ಹರಡಿದ್ದರು. ಇದೇನಪ್ಪಾ ಅಂತ ಆತಂಕ ಗೊಳ್ಳುತ್ತಿದ್ದಾಗಲೇ ದೀಪಗಳೆಲ್ಲಾ ಆರಿ ನಾಟಕ

ಶುರುವಾಗಿಯೇ ಬಿಟ್ಟಿತು. ಐವತ್ತರ ದಶಕದ ಉತ್ತರಾರ್ಧದಲ್ಲಿ ರಷ್ಯಾ ಉಡಾಯಿಸಿದ ಸ್ಪುಟ್ನಿಕ್‌ನಿಂದ ಪ್ರಾರಂಭವಾಗಿ, ಅರವತ್ತೊಂಭತ್ತರಲ್ಲಿ ನೀಲ್ ಆರ್ಮ್‌ಸ್ಟ್ರಾಂಗ್ ಚಂದ್ರನ ಮೇಲೆ ತಮ್ಮ ಮೊದಲ ಹೆಜ್ಜೆ ಇಡುತ್ತಾ 'ಒನ್ ಸ್ಮಾಲ್ ಸ್ಟೆಪ್ ಫಾರ್ ಎ ಮ್ಯಾನ್..' ಎಂಬ ಹೇಳಿಕೆ ನೀಡುವ ವರೆಗಿನ ಚಾರಿತ್ರಿಕ



ಘಟನೆಗಳು ನಾಟಕದ ಕಥಾವಸ್ತು. ಹೆಚ್ಚುಗಾರಿಕೆಯೆಂದರೆ ನಾಟಕದ ಪಾತ್ರಧಾರಿಗಳು (ರಾಬಿನ್ ಹೆಮ್ಮಿಂಗ್ಸ್ ಮತ್ತು ಆಲಿವರ್ ಹಾಲಿಸ್) ರಂಗದ ಮೇಲೆ ಹರಡಿದ್ದ ದಿನಬಳಕೆ ವಸ್ತುಗಳ ರಾಶಿಯನ್ನು ಹೆಕ್ಕಿ, ಉಪಗ್ರಹದಿಂದ ಹಿಡಿದು ರಾಕೆಟ್ ಉಡಾಣದ ವರೆಗೆ ಎಲ್ಲ ದೃಶ್ಯಗಳನ್ನು ಬಹು ಪರಿಣಾಮಕಾರಿಯಾಗಿ ಹಿಡಿದಿಟ್ಟ ಚಾತುರ್ಯ ನಿಜಕ್ಕೂ ಬಹಳ ಖುಷಿಕೊಟ್ಟಿತು.

ಸಿನಿಮಾ, ನಾಟಕ ಇವುಗಳನ್ನು ನೋಡಿ ಖುಷಿಪಟ್ಟಮೇಲೆ ಒಂದು ಪಾಪಪ್ರಜ್ಞೆ ನನ್ನನ್ನು ಕಾಡಲು ಪ್ರಾರಂಭಿಸಿತು. ದೇಶದಲ್ಲಿ ಇಷ್ಟೆಲ್ಲಾ ಭ್ರಷ್ಟಾಚಾರ, ಅನಾಚಾರ ಇವುಗಳು ತುಂಬಿರುವಾಗ ಒಬ್ಬ ಸಾಮಾನ್ಯ ಪ್ರಜೆಯ ಜವಾಬ್ದಾರಿ ಏನಿರಬೇಕು? ನಮ್ಮ ಕೈಲಾದಮಟ್ಟಿಗೆ ಈ ಭ್ರಷ್ಟಾಚಾರದ ವಿರುದ್ಧ ಹೋರಾಡುವ ಬದಲು, ನಾಟಕ, ಸಿನಿಮಾ ಅಂತ ಕೂತರೆ ಅದು ಪಲಾಯನವಾದಿ ಹಾದಿಯಾಗುವುದಿಲ್ಲವೇ ಎಂಬ ಆತಂಕ ನನ್ನನ್ನು ಸ್ವಲ್ಪ ಮಟ್ಟಿಗೆ ಆವರಿಸಿಕೊಂಡಿತು. ಆಮೇಲೆ ಸರಿಹೋಯಿತು ಅನ್ನಿ.

**ಶಿವಕುಮಾರ್**

---

## ಕರೆ

ಒಂದು ಪರೀಕ್ಷೆ ಬರೆಯಲು ಬೇಕಾದ ಕಾಗದ ತಯಾರಿಸಲು ೧೫ ಮರಗಳನ್ನು ಕತ್ತರಿಸಬೇಕಾಗಿ ಬರುತ್ತದೆ ಎಂದು ಅಂದಾಜಿಸಲಾಗಿದೆ.

ಆದುದರಿಂದ,

**ಮರಗಳನ್ನು ಉಳಿಸಿ, ವೃಕ್ಷ ಸಂಪತ್ತನ್ನು ಉಳಿಸುವ ಅಭಿಯಾನದಲ್ಲಿ ಪಾಲ್ಗೊಳ್ಳಿ, ಹಾಗೂ ಪರೀಕ್ಷೆಗಳನ್ನು ವಿರೋಧಿಸಿ.**

# ಪಡುಕೋಣೆ ರಮಾನಂದರಾವ್ ಸ್ಮಾರಕ
# ನಗೆಲೇಖನ ಸ್ಪರ್ಧೆ - 2010

## ಬಹುಮಾನಿತರು

**ಮೊದಲನೇ ಬಹುಮಾನ**

**ಆಪ್ತರಕ್ಷಕಿ** – ಚಂಚಲಾ ವೇಣು, ಮೈಸೂರು
179, 4ನೇ ಕ್ರಾಸ್, ಕಂದಾಯ ನಗರ,
1ನೇ ಹಂತ, ಶ್ರೀರಾಂಪುರ 2ನೇ ಹಂತ,
ಮೈಸೂರು – 560 023

**ಎರಡನೇ ಬಹುಮಾನ**

**ಪ್ಯಾಕೇಜ್** – ಹೆಚ್.ಕೆ. ಅಂಬಿಕಾ, ಬೆಂಗಳೂರು
19/1, 4ನೇ ಮುಖ್ಯರಸ್ತೆ, 9ನೇ ಕ್ರಾಸ್,
ಎನ್.ಆರ್. ಕಾಲೋನಿ,
ಬಸವನಗುಡಿ, ಬೆಂಗಳೂರು – 560 019

**ಮೂರನೇ ಬಹುಮಾನ**

**ಸೈತಾನ್ ಮೇಷ್ಟ್ರು** – ಹೆಚ್.ಎನ್. ನಟರಾಜು
766/ಎ, 6ನೇ ಅಡ್ಡರಸ್ತೆ,
ದಿವಾನರ ಪಾಳ್ಯ, ಎಂ.ಎಸ್.ಆರ್.ಐ.ಟಿ. ಅಂಚೆ,
ಬೆಂಗಳೂರು – 560 054

ತೀರ್ಪುಗಾರರು

**ಪ್ರೊ.ಜಿ. ಅಶ್ವತ್ಥನಾರಾಯಣ**



# ಪಡುಕೋಣೆ ರಮಾನಂದರಾವ್‌ರವರ
# ನಗೆಲೇಖನ ಸ್ಪರ್ಧೆ - 2010

## ತೀರ್ಪುಗಾರರ ಅನಿಸಿಕೆಗಳು

ಕೊರವಂಜಿ-ಅಪರಂಜಿ ಟ್ರಸ್ಟ್‌ನವರು ಪಡುಕೋಣೆ ರಮಾನಂದರಾಯರ ಹೆಸರಿನಲ್ಲಿ ಪ್ರತಿವರ್ಷವೂ ನಗೆಲೇಖನ ಸ್ಪರ್ಧೆ ಏರ್ಪಡಿಸುತ್ತಿರುವುದು ಶ್ಲಾಘನೀಯ. ನಮ್ಮ ನಾಡಿನಲ್ಲಿ ಹಾಸ್ಯಬರಹಗಾರರಿಗಾಗಿ ಹಾಸ್ಯಲೇಖನ - ಗ್ರಂಥಗಳಿಗಾಗಿ ಇರುವ ಪ್ರಶಸ್ತಿ - ಬಹುಮಾನಗಳು ತೀರಾಕಮ್ಮಿ. ಹಾಸ್ಯ ಬರಹಗಾರರೂ ಸಾಕಷ್ಟಿಲ್ಲ. ಇರುವ ಹಾಸ್ಯ ಬರಹಗಾರರಲ್ಲಿ ಪ್ರಸಿದ್ಧರನ್ನು ಬಿಟ್ಟರೆ ಉದಯೋನ್ಮುಖ ಬರಹಗಾರರಿಗೆ ಪ್ರೋತ್ಸಾಹ ಸಾಲದು.

2010ರ ಸಾಲಿನ ಪಡುಕೋಣೆ ರಮಾನಂದರಾಯರ ನಗೆಲೇಖನ ಸ್ಪರ್ಧೆಗೆ 30 ಲೇಖನಗಳು ಬಂದಿದ್ದವು. ಇವುಗಳಲ್ಲಿ ಬಹುತೇಕ ಸಾಮಾಜಿಕ ಪ್ರಬಂಧಗಳು ಆಗಿದ್ದವು. ನಗೆಬರಹಗಳು ಆಗಿರಲಿಲ್ಲ. ಭಾಷೆ ಮತ್ತು ವಸ್ತುನಿರೂಪಣಾ ವೈಖರಿಯಲ್ಲಿ ನಗೆ ಚಿಮ್ಮಬೇಕೆಂಬುದಕ್ಕೆ ಲೇಖಕರು ಬಹುಮಂದಿ ವಿಶೇಷ ಗಮನಕೊಟ್ಟಿಲ್ಲ. ನಮ್ಮ ಹಿರಿಯ ಹಾಸ್ಯಲೇಖಕರ ಕೃತಿಗಳನ್ನು ಇವರಲ್ಲಿ ಬಹುಮಂದಿ ಅಭ್ಯಾಸ ಮಾಡಿಲ್ಲವೆಂದು ಕಂಡಿತು.

ಸ್ಪರ್ಧೆಗೆ ಲೇಖನ ಕಳಿಸಿರುವವರಲ್ಲಿ ಪ್ರಸಿದ್ಧ ಲೇಖಕರು, ಮಹಿಳೆಯರು, ವಿದ್ಯಾರ್ಥಿಗಳು ಇದ್ದಾರೆ. ಬೆಂಗಳೂರಿನ ಲೇಖಕರೇ ಹೆಚ್ಚಾಗಿದ್ದಾರೆ. ನಾಡಿನ ಎಲ್ಲಾ ಭಾಗಕ್ಕೂ ಸ್ಪರ್ಧೆಯ ಪ್ರಕಟಣೆ ತಲುಪಿಲ್ಲವೇನೋ ಎನ್ನಿಸಿತು. ಅಥವಾ ಲೇಖಕರೇ ಈ ಸ್ಪರ್ಧೆಗೆ ಗಮನವಿತ್ತಿಲ್ಲವೇನೋ! ಬಹುಮಂದಿ ಲೇಖಕರಿಗೆ ಪ್ರಬಂಧಕ್ಕೂ ಹಾಸ್ಯಲೇಖನಕ್ಕೂ ವ್ಯತ್ಯಾಸ ತಿಳಿದಿಲ್ಲ. ಸ್ಪರ್ಧೆಯ ನಿಯಮಾವಳಿಯಲ್ಲಿ ಹಾಸ್ಯಲೇಖನ ಸ್ಪರ್ಧೆ ಎಂಬುದಕ್ಕೆ ಒತ್ತು ನೀಡಬೇಕು. ಒಬ್ಬ ವಿದ್ಯಾರ್ಥಿಯ ಹಾಗೂ ನುರಿತ ಲೇಖಕ, ಅಥವಾ ಪ್ರಸಿದ್ಧ ಲೇಖಕನ ಬರಹವನ್ನೂ ಒಂದೇ ತಕ್ಕಡಿಯಲ್ಲಿ ತೂಗಬಾರದು. ಆದಕಾರಣ, ಸ್ಪರ್ಧೆಯಲ್ಲಿ ವಿದ್ಯಾರ್ಥಿಗಳಿಗೆ, ಮಹಿಳೆಯರಿಗೆ, ಪುರುಷರ ಲೇಖನಗಳಿಗೆ ಪ್ರತ್ಯೇಕ ಬಹುಮಾನಗಳು ಇರುವುದು ಒಳ್ಳೆಯದು. ಉದಯೋನ್ಮುಖ ಲೇಖಕರಿಗೂ ಪ್ರೋತ್ಸಾಹಿಸುತ್ತಾರೆ. ಸ್ಪರ್ಧೆಯಲ್ಲಿ ಭಾಗವಹಿಸಿದವರೆಲ್ಲರಿಗೂ ಅಭಿನಂದನೆಗಳು ಬಹುಮಾನಿತರಿಗೆ ವಿಶೇಷ ಅಭಿನಂದನೆಗಳು.

ದಿನಾಂಕ : 29-11-2010 — ಪ್ರೊ. ಜಿ. ಅಶ್ವತ್ಥನಾರಾಯಣ

ಸ್ಥಳ : ಬೆಂಗಳೂರು — (ತೀರ್ಪುಗಾರರು, ಬೆಂಗಳೂರು)

# ಆಪ್ತರಕ್ಷಕಿ

• *ಚಾಂಚಾಲ ವೇಣು*

**ಮ**ಡದಿ ನಾಗೂ ಬಿಸಿಬೇಳೆಬಾತ್ ಮಾಡುವುದರಲ್ಲಿ ಸಿಕ್ಕಾಪಟ್ಟೆ ಪ್ರವೀಣೆ. ಅವಳದನ್ನು ಮಾಡುತ್ತಿದ್ದರೆ ಮುಂದಿನ ಬೀದಿವರೆಗೂ ಅದರ ಘಮಲು ಹರಡುತ್ತಿತ್ತು. ಅದನ್ನು ಗಡದ್ದಾಗಿ ತಿಂದು ಬರೆಯಲು ಕುಳಿತರೆ ತೂಕಡಿಕೆ ಬಿಟ್ಟು ಬೇರೇನೂ ಬರುವುದಿಲ್ಲ. ಸಾಹಿತಿಗಳು ಹೊಟ್ಟೆ ತುಂಬಾ ತಿಂದು ಬರೆಯುವದಕ್ಕೆ ಕುಳಿತುಕೊಳ್ಳಬಾರದು. ಈಗ ನನಗಾದದ್ದೂ ಅದೇ. ಬರೆಯುವ ಮನಸ್ಸಿದ್ದರೂ ಕಣ್ಣು ಹೊಟ್ಟೆಭಾರಕ್ಕೆ ಮುಚ್ಚಿಕೊಳ್ಳುತ್ತಿತ್ತು. ಪೆನ್ನು ಕೈನಿಂದ ಜಾರುತ್ತಿತ್ತು. ಹೋಗಲಿ ಅರೆಗಳಿಗೆ ಮಲಗಿ ಎದ್ದು ಬರೆಯೋಣ ಎಂದುಕೊಳ್ಳುವಾಗಲೇ ಹೊರಗಡೆ ''ಸಾಯಿತಿ ಹೊಲಸು ರಾವ್ ಅವರು ಮನೆಯಾಗವ್ರಾ?'' ಎಂಬ ದನಿ ಕೇಳಿಸಿತು. ಆ ನುಡಿಗೆ ಬೆಚ್ಚಿಬಿದ್ದೆ. ಸಾಹಿತಿ ಶಬ್ದ ಕಿವಿಗಿಂಪಾಗಿದ್ದರೂ ಹೊ.ಲ.ಸು. (ಹೊಳೆನರಸೀಪುರದ ಲಕ್ಷ್ಮೀಶನ ಮಗ ಸುಬ್ಬರಾಯ) ಕರ್ಣಕಠೋರವಾಗಿ ಇರಿಯಿತು. ಕೂಡಲೇ ಎದ್ದುಬಂದೆ. ಇಲ್ಲದಿದ್ದರೆ ಮತ್ತಷ್ಟು ಜೋರಾಗಿ ಕರೆದುಬಿಟ್ಟಾರು. ಇಲ್ಲಿ ತಪ್ಪು ಅವರದಾಗಿರಲಿಲ್ಲ ಮನೆಮುಂದು ಈ ರೀತಿ ಬೋರ್ಡ್ ಹಾಕಿತ್ತು. ನಾಮಫಲಕಗಳು ಕನ್ನಡದಲ್ಲೇ ಇರಬೇಕೆಂಬ ಅಭಿಮಾನದಿಂದ ಹೆಚ್.ಎಲ್.ಎಸ್. ರಾವ್ ಬದಲು ಹೊ.ಲ.ಸು. ರಾವ್ ಎಂದು ಹಾಕಿದ್ದು ಈ ರೀತಿ ಅನರ್ಥಕ್ಕೀಡು ಮಾಡುತ್ತಿತ್ತು. ಅದನ್ನು ಬದಲಾಯಿಸಲೋ ಬೇಡವೋ ಎಂಬ ಗೊಂದಲದಲ್ಲಿ ಸಿಕ್ಕು ಹಾಗೇ ಬಿಟ್ಟಿದ್ದೆ.

ಹೊರಗಡೆ ನಾಲ್ಕು ಜನ ದಾಂಢಿಗರು ನಿಂತಿದ್ದರು, ಒಳ್ಳೆಯ ಕಟ್ಟುಮಸ್ತಾದ ಯುವಕರು, ನನ್ನಂತಹ ನರಪೇತಲ ಸಾಹಿತಿಯನ್ನು ಹುಡುಕಿ ಬರವು ಅಗತ್ಯ ಅನಿವಾರ್ಯತೆ ಅವರುಗಳಿಗೇನಿತ್ತೋ? ಅಥವಾ ಯಾವುದಾದರೂ ಚಂದಾ ವಸೂಲಿಯಿರಬಹುದೇ ಅಥವಾ ಏನಾದರೂ ದರೋಡೆಗೆ ಸಂಚು ಹಾಕಿ ಬಂದಿದ್ದರೆ... ನಗು ಬಂತು ನನ್ನಂತಹ ಬಡ ಸಾಹಿತಿ ಮನೆಯಲ್ಲಿ ಏನು ಅಮೂಲ್ಯವಾದದ್ದು ಸಿಗುತ್ತೆ ಒಂದಷ್ಟು ಸ್ಮರಣ ಫಲಕ, ಶಾಲು, ಗಂಧದಹಾರ ಸಿಕ್ಕೀತು.

''ನಂಸ್ಕಾರ ಸಾ..'' ಎಂದ ದಢೂತಿ ದಾಂಡಿಗ, ನನ್ನನ್ನು ಮೆಲ್ಲಗೆ ಪಕ್ಕಕ್ಕೆ ಸರಿಸುತ್ತಾ ಒಳಗೆ ನುಗ್ಗಿದ.

''ನಮಸ್ಕಾರ ಯಾರು ಏನು?'' ಎನ್ನುವಷ್ಟರಲ್ಲಿ ಅವರೆಲ್ಲಾ ಒಳನುಗ್ಗಿ ವರಾಂಡದಲ್ಲಿನ ಪ್ಲಾಸ್ಟಿಕ್ ಚೇರ್‌ನಲ್ಲಿ ಕುಳಿತಾಗಿತ್ತು.

''ನಿಮ್ ಎಸ್ರು ಬಾಳಾ ಕೇಳಿವ್ನಿ ಸಾ... ಕತೆ ಕವನಗೋಳ್ನೂ ಓದಿವ್ನಿ. ಬಾಳಾ ಐಕ್ಲಾಸಾಗೆ ಬರೀತೀರಾ ಸಾ..'' ಎಂದ ಮತ್ತೊಬ್ಬ ದಾಂಡಿಗ, ಇವರು ನನ್ನ ಅಭಿಮಾನಿಗಳೇನೋ ಎಂಬ ಸಂದೇಹ ಮೂಡಿತು.

''ನನ್ನೆಸ್ರು ಯೀರಬದ್ರ ಅಂತ ಸಾ, ವುದಯೋನ್ಮುಕ ಸಾಯಿತಿ, ಒಂದಿಪ್ಪತ್ತು ಕತೆಗೋಳ್ನ ಬರೆದಿವ್ನಿ ಸಾ ನಿಮ್ಮಂಗೇ... ಎಲ್ಲೂ ಪೇಪರ್ನಾಗೆ ಪಬ್ಲಿಸಾಗಿಲ್ಲ.. ಅದ್ಕೆ ಅವನ್ನೆಲ್ಲಾ ಸೇರಿಸ್ ಬುಟ್ಟು ಒಂದು ಕತಾ ಸಂಕಲ್ನ ತರೂವಾ ಅಂತ ಯೋಚ್ನೆ ಮಾಡ್ಕೋಂಡು ಬಂದಿವ್ನಿ ಸಾ..'' ಎಂದ ವೀರಭದ್ರನೆಂಬ ದಡಿಯ.

''ಅದಕ್ಕೆ ನೀವೇ ಮುನ್ನುಡಿ ಬರ್ಕೊಡಬೇಕು ಸಾ..'' ಇನ್ನೊಬ್ಬ ದಾಂಢಿಗ ಹೇಳಿದ. ಅದು ಬೇಡಿಕೆಯೋ ಬೆದರಿಕೆಯೋ ಗೊತ್ತಾಗಲಿಲ್ಲ.

''ನೋಡಿ ಸಾ, ಇವೇ ಆ ಕತೆಗೋಳು..'' ಎನ್ನುತ್ತಾ ವೀರಭದ್ರ ನನ್ನೆದುರು ಅಷ್ಟು ಹಾಳೆಗಳನ್ನು ಸುರುವಿದ. ಒಂದೆರಡು ಹಾಳೇ ಕೈಗೆತ್ತಿಕೊಂಡು ಹಾಗೇ ಕಥೆಗಳತ್ತ ಕಣ್ಣುಹಾಯಿಸಿದೆ. ನನ್ನ ಹೃದಯದ ಬಡಿತವೆ ನಿಂತಂತಾಯ್ತು. ತೀರಾ ಬಾಲಿಶ ಬರಹಗಳು. ಏನು ಬರಹವದು ಎಂಬುದೇ ಗೊತ್ತಾಗದಂತಿತ್ತು. ಕನ್ನಡವ್ರೋ ತೆಲುಗೋ ಮಲೆಯಾಳಿ ಭಾಷೆಯೋ ಎಂಬುದೇ ಗೊತ್ತಾಗದೆ ಕಣ್ಣು ಬಿಡುವಂತಾಯ್ತು. ಕಷ್ಟಪಟ್ಟು ಎರಡು ಸಾಲು ಓದಿದೆ. ಕನ್ನಡ ಭಾಷೆಯೇ, ಕಾಗುಣಿತಗಳ ಅಧ್ವಾನದಿಂದ ತುಂಬಿ ಹೋಗಿತ್ತು. ಕಥೆಗಳನ್ನು ಬರೆಯುವ ಅಭಿರುಚಿ ಅವನಲ್ಲಿರಲಿಲ್ಲ, ಹಸಿಹಸಿಯಾದ ಪದಗಳು, ಒಂದು ಸೊಂಪು, ಸೊಗಡು, ಪದ ಲಾಲಿತ್ಯ, ಸಾರ, ಕಥಾ ವಸ್ತು, ರಚನಾ ಶೈಲಿ, ಒಂದೂ ಸರಿಯಿರಲಿಲ್ಲ ಹಾಗೆಂದರೇನೆಂದು ಬಹುಶಃ ಅವನಿಗೇ ಗೊತ್ತಿರಲಿಕ್ಕಿಲ್ಲ, ಸಣ್ಣ ಮಗು ಬರೆದಂತಿತ್ತು. ಎಲ್ಲಾ ತೀರಾ ಎಳಸು.. ಇದನ್ನಾರು ಕತೆಗಳೆಂದು ಕರೆಯುತ್ತಾರೆ. ಆದರೆ ಹಾಗೆಂದು ಹೇಳಲಾದೀತೆ.

''ಯಾವ ಪತ್ರಿಕೆಗಳಲ್ಲೂ ಪ್ರಕಟವಾಗಿಲ್ಲವೇನಪ್ಪಾ?'' ಕೇಳಿದೆ ವೀರಭದ್ರನನ್ನು

''ಇಲ್ಲಾ ಸಾ.. ಕಳಿಸಿದ್ದೆ ಆದ್ರೆ ಎಲ್ಲ ವಾಪ್ಸು ಕಳಿಸ್ ಬುಟ್ರು.. ಅದ್ಕೇ ಮ್ಯಾಗಜಿನ್ ಗೋಳ ಸಾವಾಸವೇ ಬ್ಯಾಡಾಂತ ನಾನೇ ಪುಸ್ಕಾ ಪ್ರಿಂಟ್ ಆಕಿಸ್ತಿದೀನಿ ಸಾ. ಅದ್ಕೇ ನೀವೇ ಮುನ್ನುಡಿ ಬರೆದುಬುಡಿ ಸಾ..'' ಎಂದ ಸಲೀಸಾಗಿ.

ನನ್ನೆದೆ ಧಸಕ್ಕೆಂದಿತು, ಅಲ್ಲ ನಾನು ಈ ಪುಸ್ತಕಕ್ಕೆ ಮುನ್ನುಡಿ ಬರೆಯಬೇಕೆ? ಇಂತಹಾ ಕತೆಗಳನ್ನು ಮೆಚ್ಚಿ ನಾನು ಮುನ್ನುಡಿ ಬರೆದರೆ ನನ್ನ ಅಭಿರುಚಿ ಎಷ್ಟು ಕೀಳುಮಟ್ಟದ್ದೆಂದು ಎಲ್ಲರಿಗೂ ಗೊತ್ತಾದೀತು, ನನ್ನ ಗೌರವಕ್ಕೂ ಕುಂದು.

''ರಾಜ್ಯೋಸ್ತವದ ದಿನಾ ಪುಸ್ತಕ ಬಿಡುಗಡೆ ಇಟ್ಕಂಡಿದೀವಿ ಸಾ.. ನೀವೇ ಅದ್ಯಕ್ಸರಾಗಿ ಬಂದು ಪುಸ್ತಕ ಬಿಡುಗಡೆ ಮಾಡಿ ಕತೆಗೋಳ್ ಬಗ್ಗೆ ನಾಲ್ಕು ವೊಳ್ಳೆ ಮಾತಾಡ್ ಬೇಕು. ಅಂಗೇ ನಮ್ ಯೀರಬದ್ರೂ ಬೆನ್ನು ತಟ್ಟಿ ಮತ್ತಷ್ಟು ಬರೆಯೋ ಅಂಗೆ ಪ್ರೋತ್ಸಾಹ ಕೊಟ್ಟು ಅವನ್ ಎಸ್ರು ಪ್ರಸಿದ್ಧಿಗೆ ಬರೋ ಅಂಗೆ ಮಾಡಬೇಕು ಸಾ..'' ಎಂದ ಕರ‍್ರಗಿನ ದಾಂಢಿಗ.

ಎಂತಹ ಕಬಂಧ ಬಾಹುವಿನಲ್ಲಿ ಸಿಕ್ಕಿಹಾಕಿಕೊಂಡಿದ್ದೇನೆ ಎಂದು ಅರಿವಾಯಿತು.

ಉಪಾಯವಾಗಿ ತಪ್ಪಿಸಿಕೊಳ್ಳುವ ಸಬೂಬು ಹೇಳಿದರೂ ಅವರುಗಳು ಯಾವುದಕ್ಕೂ ಜಗ್ಗಲಿಲ್ಲ.

''ಇಲ್ಲಪ್ಪಾ ನಾನೀಗ ಬರೆಯೋದನ್ನೇ ಬಿಟ್ಟುಬಿಟ್ಟಿದೀನಿ.. ಕಣ್ಣೂ ಸರಿಯಾಗಿ ಕಾಣಿಸೋದಿಲ್ಲಾ..''

''ಅದೆಂಗ್ ಸಾ ಆಗಾಕಿಲ್ಲಾ ಅಂತೀರಾ ವುದಯೋನ್ಮುಖ ಖನ್ನಡ ಸಾಯಿತಿಗೋಳ್ನ ಎನ್ಕರೇಜ್ ಮಾಡೋದು ನಿಂ ಕರ್ತವ್ಯಾ ಅಲ್ವಾ..'' ಎಂದ ಇನ್ನೊಬ್ಬ, ಸ್ನೇಹಿತರೋ ಬಾಡಿಗೆ ಗೂಂಡಾಗಳೋ ನನಗೆ ಸಂದೇಹ ಬಂತು.

ಇನ್ನೊಬ್ಬ ಹೇಳಿದ ''ನಿಮ್ಮಂಗೇ ಇನ್ನೂ ನಾಲ್ಕೈದು ಸಾಯಿತಿಗಳೂ ಆಗಾಕಿಲ್ಲಾ ಅಂದ್ಬುಟ್ರು. ಅದ್ಕೆ ನಿಮ್ ತಾವ ಬಂದೋ.. ನೀವೂ ಇಂಗಂದ್ಬುಟ್ರೆ ನಮ್ ಯೀರಬದ್ರು ಕತೆಗೋಳ್ಗೆ ಅವ್ಮಾನ ಮಾಡಿದಂಗ್ ಆಯ್ತದೆ.. ನೀವು ಈಗ ಒಪ್ಕಳ್ಳೇಬೇಕು ಸಾ..''

ನನ್ನ ಸೋತ ಮುಖ ಕಂಡು ಅವರು ನಾನು ಒಪ್ಪಿದರೆ ಎಂದು ತಿಳಿದರು.

ಈರಭದ್ರ ಮತ್ತೆ ಮೆಲ್ಲನೆ ಹೇಳಿದ –

''ಅಂಗೇ ಒಂದ್ ಪುಸ್ತಕಕ್ಕೆ ಇನ್ನೂರು ರೂಪಾಯಿ ಬೆಲೆ ಇಟ್ಟಿವ್ನಿ ಸಾ.. ನೀವು ಒಂದಿನ್ನೂರು ಪುಸ್ತಕಾ ಮಾರಿಸ್ಕೋಟ್ಟು ಬುಡಿ ಸಾ..''

ನಾನೀಗ ನಿಜಕ್ಕೂ ಚಳಿ ಬಂದವರಂತೆ ನಡುಗಿದೆ, ಕೈ ಕಾಲು ಆಡದಂತಾಯ್ತು, ತಲೆ ತಿರುಗಲು ಶುರುವಾಯ್ತು, ಇವನ ಈ ಪುಸ್ತಕಗಳನ್ನು ನಾನು ಮಾರಿಸಿಕೊಡಬೇಕೆ. ಇದೆಲ್ಲಿಯ ಕರ್ಮ ನನಗೆ, ಇಂದು ಯಾವ ಮಗ್ಗುಲಲ್ಲಿ ಎದ್ದೆನೋ? ಆದರೂ ಹೇಳಿದೆ.

''ಇಲ್ಲಾಪ್ಪ. ಇಂಥಾವೆಲ್ಲಾ ನಾನು ಮಾಡಾಕ್ಕಾಗಲ್ಲಾ.. ನನಗೂ ವಯಸ್ಸಾಯ್ತು.. ಹೊರಗಡೆ ಓಡಾಡೋ ಶಕ್ತಿಯಿಲ್ಲ.. ಬೇರೆ ಯಾರನ್ನಾದರೂ ನೋಡಿಕೊಳ್ಳೀ..'' ಎಂದರೂ ಅವರು ಜಗ್ಗಲಿಲ್ಲ.

''ಇಲ್ಲಾ ಸಾ.. ನೀವು ಆಗಾಕಿಲ್ಲ ಅಂತ ಯೋಳ್ಬೇ ಬ್ಯಾಡಿ.. ನೀವು ಒಪ್ಕಂಡ್ ಬುಟ್ರೆ ಒಳ್ಳೇದಾಯ್ತದೆ' ಎಂದ ಈರಭದ್ರ ತುಸು ಅಧಿಕಾರಯುತ ದನಿಯಲ್ಲಿ.

''ಅದೆಂಗ್ ಒಪ್ಕಳಾಕಿಲ್ಲ.. ಒಪ್ಕಳ್ಳೇಬೇಕು ಯಾಕೇಂದ್ರೆ ಇವರ್ಮನೆ ಒಂಟಿಯಾಗದೆ ಸುತ್ತಮುತ್ತ ಬ್ಯಾರೆ ಮನೆಗಳೂ ಇಲ್ಲ.. ಬಡ್ಕಂಡ್ರೂ ಯಾರಿಗೂ ಕೇಳಾಕಿಲ್ಲ'' ಎಂದ ಕರೀ ದಾಂಢಿಗ, ಮೆಲ್ಲಮೆಲ್ಲನೆ ಬೆದರಿಕೆ ಶುರುವಾಗಿತ್ತು. ನನ್ನ ಸುತ್ತಲೂ ಅವರು ಬಂದು ನಿಂತುಬಿಟ್ಟರು. ಅವರುಗಳ ಮಧ್ಯದಲ್ಲಿ ನಾನು ಬೆದರಿದ ಗುಬ್ಬಿ ಮರಿಯಂತೆ ಮುದುರಿ ಕುಳಿತಿದ್ದೆ. ಇದ್ಯಾವ ಶನಿ ವಕ್ಕರಿಸಿತು ಎಂದು ಶಪಿಸುತ್ತಾ ಕುಳಿತೆ. ಯಾವ್ಯಾವ ದೇವರುಗಳೋ ನೆನಪಿಗೆ ಬಂದು ಮನದಲ್ಲೇ ಕೈ ಮುಗಿದೆ. ತೊಡೆಗಳಲ್ಲಿ ಆಗಲೇ ನಡುಕ ಶುರುವಾಗಿತ್ತು. ಮೊದಲು ಮನೆ ಮುಂದಿದ್ದ ಸಾಹಿತಿ ಎನ್ನುವ ಫಲಕ ತೆಗೆಸಿಬಿಡುತ್ತೇನೆ ಎಂದು ಆಗಲೇ ತೀರ್ಮಾನಿಸಿಬಿಟ್ಟಿದ್ದೆ.

ಒಂದು ಸಮಯ ಮುನ್ನುಡಿ ಬರೆಯಲು ಒಪ್ಪಿಕೊಂಡರೂ ಪುಸ್ತಕದ ಮಾರಾಟ ನನ್ನಿಂದ ಸಾಧ್ಯವಿಲ್ಲದ ಮಾತಾಗಿತ್ತು. ಈಗ ಹಾಗೆ ಆಗೊಲ್ಲಾ ಎಂದರೆ ಕೈಕಾಲು ಮುರಿಯಲು

ಸಿದ್ಧರಿದ್ದೇವೆ ಎನ್ನುವಂತಹ ಧ್ವನಿ ಅವರ ಮಾತುಗಳಲ್ಲಿತ್ತು. ನನ್ನನ್ನು ಒಪ್ಪಿಸಲೆಂದೇ ವೀರಭದ್ರ ಈ ಪುಂಡರನ್ನು ಕರೆತಂದಿದ್ದನೆಂದು ಗೊತ್ತಾಯ್ತು.

ಹಾಳಾಗಿ ಹೋಗಲಿ ಎಲ್ಲದಕ್ಕೂ ಒಪ್ಪಿ ಕೈಕಾಲು ಉಳಿಸಿಕೊಳ್ಳೋಣ ಎಂದುಕೊಂಡು ಅರಮನಸ್ಸಿನಿಂದ ಹೂಂಗುಟ್ಟಬೇಕು ಅಷ್ಟರಲ್ಲಿ –

''ಯಾರ್ರೀ ಅದು..'' ಮಡದಿ ನಾಗೂ ಅಡಿಗೆಮನೆಯೊಳಗಿನಿಂದ ಹೊರಬರುತ್ತಾ ಹೂಂಕರಿಸಿದಳು. ತರಕಾರಿ ಹೆಚ್ಚುತ್ತಿದ್ದಳೇನೋ ಕೈಲಿ ಹರಿತವಾದ ಚಾಕು ಬೇರೆ ಇತ್ತು. ನಾಗೂ ನನ್ನ ತರಹ ತೆಳುವೇನಲ್ಲ, ಇವರುಗಳಂತೆ ದಢೂತಿಯೇ, ಎತ್ತರ ದಪ್ಪ ಜೋರಾಗಿತ್ತು. ಅವಳನ್ನು ಕಂಡೊಡನೆ ಅವಳ ಶರೀರಕ್ಕೋ ಶಾರೀರಕ್ಕೋ ಈ ದಾಂಢಿಗರು ಬೆಚ್ಚಿಬಿದ್ದರು.

''ಯಾರ್ರೀ ಹೀಗೆ ಮನೆಯೊಳಗೆ ನುಗ್ಗಿದ್ದೀರ ನಡೀರ್ರೀ ಹೊರಗಡೆ..'' ಎಂದು ದನಿ ಎತ್ತರಿಸಿದಾಗ ಈರಭದ್ರ ಪಟಾಲಂ ಗಪ್ ಚುಪ್.

''ಮೇಡಂ..'' ಈರಭದ್ರ ಸಣ್ಣೆಯ ದನಿಯಲ್ಲಿ ಕರೆದ. ನಾಗೂ ''ಹೂಂ ಎಲ್ಲಾ ಕೇಳಿಸ್ಕೊಂಡೆ.. ಏನು ಸಾಹಿತಿಗಳೂ ಅಂದ್ರೆ ಏನು ಇಷ್ಟು ಅಗ್ಗ ಅಂತ ತಿಳಿದಿದ್ದಿರೇನು? ಏನು ನಿಮ್ಮ ಪುಸ್ತಕಕ್ಕೆ ಇವರು ಮುನ್ನುಡಿ ಬರೆಯಬೇಕೇನು.. ಹಾಗೆ ಬರೆಯಬೇಕೂಂತಿದ್ರೆ ಐದು ಸಾವಿರ ಎಣಿಸಿ ಒಂದು ವಾರದೊಳಗೆ ಬರೆಸಿಕೊಡ್ತೀನಿ..''

''ಮೇಡಂ..'' ತೊದಲಿದ, ಅವನ್ ಪಟಾಲಂ ಕಕ್ಕಾಬಿಕ್ಕಿಯಾಗಿ ನಿಂತುಬಿಟ್ಟಿತ್ತು.

''ಹೂಂ.. ಮತ್ತೆ ಇವರಿಗೇನು ಬೇರೆ ಕೆಲಸವಿಲ್ಲಾಂತ ತಿಳ್ಕೊಂಡ್ರಾ.. ಬೇಕಾದಷ್ಟು ಸಭೆ ಸನ್ಮಾನ ಅದೂ ಇದೂ ಅಂತ ಸದಾ ಬಿಜಿಯಾಗಿರ್ತಾರೆ. ನಿಮ್ಮ ಕಥೆಗಳೆಲ್ಲ ಓದಕ್ಕೆ ಅವರಿಗೆ ಬಿಡುವಿರಲ್ಲ, ಇನ್ನು ಪುಸ್ತಕ ಬೇರೆ ಮಾರಾಟ ಮಾಡಿಸ್ಕೊಡಿ ಅಂತ ಹೆದರಿಸ್ತೀರಾ. ಹುಷಾರು.. ಈ ಏರಿಯಾ ಎಸ್.ಐ. ನನ್ನ ತಂಗೀ ಗಂಡ. ಒಂದು ಫೋನ್ ಕಾಲ್ ಮಾಡಿದ್ರೆ ಸಾಕು ಐದು ನಿಮಿಷದಲ್ಲಿ ಬಂದು ಎಳ್ಕೊಂಡು ಹೋಗ್ತಾರೆ. ಏನ್ರೀ ಮನೆ ಹತ್ರ ಬಂದು ಗೂಂಡಾಗಿರಿ ಮಾಡ್ತೀರಾ.'' ನಾಗೂ ಬಾಯಿಂದ ಪಟಾಕಿ ಹೊಡೆದಂತೆ ಬಂದ ಮಾತುಗಳಿಗೆ ಈರಭದ್ರ ಪಟಾಲಂ ಕಂಗಾಲಾಗಿ ನಿಂತುಬಿಟ್ಟಿದ್ದರು. ಈರಭದ್ರನ ಮೈಯಿಂದ ಧಾರಾಕಾರವಾಗಿ ಬೆವರು ಸುರಿಯುತ್ತಿತ್ತು.

''ಹಾಗಲ್ಲಾ ಮೇಡಂ..'' ಈರಭದ್ರ ಏನೋ ತೊದಲಿದ.

''ಹಾಗೂ ಇಲ್ಲ ಹೀಗೂ ಇಲ್ಲ.. ನಮ್ಮನೇಲಿ ಯಾವಾಗ್ಲೂ ಲೋಡೆಡ್ ರಿವಾಲ್ವರ್ ಇರುತ್ತೆ ತಿಳಿದಿರಲಿ. ಮತ್ತೆ ಈ ಏರಿಯಾದಲ್ಲೇ ನೀವು ಕಾಣಿಸ್ಕೋಬಾರದು. ಕಂಡ್ರೆ ಗೊತ್ತಲ್ಲಾ ನನಗೆ ಭಯಾ ಅಂದ್ರೆ ಗೊತ್ತಿಲ್ಲಾ.. ನಡೀರ್ರಿ ಹೂಂ..'' ನಾಗೂವಿನ ಗಡಸು ದನಿಗೆ ಬೆಚ್ಚಿ ಬೆವರಿ ಈರಭದ್ರ ಮತ್ತವನ ಸಂಗಡಿಗರು ಅಂದು ತಿರುಗಿ ನೋಡದೆ ಹೋದವರು ಇನ್ನೂ ಕಂಡಿಲ್ಲ, ಅವನ ಪುಸ್ತಕವೂ ಬಿಡುಗಡೆಯಾದ ಹಾಗೆ ಕಾಣಲಿಲ್ಲ, ಈಗ ನಾಗೂ ಜೊತೆ ಇದ್ರೆ ನನಗೆ ಏನೋ ಧೈರ್ಯ, ಬಾಡಿಗಾರ್ಡ್ ಇದ್ದಂತೆ ನಿರಾಳವಾಗಿರ್ತೀನಿ.

*ಪಡುಕೋಣೆ ರಮಾನಂದರಾವ್ ಸ್ಮಾರಕ ಹಾಸ್ಯಲೇಖನ ಸ್ಪರ್ಧೆಯಲ್ಲಿ*
*ಎರಡನೇ ಬಹುಮಾನ ಪಡೆದ ಲೇಖನ*

# 'ಪ್ಯಾಕೇಜ್'

• *ಹೆಚ್.ಕೆ. ಅಂಬಿಕಾ*

**ಪ್ಯಾಕ್** ಎಂಬ ಆಂಗ್ಲ ಪದಕ್ಕೆ ತುಂಬು, ಕಟ್ಟು, ಒಪ್ಪವಾಗಿ ಅಡಕ ಮಾಡು ಎಂದೆಲ್ಲಾ ಕನ್ನಡಕ್ಕೆ ವ್ಯಾಖ್ಯೆ ಮಾಡಬಹುದಾಗಿದೆ. ಆದರೆ 'ಪ್ಯಾಕೇಜ್' ಎಂಬ ಪದದ ಮೂಲ ಪ್ಯಾಕ್ ಪದವೇ ಆಗಿದ್ದರೂ ಈ ಪದದ ವ್ಯಾಪ್ತಿ ತ್ರಿಲೋಕಗಳನ್ನೇ ಆವರಿಸುವಷ್ಟು ವಿಸ್ತಾರವಾಗಿದೆ. ಪ್ಯಾಕೇಜ್ ಯಾವುದೇ ವ್ಯವಸ್ಥೆಯಲ್ಲಿ ತಲೆತೂರಿಸಿದರೂ ಅದರ ಮುಖ್ಯೋದ್ದೇಶ ಇಷ್ಟೆ ಪ್ಯಾಕೇಜ್ ಎಂಬ ಕಂಬಳಿ ಅಡಿ ಬರುವವರಿಗೆಲ್ಲಾ ಒಂದಲ್ಲಾ ಒಂದು ಬಗೆಯ ರಿಯಾಯಿತಿ, ಸೌಲಭ್ಯ, ಸೌಕರ್ಯ, ಅನುಕೂಲತೆ, ಕಡಿಮೆದರದಲ್ಲಿ ಹೆಚ್ಚಿನ ಸವಲತ್ತುಗಳು ಹೀಗೆ ಒಂದು ಕಲ್ಲಿಗೆ ಹತ್ತಾರು ಹಕ್ಕಿಗಳನ್ನು ಹೊಡೆಯುವ ಭಾಗ್ಯ. ಉದಾಹರಣೆಗೆ ಪ್ರವಾಸಿ ಪ್ಯಾಕೇಜ್‌ಗಳಲ್ಲಿ ಊಟ, ತಿಂಡಿ, ವಸತಿಗಳೊಂದಿಗೆ ದೇವಸ್ಥಾನಗಳಲ್ಲಿ ದೇವರದರ್ಶನ, ಮ್ಯೂಸಿಯಂಗಳ, ಉದ್ಯಾನವನಗಳ ಭೇಟಿ, ಸ್ಮಾರಕಗಳ ದರ್ಶನ, ಅಮ್ಯೂಸ್‌ಮೆಂಟ್ ಪಾರ್ಕ್‌ಗಳ ಪ್ರವೇಶ ಹೀಗೆ ಎಲ್ಲೆಲ್ಲಿ ಕಾಸಿನಿಂದ ದರ್ಶನಗಳೋ ಅಲ್ಲೆಲ್ಲಾ ಈ ಪ್ಯಾಕೇಜ್ ತಲೆ ಹಾಕಿ ನೀವು ಜೇಬಿನಿಂದ ಕಾಸು ತೆಗೆಯುವುದನ್ನು ತಡೆಯುತ್ತದೆ. ಒಂದು ಬಾರಿ ಸಂಸ್ಥೆಯವರು ಹೇಳಿದಷ್ಟು ಹಣಕೊಟ್ಟರೆ ಮುಗಿಯಿತು ಮತ್ತೆಲ್ಲಾ ಪ್ಯಾಕೇಜ್‌ನಲ್ಲಿ ಉಚಿತ. ಪ್ರವಾಸಿ ಸಂಸ್ಥೆಯೊಂದು ಬನಾರಸ್ಸಿಗೆ ಯಾತ್ರಿಕರನ್ನು ಕೊಂಡೊಯ್ದಾಗ ಗಂಡಸರಿಗೆಲ್ಲಾ ಒಂದು ಕಾಶಿಚೌಕ ಮತ್ತೆ ಹೆಂಗಸರಿಗೆಲ್ಲಾ ಒಂದು ಪೀತಾಂಬರವನ್ನು ಪ್ಯಾಕೇಜಿನಲ್ಲಿ ಹಾಕಿದ್ದರಂತೆ!

ವ್ಯಾಪಾರ ವ್ಯವಹಾರಗಳಲ್ಲಿ ಪ್ಯಾಕೇಜ್ ತಲೆ ಹಾಕುವುದು ಈ ಕಾಲದಲ್ಲಿ ಸಹಜ. ಆದರೆ ಸರ್ಕಾರ ಯಾವ ಯಾವ ಬಗೆಯ ಪ್ಯಾಕೇಜ್‌ಗಳನ್ನು ಜನಕ್ಕೆ ನೀಡುತ್ತದೆ ಎಂದರೆ... ಅಭಿವೃದ್ಧಿಗಾಗಿ ರಸ್ತೆ ಅಗಲೀಕರಣದಲ್ಲಿ ಧೂಳೆದ್ದು ಹೋಗುವ ಮನೆ, ಕಟ್ಟಡಗಳ ಮಾಲೀಕರಿಗೊಂದು ಪ್ಯಾಕೇಜ್, ಬರಪೀಡಿತರಿಗೊಂದು ಪ್ಯಾಕೇಜ್ ಆದರೆ ಅತಿವೃಷ್ಟಿರೂಢಿತರಿಗೊಂದು ಪ್ಯಾಕೇಜ್, ನಕ್ಸಲ್ ಪೀಡೆಗಳಿಗೊಂದು ಪ್ಯಾಕೇಜ್, ಆದರೆ ನಕ್ಸಲ್‌ರಿಂದ ಪೀಡಿತರಾದವರಿಗೊಂದು, ಶರಣಾಗತರಾಗುವ ಉಗ್ರರಿಗೊಂದು ಪ್ಯಾಕೇಜ್ ಆದರೆ ಅವರಿಂದ ಭೀತರಾದವರಿಗೊಂದು, ಟೊಮೇಟೋ, ಎಲೆಕೋಸು, ಈರುಳ್ಳಿ ಮುಂತಾದುವುಗಳಿಗೆ ಮಾರುಕಟ್ಟೆಯ ಬರೆ ಬಡಿದಾಗ ಪಾಪ ಅವುಗಳು ಬೀದಿಗೆ ಬಿದ್ದು ಗೋಳಾಡುತ್ತವೆ. ಆಗ ಆತ್ಮಹತ್ಯೆ ಮಾಡಿಕೊಳ್ಳುವ ರೈತನಿಗೊಂದು ಪ್ಯಾಕೇಜ್ ಆದರೆ (ಅಲ್ಲಲ್ಲ

ಅವನ ಮನೆಯವರಿಗೆ!) ಆತ್ಮಹತ್ಯೆ ಮಾಡಿಕೊಳ್ಳದಂತೆ, ಬದುಕಿರುವ ರೈತರಿಗೊಂದು ಪ್ಯಾಕೇಜ್, ವಿದ್ಯಾರ್ಥಿಗಳಿಗೆ, ಮಹಿಳೆಯರಿಗೆ, ಅಂಗವಿಕಲರಿಗೆ, ವೃದ್ಧರಿಗೆ, ಅಲ್ಪಸಂಖ್ಯಾತರಿಗೆ, ಬಹುಸಂಖ್ಯಾತರಲ್ಲದವರಿಗೆ ಹೀಗೆ ಬಗೆಬಗೆಯ ಪ್ರಜೆಗಳಿಗೆ ಪ್ಯಾಕೇಜ್ ಭರವಸೆಯನ್ನು ಸರ್ಕಾರ ಸದಾ ನೀಡುತ್ತಲಿರುತ್ತದೆ. ಆಪದ್ಬಾಂಧವನಂತಿರುವ ಪ್ಯಾಕೇಜ್ ಭರವಸೆಗಳನ್ನು ಹೊತ್ತುನಿಂತ ಮಾಯಾ ಜಿಂಕೆಯಾಗಿ ಜನರನ್ನು ಸೆಳೆಯುತ್ತಿರುತ್ತದೆ.

ಒಂದೆರಡು ಪ್ಯಾಕೇಜ್‌ಗಳ ಸ್ಯಾಂಪಲ್ ನೋಡಿ ನಿಮಗೆ ಅವಶ್ಯಕವೆನಿಸಿದರೆ ನೀವು ಈ ಪ್ಯಾಕೇಜ್ ಒಳಗೆ ತಲೆತೂರಿಸಬಹುದು! ಪ್ಯಾಕೇಜ್ ಕಂಬಳಿಯನ್ನು ಹೊದ್ದು ಬೆಚ್ಚಗೆ ಮಲಗಬಹುದು!

ಸ್ನೇಹಿತೆಯ ಮಗಳಿಗೊಂದು ಗಂಡು ನೋಡುವ ಸಲುವಾಗಿ ಮ್ಯಾರೇಜ್‌ಬ್ಯೂರೋ ಒಂದಕ್ಕೆ ಹೋದಾಗ ಅವರು ಬಗೆಬಗೆಯ ಪ್ಯಾಕೇಜ್‌ಗಳ ವಿವರ ನೀಡಿದಾಗ ಬೆರಗಾಗುವ ಸರದಿ ನನ್ನದಾಗಿತ್ತು. ನಾನು, ಸರಸ್ವತಿ ಬಗೆಬಗೆಯ ಪ್ಯಾಕೇಜ್‌ಗಳನ್ನು ಆಡಿಯೋ, ವೀಡಿಯೋ ಎರಡರ ಮೂಲಕವೂ ವಿವರವಾಗಿ ತಿಳಿದುಕೊಂಡ್ವಿ.

''ನೋಡಿ ವಧು ಪ್ಯಾಕೇಜ್‌ನಲ್ಲಿ ಎಂಥೆಂಥ ಆಫರ್ ಇದೆ ನಿಮ್ಗೆ ಗೊತ್ತಾ ತಾಯಿ'' ಬ್ಯೂರೋ ಮಾಲಿಕ ವಿವರ ನೀಡತೊಡಗಿದರು. ಪ್ಯಾಕೇಜ್ ಲೋಕದಲ್ಲಿ ವಿಹರಿಸತೊಡಗಿದೆವು.

ನಿಮ್ಮ ಹುಡ್ಗಿ ತುಂಬಾ ದಪ್ಪವಾಗಿದ್ರೆ ಹೇಳಿ ಮದ್ವೆ ಹೊತ್ಗೆ ಸಣ್ಣಗಾಗಬೇಕು ಅಂತಿದ್ರೆ ನಿಮಗೆಷ್ಟು ಬೇಕೋ ಅಷ್ಟು ಸಣ್ಣ ಮಾಡಿಕೊಡ್ತೀವಿ. Crash dietಗೆ ಹಾಕಿ, ವ್ಯಾಯಾಮ ಮಾಡ್ಸಿ, ಜಗ್ಗಿಸಿ, ಕುಗ್ಗಿಸಿ, ಬಗ್ಗಿಸಿ ಚುಳುಪಿತರ ಮಾಡಿಹಾಕಿ ಬಿಡ್ತೀವಿ. ನೋಡ್ದೋರು ಅಬ್ಬ! ಅನ್ನೋ ಹಾಗೆ ಮಾಡಿಬಿಡ್ತೀವಿ ಎರ್ಡು ತಿಂಗ್ಳಲ್ಲಿ. ಇನ್ನೂ ನಾಕ ವರ್ಷ ಕಮ್ಮಿ ಹೇಳೋ ಹಾಗೆ ಮಾಡ್ತೀವಿ ತಾಯಿ'' ಆತ ನಕ್ಕರು. ''ನೋಡಿ ವಧೂವರರ ಭೇಟಿ ಸಹ ನಾವೇ ಮಾಡಿಸ್ತೀವಿ, ಗಂಡಿನ ಕಡೇವ್ರು ಬರ್ತಾರೆ ಅಂತ ಓಬಿರಾಯನಕಾಲದ ಉಪ್ಪಿಟ್ಟು ಕೇಸರಿ ಬಾತು ಮಾಡ್ಕೊಂಡು ಮನೆ ಎಲ್ಲಾ ಚೊಕ್ಕಟ ಮಾಡ್ತಾ (?) ಧಾವಂತ ಕಿರಿಕಿರಿ ಪಡ್ಬೇಕಿಲ್ಲ, ಅದಕ್ಕೆಲ್ಲಾ ನಮ್ಮಲ್ಲೇ ಏರ್ಪಾಡಿದೆ. 'ವೀಕ್ಷಣೆ' ಪ್ಯಾಕೇಜ್ ಅಂತ, ಹುಡುಗನ ಕಡೆವ್ರು ಹುಡ್ಗಿ ಕಡೆವ್ರು ಒಂದು ಪಿಕ್‌ನಿಕ್‌ಗೆ ಬಂದ ಹಾಗೆ ಇಲ್ಲಿಗೆ ಬಂದು ಹೋದ್ರಾಯ್ತು. ಎಲ್ಲಾ ವ್ಯವಸ್ಥೆ ನಮ್ದು. ಈ ಪ್ಯಾಕೇಜು ಭಾಳ ಓಡ್ತಿದೆ ಕಣ್ರಮ್ಮ. ಜನತುಂಬ ಲೈಕ್ ಮಾಡಿದಾರೆ. ಋಣಾನುಬಂಧ ವಿದ್ರೆ ಆಯ್ತು ಅಷ್ಟೆ ಹುಡ್ಗಹುಡ್ಗಿ ಒಪ್ಕೊತಾರೆ ಅಷ್ಟೆ ಅಲ್ವೆನ್ರಮ್ಮ ಹೇಳಿ'' ಆತ ವ್ಯವಹಾರದಿಂದ ವೇದಾಂತಕ್ಕಿಳಿದರು. ''ಚೆನ್ನಾಗಿದೆ ಅಲ್ವ ರಮ ಈ ಪ್ಯಾಕೇಜುಗಳು ಎರಡೂನು'' ಸರಸ್ವತಿ ನುಡಿದಾಗ ಕಾದ ಎಣ್ಣೆಗೆ ಬಿದ್ದ ಸಬ್ಬಕ್ಕಿ ಸಂಡಿಗೆ ಹಾಗೆ ಅಗಲೀಕರಣವಾಗ್ತೋ ಅವಳ ಮಗಳು ಕಾದಂಬರಿ (ಬೃಹದಾದಂಬರಿ?) ನೆನಪಾದಳು. ಕಾದಂಬರಿ ಹಿಡಿಸೋ ಪ್ಯಾಕೇಜ್ ಯಾವುದಿರಬಹುದೆನ್ನಿಸಿತು.

''ಅಮ್ಮ ಇಲ್ನೋಡಿ ಇದು ವಿವಾಹ ಪ್ಯಾಕೇಜ್'' ಆತ ಮತ್ತೆ ವ್ಯವಹಾರಕ್ಕಿಳಿದರು. ''ನೋಡಿ ವರನ ಕಡೆ ವಧುವಿನ ಕಡೆ ಪರಸ್ಪರ ಒಪ್ಗೆ ಆದ್ಮೇಲೆ ಶುಭಸ್ಯ ಶೀಘ್ರಂ ಅಂತ ಒಳ್ಳೆ ಕೆಲಸಾನ ಬೇಗ ಮುಗಿಸಬೇಕಲ್ವೆ'' ಆತ ನಕ್ಕರು. ''ಈ ಕಾಲ್ದಲ್ಲಿ ಯಾರ್ಗೂ ಪುರುಸೊತ್ತಾಗ್ಲೀ ತಾಳ್ಮೆ ಆಗ್ಲಿ ಇರೊಲ್ಲ. ಹಿಂದಿನ ಕಾಲದತರ ಅಕ್ಕರಾಸ್ಥೆನೂ ಇಲ್ಲ. ಹಿಂದೆಲ್ಲಾ ಒಂದು ಮನೇಲಿ ಮದ್ವೆ ನಡೆದ್ರೆ ನೆಂಟ್ರು ಇಷ್ಟರು ನೆರೆಮನೆವ್ರು ಎಲ್ಲಾ ಸೇರಿ ಸಂಭ್ರಮದಿಂದ ಹಪ್ಪಳ, ಸಂಡಿಗೆ, ಶ್ಯಾವಿಗೆ, ಉಂಡೆ ಚಕ್ಲಿ ಎಲ್ಲಾ ಮಾಡ್ತಿದ್ರು. ಹತ್ತಿರದೋರು ಜವಾಬ್ದಾರಿ ತಗೊಂಡು ಕಾರ್ಯ ನಡೆಸಿ ಕೊಡ್ತಿದ್ರು. ಈಗೆಲ್ಲಾ ರಿಸೆಪ್ಷನ್‌ಗೆ ಬರೋವ್ರೆ ಜಾಸ್ತಿ. ಲಗ್ನದ ಹೊತ್ತಲ್ಲಿ ಮುದುಕರು, ರಿಟೈರಾದವ್ರು, ಕೆಲಸಕ್ಕೆ ಹೋಗ್ದಿರೋ ಹೆಂಗಸ್ರು ಇವ್ರುಗಳೇ ಜಾಸ್ತಿ. ಏನು ಮಾಡ್ತಿರಾ ಹೇಳಿ ಕಾಲ ಬದಲಾಗಿದೆ. ಆದ್ರೆ ನಾವು ಬದಲಾಗಿಲ್ಲ ತಾಯಿ. ಹಳೆ ಸಂಪ್ರದಾಯ, ಆಚಾರ ಪದ್ಧತಿಗಳನ್ನ ಚಾಚೂ ತಪ್ಪದೆ ನಡೆಸಿ ವಿವಾಹನ ಮೆಮರಬಲ್ ಡೇ ಆಗಿ ಮಾಡ್ತೀವಿ ಕಣ್ರಮ್ಮ'' ಎಂದು ನಮ್ಮ ಕಣ್ಣಲ್ಲಿನ ಕುತೂಹಲ ಕಂಡು ಆತ ಮುಗುಳ್ನಗುತ್ತಾ ''ಅಮ್ಮ ಬೀಗರ ಉಪಚಾರಕ್ಕೆ ಜನ ಇಲ್ಲ ಹೇಗಪ್ಪಾ ನಿಭಾಯಿಸೋದು ಅಂತ ಟೆನ್‌ಷನ್ ತಗೋ ಬೇಕಿಲ್ಲ. ಲಕ್ಷಣವಾಗಿರೋ, ಪಾದರಸದ ಹಾಗೆ ಓಡಾಡೋ ನಗ್ತಾನಗ್ತಾ ಇರೋ ಹೆಣ್ಮಕ್ಕಳನ್ನು ಮತ್ತೆ ಎಂಥ ಭಾರದ ಸಾಮಾನುಗಳನ್ನಾಗ್ಲೀ ಕೈಲಾಗ್ದಿರೋ ಮುದುಕರನ್ನ ಕಾಯ್ಲೆವ್ರನ್ನ ಎಲ್ಲಿಂದ ಎಲ್ಲಿಗೆ ಬೇಕಾದ್ರೂ ಸಾಗಿಸೋಕೆ ತಾಕತ್ತಿರೋ ಗಡವೆ ಹುಡುಗ್ರನ್ನ ಬೀಗರ ಉಪಚಾರಕ್ಕೆ ಅಂತ ನೇಮಕ ಮಾಡಿದೀವಿ. ಬೀಗರಿಗೆ ಈ ಗ್ಯಾಂಗು ಪ್ಯಾಕೇಜ್‌ದು ಅಂತ ಸುಳಿವು ಸಹ ಸಿಗೊಲ್ಲ ಬಿಡಿ. ಇವ್ರು ಚಿಗರೆ ಮರಿಗಳ ಹಾಗೆ ಓಡಾಡ್ತ ಬೀಗರಿಗೆ ಊಟ, ತಿಂಡಿ, ಕಾಫಿ, ನೀರು ಎಲ್ಲ ಸಪ್ಲೈ ಮಾಡಿ ನಿಮಗಿಂತ ಚೆನ್ನಾಗಿ ಉಪಚಾರ ಮಾಡ್ತಾರೆ. ಕವಳದ ಹೊತ್ಗೆ ಸರ್ಯಾಗಿ ಕುಂಕುಮ ಅಕ್ಷತೆ ಬಟ್ಲು ಹಿಡ್ದು ಎಲ್ಲೆಲ್ಲಿರೋ ಬೀಗರನ್ನ ತರುಮಿಕೊಂಡು ಊಟದ ಹಾಲ್ಗೆ ದಬ್ತಾರೆ. ಶ್ರಾವಣದ ಜಡಿ ಹಾಗೆ ಅಳೋ ಮಕ್ಕಳನ್ನು ಸುಧಾರ್ಸಿ ಎಳೆ ತಾಯಂದ್ರು ಮದ್ವೆ ಸಂಭ್ರಮದಲ್ಲಿ ಖುಷಿಯಿಂದ ಓಡಾಡ್ಕೊಂಡಿರೋ ಹಾಗೆ ಸಹಾಯ ಮಾಡ್ತಾರೆ. ಬೀಗರ ಮನೇಲಿಟ್ಟಿರೋ ತರಹೇವಾರಿ ಸಾಮಾನು, ತಿಂಡಿಗಳನ್ನು ಎಗರಿಸೋಕೆ ಹೊಂಚುಹಾಕೋ ಹುಡ್ರುಗ್ರನ್ನ ನಿಗಾವಹಿಸಿ ಕಾಯ್ತಾ ಪಕ್ಷಾಂತರಿ ರಾಜಕಾರಣಿಗಳ ತರಹ ಅಲ್ಲಿಂದಿಲ್ಲಿಗೆ ಹಾರಾಡೋ ಚೇಷ್ಟೆ ತಲೆಹರಟೆ ಹುಡುಗರನ್ನ ನಿಭಾಯಿಸ್ತಾರೆ. ಪ್ಯಾಂಟು, ಚಡ್ಡಿಗಳಲ್ಲೇ ಬೆಳೆದು ಗಡವಗಳಾಗಿರೋ ಹೆಣ್ಮಕ್ಳಿಗೆ ಜಾರದ ಹಾಗೆ ಸೀರೆ ಉಡ್ಸಿ ಸಿಂಗಾರ ಮಾಡಿ ಅದೊಂದು ದಿನ ದೇಸಿತನ(ಪರದೇಸಿ?)ವನ್ನ ತಂದ್ಕೊಡೋಕೆ ಹೆಣಗ್ತಾರೆ. ಗೇರ್ ಇಲ್ದಿರೋ ಗಾಡಿಗಳ ಹಾಗೆ ಹೇಳಿದ್ದನ್ನೇ ಹೇಳ್ತಾ ಚ್ಯೂಯಿಂಗ್ ಗಮ್ ತರ ಮೆತ್ತಾಕ್ಕೊಳ್ಳೊ ಮುದುಕರನ್ನ ಮದುವೆ ಮಂಟಪದ ಮುಂದೇನೆ ಕೂಡ್ಸಿ ಅವ್ರಿಗೆ ಕುಡಿಯೋಕೆ ಕಾಫಿಯೋ ಪಾನಕವೋ ತಂದುಕೊಟ್ಟು ಅವರ ಕೈಲಿ ವಧೂವರರಿಗೆ ಅಕ್ಷತೆ ಹಾಕ್ಸಿ ಮತ್ತೆ ತಾಂಬೂಲಾನೂ ಕೊಡ್ಸಿ ಸಮಾಧಾನ ಆಗೋ ಹಾಗೆ ಸುಧಾರಿಸ್ತಾರೆ. ಒಟ್ನಲ್ಲಿ ರಚ್ಚೆ ಮುದುಕರನ್ನ ಉಚ್ಚೆ ಮಕ್ಕಳನ್ನ ಚೆನ್ನಾಗಿ ನಿಭಾಯಿಸ್ತಾರೆ ಕಣ್ರಮ್ಮ ಬಂದೋವ್ರನ್ನ ಇರೋವ್ರನ್ನ ಹೋಗೋವ್ರನ್ನ ಎಲ್ರನ್ನೂ ನಗ್ತಾನಗ್ತಾ ಉಪಚಾರ ಮಾಡ್ತಾರೆ. ಇನ್ನೇನು ಹೇಳಿ'', ನಾವು ತಲೆತೂಗಿದೆವು.

''ಮತ್ತೆ ಸಂಪ್ರದಾಯದ ಹಾಡು ಹಸೆ ಎಲ್ಲ ಆಗ್ಬೇಕು ಅಂತಿದ್ರೆ 'ಸಂಪ್ರದಾಯ ಪ್ಯಾಕೇಜ್' ಇದೆ ಕಣಮ್ಮ. ಹಳೇದು ಬಿಡಬಾರದು ಅಂತಿದ್ರೆ ಭೋ ಚನ್ನಾಗಿದೆ ಇದು. 'ಹಸೆಗೆದ್ದು ಬಾರೋ ನೀನು ಮದ್ದು ಬಾಲಕೃಷ್ಣ' ಅಂತ ಹಸೆಗೆ ಕರೆದ ಹಾಡು, 'ನೀಳವೇಣಿಯ ನೆತ್ತಿಗೊತ್ತಿದರು ಮುತ್ತಿನೆಣ್ಣೆಯ' ಎನ್ನೋ ಎಣ್ಣೆಶಾಸ್ತ್ರದ ಹಾಡು, ಕಾಶಿಯಾತ್ರೆ ಹೊತ್ಗೆ 'ಪೋಗಬೇಡವೋ ಕಾಶಿಯಾತ್ರೆಗೆ ಈಗಲೇ ನೀನು..' ಅನ್ನೋ ಹಾಡು, 'ಪದುಮನಯನೆ ಮುದದಿ ಲಜ್ಜೆಯಿಂ ಪತಿಶಿವನ ನಾಮವಂ ಪೇಳ್ದಳ್' ಎನ್ನೋ ಬಾಗಿಲು ಕಟ್ಟಿದ ಹಾಡು. ಒಂದೆ ಎರಡೆ ಏನು ಮುದ್ದಾಗಿ ಹಾಡ್ತಾರೆ ಅಂತ. ನೋಡಿಮ್ಮಾ ಹೀಗಂತೀನಿ ಅಂತ ಬೇಜಾರು ಮಾಡ್ಕೊಬೇಡಿ, ಈ ಕಾಲದ ಹೆಣ್ಮಕ್ಳು ಬಲುಗಟ್ಟಿ. ಪಿಂಡಗಳಮ್ಮ ಮನೆ ತುಂಬಿಸಿಕೊಡೋವಾಗಾಗ್ಲಿ ಗಂಡನ ಮನೆಗೆ ಹೋಗುವಾಗಾಗ್ಲಿ ಒಂದು ತೊಟ್ಟು ಕಣ್ಣೀರು ಹಾಕಿದ್ರೆ ಕೇಳಿ. ಹಿಂದಿನ ಕಾಲದ 'ಪ್ಯಾಲಪಿಂಡಿ' ಹೆಣ್ಮಕ್ಳ ಹಾಗೆ ಅಳೋದೆ ಇಲ್ಲ. ಹಿಂದೆಲ್ಲಾ ಹೆಣ್ಮಗೂನ ಕಳಿಸಿಕೊಡುವಾಗ ವಧುವಿನ ಜತೆ ಎಲ್ರೂ ಅಳ್ತಾ ಸೀರೆ ಸೆರಗಿಂದ, ಪಂಚೆ ಕೊನೆಯಿಂದ, ವಲ್ಲಿ ಅಂಚಿನಿಂದ ಕಣ್ಣೀರು ವರೆಸ್ಕೊತಾ ಮೂಗು ಸೀಟ್ತಾ ಕೆಂಪಗೆ ಮಾಡ್ಕೊಂಡು ಬಿಕ್ಕಳಿಸ್ತಿದ್ರು. ಕೊನೆಗೆ ಘಟವಾಣಿ ಬೀಗಿತ್ತಿ ಸಹ ಅಳೋವ್ರು ಆದ್ರೆ ಈ ಕಾಲ್ದಲ್ಲಿ ಹುಡ್ಗಿನೆ ಅಳ್ದಿದ್ದ ಮೇಲೆ ಯಾರು ಅಳ್ತಾರೆ ಹೇಳಿ? ಆದ್ರೂ ಸಂಪ್ರದಾಯನ ಮುರಿಬಾರ್ದು ಅಂತಿದ್ರೆ ಹೇಳಿ 'ಎಮ್ಮ ಮನೆ ಅಂಗಳದಿ, ಹಾಡ್ಸಿ ಹೆಣ್ಣೋವ್ರೆ ಅಳೋಕೂ ಜನ ಏರ್ಪಾಡು ಮಾಡ್ತೀವಿ. ಹಳೆ ಶಾಸ್ತ್ರ ಸಂಪ್ರದಾಯಗಳನ್ನ ಅಷ್ಟಿಲ್ದೆ ಮಾಡಿದಾರಾ ಹಿರಿಯೋರು. ಅವನ್ನೆಲ್ಲಾ ಬಿಟ್ಟುಬಿಟ್ರೆ ಏನಿದೆ ಹೇಳಿ'' ಎಂದಾಗ ಅವರ ತರ್ಕ ಸರಿ ಅನ್ನಿಸಿತು. 'ನೋಡಿಮ್ಮಾ ಈ ಕಾಲ್ದಲ್ಲಿ ತಾಳಿಗಿಂತ ಬೊಕೆ ಮುಖ್ಯವಾಗಿ ಬಿಟ್ಟಿದೆ' ಎಂದು ಷರಾ ಬರೆದರು. ರಾತ್ರಿಗೆ 'ಶೃಂಗಾರವಾಗಿಹುದು ಶ್ರೀಹರಿಯ ಮಂಚ.. ಅಂಗನೇ ರುಕ್ಮಿಣಿ ಪಡಿಪ ಮಂಚ' ಅಂತ ಶೃಂಗಾರ ರಸದಲ್ಲಿ ಹೆಣ್ಮಕ್ಳು ಹಾಡಿದ್ರೆ ವಯಸ್ಸಾದವರೂ ಕಣ್ಣು ಮಿಟುಕಿಸ್ತಾರಮ್ಮ' ಎಂದು ನಕ್ಕರು. 'ಕೈ ಬೀಸ್ಕೊಂಡು ಬಂದು ಕೈ ತುಂಬಾ ತಿಂಡಿ, ಉಡುಗೊರೆ ಎಲ್ಲ ತಗೊಂಡು ಹೋಗ್ಬೌದು. ದುಡ್ಡು ಕೊಟ್ರೆ ಮುಗೀತು ನಿಮ್ಮ ಜವಾಬ್ದಾರಿ'' ಎಂದರು.

''ಇಷ್ಟೇ ಅಲ್ಲ ತಾಯಿ ಮದ್ವೆ ಆದ್ಮೇಲೆ ಮಕ್ಕಳಾಗಬೇಕಲ್ಲ'' ನಗುತ್ತಾ ಆತ ಹೇಳಿದರು. ನೋಡಿ ಬಸುರಿ ಹೆಣ್ಮಕ್ಳಿಗೆ 'ಆರೋಗ್ಯ ಪ್ಯಾಕೇಜ್' ಇದೆ ಜತೆಗೆ 'ಬಯಕೆ ಪ್ಯಾಕೇಜೂ' ಇದೆ. ಬಸ್ರಿ ಹೆಣ್ಮಕ್ಳಿಗೆ ಇಷ್ಟವಾದ ಚಕ್ಲಿ, ಕೋಡುಬಳೆ, ತೇಂಗೂಳ್, ಕಜ್ಜಾಯ, ಸಜ್ಜಪ್ಪ ಈ ತರಹ ಹಳೆಕಾಲದ ತಿಂಡಿ ಅಡುಗೆಗಳನ್ನು ಮಾಡಿಸಿ ಕೊಡ್ತೀವಿ. ಈ ಕಾಲದ ತಿಂಡಿಗಳು ಅಂಗಡಿಗಳಲ್ಲೇ ಸಿಗತ್ವೆ ನೋಡಿ. ಮತ್ತೆ ಬಸುರಿ ಹೆಣ್ಮಕ್ಳನ್ನು ಮನೇಲಿ ನೋಡ್ಕೊಂಡು ಮಾಡಬೇಕಾದ ಪದ್ಧತಿಗಳನ್ನು ಮಾಡೋಕೆ ಅನುಕೂಲವಿಲ್ಲದೆ ಇದ್ದಾಗ ಅದನ್ನೆಲ್ಲಾ ಅಚ್ಚುಕಟ್ಟಾಗಿ ಮಾಡಿಕೊಡ್ತೀವಿ. ಮೂರು ತಿಂಗ್ಳಿಗೆ ಮುಚ್ಚೋರೆ ಮಾಡಿ ಐದು ತಿಂಗ್ಳಿಗೆ ಮೊಗ್ಗುಮುಡಿಸಿ ಏಳುತಿಂಗ್ಳಿಗೆ ಸೀಮಂತ ಮಾಡಿ ಹಸಿರು ಸೀರೆ ಉಡಿಸ್ತೀವಿ. ಕೆಂಬಾರದ ಔಷಧಿ ಕೂಡ ಕೊಡ್ತೀವಿ. ಮತ್ತೆ ಹೆರಿಗೆ ಸೌಲಭ್ಯ ಇದೆ. ಆಮೇಲೆ 'ಕಂದ ಪ್ಯಾಕೇಜ್'ನಲ್ಲಿ ಬಾಣಂತನಕ್ಕೂ ಸೌಲಭ್ಯಗಳಿವೆ ಕಣ್ರಮ್ಮ. ಮಗೀಗೆ ಹೆಸರು ಹುಡುಕಿಕೊಡ್ತೀವಿ. ತಾಯಿಗೆ ಜೋಗುಳ

ಹೇಳಿಕೊಡ್ತೀವಿ. ಮಗು ಸುಧಾರ್ಸೋದು ಹೇಳಿಕೊಡ್ತೀವಿ. ಬಾಣಂತಿ ಮಗೂಗೆ ಎರೆಯೋದು, ಬಾಣಂತಿ ಚಕ್ಕಿತವಾಗಿರ್ಲಿ ಅಂತ ಕಾಸೋದು ಕಟ್ಟೋದು ಎಲ್ಲಾ ಮಾಡ್ತಾರೆ. ಹಳೆಕಾಲದ್ದು ಬಾಣಂತನ ವಾದ್ರೆ ಸ್ವಲ್ಪ ಬೆಲೆ ಜಾಸ್ತಿ 'ಪಥ್ಯ ಪ್ಯಾಕೇಜ್' ಅಂತ. ಈ ಕಾಲದ್ದಾದ್ರೆ ಸ್ವಲ್ಪ ಕಮ್ಮಿ 'ಗೋಗೋ ಪ್ಯಾಕೇಜ್' ಅಂತ. ತಾಯಿಗೆ ವಿಶ್ರಾಂತಿ ಬೇಕು ರಿಲ್ಯಾಕ್ಸ್ ಆಗ್ಬೇಕು ಅಂತಂದ್ರೆ ಮಗೂನ ನೋಡ್ಕೊಂಡು ಅದ್ರ ಹೇಲು, ಉಚ್ಚೆ ಬಾಚಿ ಸುಧಾರಿಸ್ತಾರೆ. ತಾಯಿ ಮಗೂನ ಹೊತ್ತುಹೆತ್ತು ಮಾಡ್ಬೇಕಷ್ಟೆ ''ಆತ ನುಡಿದಾಗ ಸರಸ್ವತಿ ಕಾದಂಬರಿನ ಈ ಪ್ಯಾಕೇಜ್‌ಗಳಿಗೆ ಹಾಕಿಬಿಡ್ತೀನಿ ಕಣೆ. ಎಷ್ಟು ಚೆನ್ನಾಗಿದೆ ಅಲ್ವ? ಬಸ್ರಿ ಜತೆ ನಾವೂ ತಿಂದ್ಕೊಂಡು ಹಾಯಾಗಿರಬೌದು'' ಎಂದಾಗ ಕಾದಂಬರಿಗೆ 'ಬಾಡ್ಗೆ ತಾಯಿ ಪ್ಯಾಕೇಜ್' ಇದ್ರೆ ಕೊಡಿಸಿದ್ರೆ ವಾಸಿ ಅಂದ್ಕೊಂಡೆ. 'ಸೂಪರ್ ಸೋಮಾರಿ ಕಾದಂಬರಿ'.

''ನೋಡೀಮ್ಮಾ ನಾವು ನಮ್ಮ ಬಿಸಿನೆಸ್‌ನ ಇನ್ನೂ ದೊಡ್ಡದು ಮಾಡ್ಬೇಕೂ ಅಂತಿದೀವಿ. ಈಗಾಗ್ಲೆ ನಮ್ಮ ಪ್ಯಾಕೇಜ್‌ಗಳು ತುಂಬ ಜನಪ್ರಿಯವಾಗಿಬಿಟ್ಟಿವೆ. ಮುಂದಕ್ಕೆ ಶಾಲಾ ಪ್ಯಾಕೇಜ್ ಮಾಡ್ಬೇಕು ಅಂತಿದೀವಿ. ಮನೇಲಿ, ಸ್ಕೂಲಲ್ಲಿ ತರ್ಲೆ ಮಾಡ್ಕೊಂಡು ಓದುಬರಹಕ್ಕೆ ಗಮನಕೊಡದೆ ಕಳ್ಳ ಬಿದ್ದಿರ್‍ತಾರಲ್ಲ ಅಂತಹ ಮಕ್ಕಗೆ 'ಪುಂಡು ಪುಟಾಣಿ ಪ್ಯಾಕೇಜ್' ಅಂತ ಮಾಡ್ತೀವಿ. ಒಂದೆರಡು ತಿಂಗ್ಳಲ್ಲಿ ಪುಂಡು ಮಕ್ಳನ್ನ ರಸಗುಂಡಿನ ಹಾಗೆ ಮಾಡಿ ಅಪ್ಪ ಅಮ್ಮಂದಿರ ಟೆನ್‌ಷನ್ ಜೀರೋ ಮಾಡ್ತೀವಿ. ಮತ್ತೆ ಪಿಯುಸಿ ಹುಡುಗರಿಗೇನೂ ಬೇರೆಬೇರೆ ತರಹ ಪ್ಯಾಕೇಜ್‌ಗಳಿವೆ. 'ಆರ್ಕೆಮಿಡೀಸ್ ಪ್ಯಾಕೇಜ್'ನಲ್ಲಿ ಪಿಯುಸಿ ಪಾಠದ ಜತೆ ಸಿಇಟಿ, ಐಐಟಿ ಕೋಚಿಂಗ್ ಕೊಡ್ತೀವಿ. ಒಂದೊಂದು ವಿದ್ಯಾರ್ಥಿಗೂ ಹತ್ತು ಕೇಜಿ ಸ್ಟಡಿ ಮೆಟಿರಿಯಲ್ ಸಿಗುತ್ತೆ. ಅಷ್ಟು ಓದಿದ್ರೆ ಸಾಕು ಸಿಇಟಿನಲ್ಲಿ ಮೆರಿಟ್ ಸೀಟ್ ಗ್ಯಾರಂಟಿ ಕಣ್ರಮ್ಮ'' ಆತ ಹೇಳ್ತಿದ್ದಾಗ್ಲೆ ಸರಸ್ವತಿ ''ಮುಂದಿನ ವರ್ಷದ ಹೊತ್ಗೆ 'ಆರ್ಕೆಮಿಡೀಸ್' ಆಗುತ್ತಾ ನನ್ನ ಮಗಳ್ನ ಸೇರಿಸ್ಬೇಕೂ ಅಂತಿದೀನಿ'' ಎಂದು ಆಸೆಬಿದ್ದಳು.

''ಅಮ್ಮ ಕೊನೆದಾಗಿ ಹೇಳ್ತೀನಿ. ಬೇಜಾರು ಮಾಡ್ಕೊಬೇಡಿ. ನಮ್ಮ ಸಂಸ್ಥೆಯ ವೃದ್ಧಾಶ್ರಮ ಇದೆ. ಈಗ ವಯಸ್ಸಾದವರನ್ನ ಮನೇಲಿ ಇಟ್ಕೊಳಕ್ಕೆ ಜಾಗವೇ ಇರೋಲ್ಲ, ತುಂಬ ಜನದ ಮನೇಲಿ ಓಲ್ಡ್ ಫರ್ನಿಚರ್‌ನ ಯಾರು ನೋಡ್ಕೊತಾರ್‍ಹೇಳಿ. ಮನೆಯಿಂದ ಬಂದವ್ರು ಬೇಜಾರಾಗ್ದಿರ್ಲಿ ಅಂತ 'ವಾರ್ಧಕ್ಯ ಪ್ಯಾಕೇಜ್' ಮಾಡಿದೀವಿ. ಅದರಲ್ಲಿ ಮುದುಕರು ಇಷ್ಟಪಟ್ರೆ ಹೋಟಲ್ಲು, ಸಿನಿಮಾ, ಪಾರ್ಕು, ಯಾತ್ರೆ ಕೊನೆಗೆ ಬೇಕಿದ್ರೆ 'ಮುಸ್ಸಂಜೆ ಹನಿಮೂನಿ'ಗೂ ಏರ್ಪಾಡು ಮಾಡ್ತೀವಿ.'' ತುಂಬ ಚೆನ್ನಾಗಿದೆ. ಈ ಪ್ಯಾಕೇಜ್ ಅಂತ ಜನ ಹೇಳ್ತಿದಾರೆ. ನಿಮ್ಮನೇನಲ್ಲಿ ವಯಸ್ಸಾದ ತಂದೆ ತಾಯಿಗಳಿದ್ರೆ ಕಳ್ಸಿ, ನಿಮಗಿಂತ ಚೆನ್ನಾಗಿ ನೋಡ್ಕೊತೀವಿ ಅಂದಾಗ ಸರಸ್ವತಿ ''ರಮ ಅಡ್ವಾನ್ಸ್ ಬುಕಿಂಗ್ ಇದ್ರೆ ಮಾಡಿಬಿಡೋಣ ಅನ್ಸುತ್ತೆ ಕಣೆ'' ಎಂದು ನುಡಿದಾಗ ''ಅಡ್ವಾನ್ಸ್ ಬುಕಿಂಗ್ ಇನ್ನೂ ಶುರು ಆಗಿಲ್ಲ, ಶುರುವಾದಾಗ ತಿಳಿಸ್ತೀವಿ. ನಿಮ್ಮ ಫೋನ್ ನಂಬರ್ ಕೊಟ್ಟಿರಿ'' ಎಂದರು ಆತ.

ಆತನ ಮಾತು ಕೇಳ್ತಾ ನನಗೊಂದು ಗಳಿಗೆ ಅನ್ನಿಸಿತು. ಅಲ್ಲಾ ಮನುಷ್ಯ ನಿರ್ಮಿಸುವ ಪ್ಯಾಕೇಜ್‌ನಲ್ಲಿ ಏನಿದೆ ಅಂತ ತಿಳಿದುಕೊಳ್ಳಬಹುದು. ಆದರೆ ಬದುಕೆಂಬ ಪ್ಯಾಕೇಜ್‌ನಲ್ಲಿ ದೇವರು ಏನೇನು ಅಡಗಿಸಿಟ್ಟಿರುತ್ತಾನೋ, ಹುಟ್ಟು - ಬಾಲ್ಯ - ಯೌವ್ವನ - ವಿದ್ಯೆ, ಉದ್ಯೋಗ, ಸ್ನೇಹಿತರು, ದಾಂಪತ್ಯ, ಮಕ್ಕಳು, ತಂದೆ ತಾಯಿಗಳು, ಬಡ ಹುಟ್ಟಿದವರು, ಆರೋಗ್ಯ, ಆಯಸ್ಸು ಹೀಗೆ ಏನೆಲ್ಲಾ ತುಂಬಿದೆ ಪ್ಯಾಕೇಜಿನಲ್ಲಿ. ಯಾವುದು ಎಷ್ಟು ಲಭ್ಯವೋ ತಿಳಿಯಲಸಾಧ್ಯ. ಅನುಭವಕ್ಕೆ ಬಂದಾಗಲೇ ಪ್ಯಾಕೇಜಿನ ರಹಸ್ಯ ತಿಳಿಯುವುದು. 'ಸೃಷ್ಟಿರಹಸ್ಯ ಪ್ಯಾಕೇಜ್' ದೇವರು ನೀಡಿರುವ ಅದ್ಭುತ ಕೊಡುಗೆ ಎನ್ನಿಸಿ ನಿಟ್ಟುಸಿರಿಟ್ಟೆ.



## ಮಳೆ ನೀರು ಸಂಗ್ರಹಿಸಲು ಹೊಸ ವಿಧಾನ

*ಪಡುಕೋಣೆ ರಮಾನಂದರಾವ್ ಸ್ಮಾರಕ ಹಾಸ್ಯಲೇಖನ ಸ್ಪರ್ಧೆಯಲ್ಲಿ*
***ಮೂರನೇ ಬಹುಮಾನ** ಪಡೆದ ಲೇಖನ*

# ಸೈತಾನ್ ಮೇಷ್ಟ್ರು

• ಹೆಚ್.ಎನ್. ನಟರಾಜು

**ರಂ**ಗ ಆಗ ತಾನೇ ಹೈಸ್ಕೂಲಿಗೆ ಸೇರಿದ್ದ. ಮೊದಲ ದಿನವೇ ಶಾಲೆಗೆ ಲೇಟಾಗಿ ಬಂದ. ಆ ಮಾಸ್ತರರೋ ಬಹಳ ಕೋಪಿಷ್ಟರು.

ರಂಗ ಲೇಟಾಗಿ ಬಂದದ್ದಕ್ಕೆ ಕೆಂಡಾಮಂಡಲವಾದರು. ಆಗ

ಮೇಷ್ಟ್ರು : 'ಏಯ್.. ನಾನ್ ಯಾರು ಅಂತ ಗೊತ್ತೇನೋ ಸೈತಾನ್'? ನನ್ ಪೀರಿಡು ಅಂತ ಗೊತ್ತಿದ್ರೂ ಲೇಟಾಗ್ ಬತ್ತಿಯಾ...

ರಂಗ : ಸಾರ್, ನನ್ನನ್ನು ಕ್ಷಮಿಸಿ, ನಾನ್ ಇವತ್ತು ಬೆಳಿಗ್ಗೆ ಬಿರ್ನೇ ಎದ್ದು ನೀರ್ ತರಾಕೆ ದೂರದ ಬಾವಿ ಅತ್ರ ಹೋದ್ನಾ!!! ನೀರ್ ತಗಂಡ್ ಬರ್‌ಬೇಕಾದ್ರೆ ಬಿದ್ ಬಿಟ್ಟೆ ಸಾರ್....

ಮೇಷ್ಟ್ರು : ಅಯ್ಯೋ ಪಾಪ. ಆಮ್ಯಾಲೆ ಏನಾಯ್ತು?

ರಂಗ : ಜೋರಾಗಿ ಕೂಗಿಕೊಂಡೆ, ಕಿರುಚಿದೆ. ಆದ್ರೆ ಯಾರೂ ಬರ್ಲಿಲ್ಲ ಸಾರ್.

ಮೇಷ್ಟ್ರು : ಆಮ್ಯಾಲೆ ನೀನೇನ್ ಮಾಡ್ದೆ?

ರಂಗ : ಯಾರೂ ಬರಲಿಲ್ಲವಲ್ಲ ನಾನೇ ಎದ್ ಓಡ್ ಬಂದೆ. ನಾನು ಓಡ್ಕಂಡ್, ಓಡ್ಕಂಡ್ ಬತ್ತಿದ್ನಾ ಅಷ್ಟರಾಗೇ ನಮ್ ಶಾಲೆ ತಾವ 'ನಿಧಾನವಾಗಿ ಚಲಿಸಿ, ಮುಂದೆ ಶಾಲೆಯಿದೆ' ಅಂತ ಬೋರ್ಡ್ ಹಾಕಿದ್ರು ಹಾಗಾಗಿ ನಾನು ನಿಧಾನವಾಗಿ ಬರುವಷ್ಟರಲ್ಲಿ ಲೇಟಾಯ್ತು ಸಾರ್ ಅಂದ.

ಮೇಷ್ಟ್ರು ಮೊದಲ ದಿನ ಅಂತ ಒಳಗೆ ಸೇರಿಸಿಕೊಂಡರು. ನಂತರ

ಮೇಷ್ಟ್ರು : ನೋಡಿ, 'ನಾನು ತುಂಬಾ ಕೋಪದೋನು, ಯಾರ್ಯಾರು ದಡ್ಡರೋ ಎಲ್ಲರೂ ಎದ್ದು ನಿಲ್ಲಿ ಇಲ್ಲಾಂದ್ರೆ ಕೈಮ ಮಾಡ್ತೀನಿ...' ಅಂದರು.

ಹತ್ತು ನಿಮಿಷಗಳಾದರೂ ಯಾರೂ ಎದ್ದು ನಿಲ್ಲುವುದಿಲ್ಲ. ಮಾಸ್ತರರಿಗೆ ಕೋಪ ನೆತ್ತಿಗೆ ಏರಿತು. ಆಗ ರಂಗ ಎದ್ದು ನಿಲ್ಲುತ್ತಾನೆ.

ಮೇಷ್ಟ್ರು : ಓ, ನೀನಾ! ಲೇಟಾಗ್ ಬಂದಾಗ್ಲೇ ಅಂದ್ಕಂಡೆ. ನೀನೇನಾ ಇಡೀ ಕ್ಲಾಸಲ್ಲಿ ದಡ್ಡ.

ರಂಗ : ಸಾರ್.. ನಾನು ದಡ್ಡ ಅಲ್ಲ ಸಾರ್. 'ಪಾಪ ಅರ್ಧಗಂಟೆಯಿಂದ ನೀವೊಬ್ಬರೇ ನಿಂತಿದ್ರಲ್ಲ' ಅಂತ ನಿಮ್ಗೆ ಕಂಪನಿ ಕೊಡೋಕೆ ನಿಂತ್ಕಂಡೆ ಸಾರ್ ಎಂದ.

ಈ ಮಾತು ಕೇಳುತ್ತಿದ್ದಂತೆ ಮಾಸ್ತರರು ರಂಗನನ್ನು ಎಬ್ಬಿಸಿ ಪ್ರಶ್ನೆ ಕೇಳಲು ಪ್ರಾರಂಭ ಮಾಡಿದರು.

ಮೇಷ್ಟ್ರು : ಏ ರಂಗ ಹೇಳು. 'ಅಶೋಕ' ಯಾರ ಮಗ?

ರಂಗ : ಸಾರ್ ಇದು ತುಂಬಾ ಸಿಂಪಲ್ಲು. ಅಶೋಕ ರಾಮಣ್ಣನ ಮಗ ಸಾರ್...

ಮೇಷ್ಟ್ರು : 'ತಪ್ಪು ಉತ್ತರ ನೀಡ್ತೀಯಾ'? ಎಂದು ಸರಿಯಾಗಿ ಹೊಡೆದರು.

ರಂಗ : ಸಾರ್, ನಾ ನಿಜಾನೇ ಹೇಳಿದ್ದು. ನಮ್ಮನೆ ಪಕ್ಕದಾಗೇ ಅಶೋಕ ಇರೋದು. ಅವರ ಅಪ್ಪನ ಹೆಸರು ರಾಮಣ್ಣ ಅಂತ ಸಾರ್...

ಮೇಷ್ಟ್ರು ರಂಗನ ಮುಗ್ಧತೆಗೆ ಮೆಚ್ಚಿಕೊಂಡು ಕೂರಿಸಿಬಿಟ್ಟರು. ನಂತರ ಪಾಠ ಶುರು ಮಾಡಬೇಕು ಅನ್ನೋವಾಗ,

ಮೇಷ್ಟ್ರು : ನೋಡಿ ಮಕ್ಕಳೇ ನೀವು ಯಾವಾಗ್ಲೂ 'ಸರಸ್ವತೀನಾ ಗೌರವಿಸಬೇಕು, ಪ್ರೀತಿಸಬೇಕು' ಆಗ್ಲೇ ನಿಮ್ಗೂ ಇದ್ಯಾ ಅಂಟದು ತಿಳೀತೇ.. ಅಂದರು.

ಅಷ್ಟರಲ್ಲಿ ಸರಸ್ವತಿ ಅನ್ನೋ ಹುಡುಗಿ ಸಾರ್ ನಾನು "New Admission" ಅಂತ ಹೇಳಿ ಒಳಗೆ ಬಂದಳು. ಆಗ,

ಮೇಷ್ಟ್ರು : ನಿನ್ನ ಹೆಸರೇನಮ್ಮ? ಅಂದರು.

ಹುಡುಗಿ : ಸಾರ್ ನನ್ನ ಹೆಸರು ಸರಸ್ವತಿ

ಹೆಸರು ಕೇಳುತ್ತಿದ್ದಂತೆ ಎಲ್ಲಾ ಹುಡುಗರು ಎದ್ದು ನಿಂತು 'I Love You ಸರಸ್ವತಿ' 'I Love You ಸರಸ್ವತಿ' ಎನ್ನುವುದಕ್ಕೆ ಶುರು ಮಾಡಿದರು. ಆಗ,

ಮೇಷ್ಟ್ರು : ಏಯ್! ಹುಚ್ಚು ಮುಂಡೇವಾ! ಏನ್ ಮಾಡ್ತಿದೀರೋ?

ಹುಡುಗರೆಲ್ಲರೂ : ಸಾರ್.. ನೀವೇ ಅಲ್ವಾ ಹೇಳಿದ್ದು ಸರಸ್ವತೀನಾ ಗೌರವಿಸಬೇಕು, ಪ್ರೀತಿಸಬೇಕು ಅಂತ ಅದಕ್ಕೆ ನಾವೆಲ್ಲಾ ಸರಸ್ವತಿಗೆ ಹಿಂಗ್ ಮಾಡ್ತಿದೀವಿ. ಅಷ್ಟೇ ಎಂದರು.

ಇದನ್ನು ನೋಡಿ ತಡೆಯಲಾಗದ ಮೇಷ್ಟ್ರು, ಎಲ್ಲರೂ ಮನೆ ವಿಳಾಸ ಕೊಡಿ. ನಿಮ್ಮ ಪೋಷಕರಿಗೆ ಪತ್ರ ಬರೆಯುತ್ತೇನೆ ಎಂದು ವಿಳಾಸ ಕೇಳತೊಡಗಿದರು. ರಮೇಶ, ಶ್ಯಾಮು, ಸುಂದರ ಎಲ್ಲಾರ ಸರದಿಯೂ ಆಯ್ತು ಈಗ ರಂಗನ ಸರದಿ.

ಮೇಷ್ಟ್ರು : ಏಯ್ ರಂಗ ನಿಮ್ಮನೆ ವಿಳಾಸ ಹೇಳೋ?

ರಂಗ : (ಯೋಚಿಸುತ್ತಾ) ಸಾರ್ ಅದು "ಮನೆ ನಂ.420, 1ನೇ ಮುಖ್ಯರಸ್ತೆ, 2ನೇ ಅಡ್ಡರಸ್ತೆ, ಬಸವೇಶ್ವರ ಬ್ರಾಂದಿ ಅಂಗಡಿ ಎದುರು, ಗೊಮ್ಮಟೇಶ್ವರ ಟೆಕ್ಸ್‌ಟೈಲ್ಸ್ ಅಂಗಡಿ ಮೇಲೆ, ವೈಕುಂಠ ಲೇಔಟ್, ಯಮನಗರ ಪೋಸ್ಟ್, ಬೆಂಗಳೂರು – 100."

ಈ ವಿಳಾಸ ಕೇಳಿ ಮೇಷ್ಟ್ರು ಕೆಳಗೆ ಬೀಳೋದೊಂದೇ ಬಾಕಿ. ಹಾಗಿತ್ತು ರಂಗ ನೀಡಿದ ಮನೆ ವಿಳಾಸ. ನಂತರ ಇತಿಹಾಸದ ಈ ಮಾಸ್ತರರು ಪಾಠ ಪ್ರಾರಂಭ ಮಾಡಿ ಅದೂ, ಇದೂ ಅಂತ ಏನೇನೋ ಗೊತ್ತಿಲ್ಲದ ವಿಷಯಗಳನ್ನು ಹೇಳುತ್ತಿದ್ದರು.

ಕೊನೆ ಬೆಂಚು ಹುಡುಗರಿಗೋ ಒಳ್ಳೆಯ ನಿದ್ದೆ ಬರ್ತಾ ಇತ್ತು. ಅಷ್ಟರಲ್ಲಿ ಆ 'ನಿದ್ದೆ ಭೂಪ ಶ್ಯಾಮು' ಮಲಗೇ ಬಿಟ್ಟ. ಉಳಿದವರೆಲ್ಲರಿಗೂ ಕಣ್ಣುಗಳು ಎಳಿತಾ ಇದ್ದು. ಆಗ ಶ್ಯಾಮು ನಿದ್ದೆ ಮಾಡುವುದನ್ನು ನೋಡಿದ ಮೇಷ್ಟ್ರು ಸುಂದರನಿಗೆ ಏಯ್! ಅವನ್ನು ಎಬ್ಬಿಸೋ.. ಎಂದರು. ಸುಂದರ ತಿವಿದು ತಿವಿದು ಸಾಕಾಗಿ ಸುಮ್ಮನಾಗಿ ಬಿಟ್ಟ. ಆಗ,

ಮೇಷ್ಟ್ರು : ಏಯ್! ಸುಂದರ ಅವನನ್ನು ಎಬ್ಬಿಸೋ ಅಂದ್ರೆ ಸುಮ್ನೆ ಇದ್ಯಾಕತ್ತೆ ಎಂದರು.

ಸುಂದರ : ಸಾರ್.. ಇದ್ಯಾವ ನ್ಯಾಯ? 'ಮಲಗಿಸೋದು ನೀವು, ಎಬ್ಬಿಸೋದು ನಾವಾ' ಸಾರ್ ಅಂದ.

ಮೇಷ್ಟ್ರು ಪಾಠ ಮುಂದುವರೆಸುತ್ತಿದ್ದರು. ಅಷ್ಟರಲ್ಲಿ ಹೆಡ್ ಮಾಸ್ತರರು ಬಂದು, ಮಕ್ಕಳೇ ಕುಡಿಯೋದು ತಪ್ಪು, ಇದರಿಂದ ಆರೋಗ್ಯ ಹಾಳಾಗುತ್ತೆ ಆದ್ದರಿಂದ ತಾವೆಲ್ಲಾ ಕ.ರಾ.ಮ.ಮಂ. (ಕರ್ನಾಟಕ ರಾಜ್ಯ ಮದ್ಯಪಾನರ ಮಂಡಳಿ) ವಿರುದ್ಧ ಹೋರಾಟ ನಡೆಸಬೇಕು. ಯಾರ್‍ಯಾರು ಹೋರಾಟ ಮಾಡೋಕೆ ಬರ್ತೀರಾ? ಎಂದರು.

ತರಗತಿಯಲ್ಲಿನ ಎಲ್ಲರೂ ಕೈ ಎತ್ತಿದರು. ಆದರೆ ರಮೇಶ ಕೈ ಎತ್ತಲಿಲ್ಲ. ಆಗ,

ಹೆಡ್‌ಮಾಸ್ತರರು : ಯಾಕೋ? ರಮೇಶ ನೀನ್ ಬರಲ್ವಾ?

ರಮೇಶ : ಸಾರ್, ನಮ್ಮಪ್ಪನೇ ಆ ಮಂಡಳಿಗೆ ಅಧ್ಯಕ್ಷ, ಇನ್ನು ನಾನ್ ಹೇಗೆ ಬರಲಿ ಸಾರ್ ಅಂದ.

ಇಡೀ ಕ್ಲಾಸ್ ಗೊಳ್ ಎಂದು ನಕ್ಕು ಬಿಟ್ಟಿತು. ನಂತರ ಇತಿಹಾಸದ ಮಾಸ್ತರರು ಪಾಠ ಮುಂದುವರೆಸುವಾಗ ಯಾರೋ ಇಬ್ಬರು ಹುಡುಗರು ಮಾತನಾಡುತ್ತಿದ್ದರು.

ಮೇಷ್ಟ್ರು : ಏಯ್! ಸೈತಾನ್ಸ್ ಎಷ್ಟು ಸಾರಿ ಹೇಳೋದು ನಿಮಗೆ ಸುಮ್ಮನೆ ಇರಿ ಅಂತ ಅಂದರು.

ಮೇಷ್ಟು ಯಾವಾಗಲೂ ಮಾತಿಗೆ ಮುಂಚೆ ಸೈತಾನ್, ಸೈತಾನ್ ಎಂದು ಬೈಯುತ್ತಿದ್ದರಿಂದ ಇವರನ್ನು ಎಲ್ಲರೂ 'ಸೈತಾನ್ ಮೇಷ್ಟ್ರು' ಎಂದೇ ಬಿರುದನ್ನು ನೀಡಿದ್ದರು. ಹಾಗೋ, ಹೀಗೋ ಮಾಡಿ ಒಂದು ವರ್ಷ ಕಳೆದೇ ಹೋಯಿತು. ಒಂದು ವರ್ಷದ ನಂತರ ಇತಿಹಾಸದ ಮೇಷ್ಟ್ರಿಗೆ ಬೇರೆ ಊರಿಗೆ ವರ್ಗಾವಣೆ ಆಯಿತು. ಹುಡುಗರ ಮುಖದಲ್ಲಿ ಕೋಟಿ ರೂಪಾಯಿ ಲಾಟರಿ ಹೊಡೆದಷ್ಟು ಸಂತೋಷ. ಮೇಷ್ಟ್ರನ್ನು ಬೀಳ್ಕೊಡುವಾಗ ಯಾರಿಗೂ ಒಂದು ತೊಟ್ಟು ಕಣ್ಣೀರು ಬೀಳುವುದಿಲ್ಲ. ಆದರೆ ರಂಗನ ಕಣ್ಣಿನಿಂದ ಒಂದೆರಡು ತೊಟ್ಟು ಕಣ್ಣೀರು ಬಿದ್ದದ್ದು ನೋಡಿ ಮಾಸ್ತರರಿಗೆ ಅಯ್ಯೋ! ಎನಿಸಿ ರಂಗ ಅಳಬೇಡಪ್ಪ. ಮುಂದೆ ನೀನು ದೊಡ್ಡ ವ್ಯಕ್ತಿಯಾಗುತ್ತೀಯಾ.. ಎಂದರು.

ರಂಗ : ಮೇಷ್ಟ್ರೇ, ನೀವು ಬಿಟ್ಟು ಹೋಗುತ್ತಿರುವುದಕ್ಕೆ ನನ್ನ ಕಣ್ಣಲ್ಲಿ ನೀರು ಬರಲಿಲ್ಲ, ಹಾಳಾದ್ ಯಾವ್ದೋ ಕಡ್ಡಿ ಬಂದು ಬಿತ್ತು ಅಷ್ಟೇ ಎಂದ.

ನಂತರ ಮೇಷ್ಟ್ರು ನನ್ನ ಬಗ್ಗೆ ನಿಮ್ಮ ಅಭಿಪ್ರಾಯವನ್ನು ಬರೆದು ನನಗೆ ಕೊಡಿ ಎಂದರು. ಆಗ ಎಲ್ಲರೂ ನೀವು ಹಾಗೆ, ಹೀಗೇ ಎಂದೆಲ್ಲಾ ಬರೆದರು. ರಂಗ ಹೀಗೆ ಬರೆದಿದ್ದ

'ಮೇಷ್ಟ್ರೇ ನೀವು ತುಂಬಾ ಗುಣವಂತರು, ಬುದ್ಧಿಶಾಲಿಗಳು, ತುಂಬಾ ಚೆನ್ನಾಗಿ ಪಾಠ ಮಾಡ್ತೀರಾ, ನಿಮ್ಮ ದೆಸೆಯಿಂದ ಎಲ್ಲಾ ಹುಡುಗರು ಉತ್ತೀರ್ಣರಾಗಿದ್ದಾರೆ - ನೀವು ಸದಾಕಾಲ ಹೀಗೆ ಇರಿ' ಎಂದು ಬರೆದಿದ್ದ. ಇದನ್ನು ನೋಡಿದ ಮಾಸ್ತರರಿಗೆ ಕಣ್ಣಲ್ಲಿ ನೀರು ತುಂಬಿ ಬಂತು. ಆದರೆ ಕೊನೆಯಲ್ಲಿ ಏನೋ ಸಣ್ಣದಾಗಿ ಬರೆದಿರುವುದು ಕಾಣಿಸಿತು. ಅದು ಹೀಗಿತ್ತು.

'ಈ ಮೇಲಿನ ವಿಷಯಗಳೆಲ್ಲವೂ ಕೇವಲ ಕಾಲ್ಪನಿಕ, ಯಾವುದಾದರೂ ಸರಿಯಿದ್ದರೆ ಅದು ಆಕಸ್ಮಿಕ' ಎಂದಾಗಿತ್ತು. ಇದನ್ನು ನೋಡಿದ ಮೇಷ್ಟ್ರು ತಮ್ಮ ಬಗ್ಗೆ ತಾವೇ ನಕ್ಕು ಹೊರಟರು...



'ನಾನು ಲಕ್ಷಾಧೀಶನಾದರೆ?' ಎಂಬುದರ ಬಗ್ಗೆ ಒಂದು ಪ್ರಬಂಧ ಬರೆಯಿರಿ ಎಂದು ಮಾಸ್ತರ್ ಹೇಳಿದರು. ಎಲ್ಲರೂ ಬರೆಯಲು ಆರಂಭಿಸಿದರು. ಒಬ್ಬ ಮಾತ್ರ ಸುಮ್ಮನೆ ಕುಳಿತಿದ್ದ. "ಏಕೆ ಬರೆಯುವುದಿಲ್ಲವೆ?" ಎಂದು ಮಾಸ್ತರ್ ಕೇಳಿದರು. "ನನ್ನ ಸೆಕ್ರೆಟರಿಗಾಗಿ ಕಾದಿದ್ದೇನೆ ಸರ್" ಎಂದ ಅವನು.

# ಅಲ್ಪಜ್ಞನ ವಚನಗಳು

• *ಹಾ.ರಾ.*



**1**

ಲಂಚವನು ತಿಂಬಾಗ ಜಾಮೂನು ಸವಿದಂತೆ
ಲೋಕಾಯುಕ್ತ ಬಲೆಗೆ ಬಿದ್ದಾಗ
ಸಿಂಬಳದ ನೊಣ ಅಲ್ಪಜ್ಞ॥

**2**

ಕೇಳುವ ಕಿವಿಗೆ ಸುದ್ದಿ ಏನಾದೊಡೇನು
ಸಂತೋಷ, ಅಸಂತೋಷ ಬುದ್ಧಿಯ ಗಣಿಯೊಳಗೆ
ಕಿವಿಯರಿಯೊದೊಡೆ ವಜ್ರದೋಲೆಯರಿಯದೆ ಅಲ್ಪಜ್ಞ॥

**3**

ರಿಸಾರ್ಟಿನಿಂದ ಬಂದ ಮಂತ್ರಿ ಊರಿಗೆ
ಗ್ರಾಮವಾಸ್ತವ್ಯಕ್ಕೆ ಕಾಟು, ಕಮೋಡು ಕಾರುಬಾರೊಂದಿಗೆ
ಗ್ರಾಮೋದ್ಧಾರ ವೋಟಿನ ಪೆಟ್ಟಿಗೆಯಲ್ಲಿ ಅಲ್ಪಜ್ಞ॥

**4**

ಭಕ್ತಿ ಇಲ್ಲದ ಯಾತ್ರೆ ವಿರಕ್ತಿ ಇಲ್ಲದ ಚೈತ್ರಯಾತ್ರೆ
ಬೆವರಿನಬುತ್ತಿ ಇಲ್ಲದ ಪಾದಯಾತ್ರೆ
ಬರಿಶವಯಾತ್ರೆ ಅಲ್ಪಜ್ಞ॥

**5**

ಸಪ್ತಪದಿಸುತ್ತಾಗ ಸಪ್ತಸಾಗರ ದಾಟಿದಂತೆ
ಮನೆಗೆಬಂದ ಮಡದಿ ಕುತ್ತಿಗೆ ಮಿದ್ದಾಗ
ಬಾವಿಯಬಳಿ ಕುಪ್ಪಳಿಸುವ ಕಪ್ಪೆಯಂತೆ ಅಲ್ಪಜ್ಞ॥

6

ಮನದಲ್ಲಿ ಮಾನಿನಿಯ ಧ್ಯಾನ
ದೇಹದಂಡನೆ ಇಂದ್ರಿಯಜ್ಞಾನ
ಮಿಥ್ಯಾನಂದನಿಗೆ ಭೋಗವೇಯೋಗ ಅಲ್ವಜ್ಞ॥

7

ಪದ್ಮಾವತಿಗೆ ಹೊಸ ನೆಕ್‌ಲೆಸ್ ಆಸೆ,
ಹಳೆಯ ಕಿರೀಟದ ಮೇಲೆ ತಿಮ್ಮಪ್ಪನ ಕಣ್ಣು
ಅಕ್ಕಸಾಲಿಗನ ಮಜೂರಿಗೆ ಹುಂಡಿಹಣ ಅಲ್ವಜ್ಞ॥

8

ಭೂಮಿತಾಯಿಯು ಉದರ ಬಗೆದು
ಸಿರಿಹೊನ್ನು ಅದಿರುನಿಕ್ಷೇಪ ತೆಗೆದು
ಮರಳಿ ಮಣ್ಣಲ್ಲೇ ಮುಚ್ಚಿಟ್ಟರು ಅಲ್ವಜ್ಞ॥

9

ತನ್ನ ದೇಶದುದ್ದಗಲ ಕಂಡರಿಯದವಗೆ
ವಿದೇಶ ಪರ್ಯಟನೆಯ ಮೋಹ
ಗುಡ್ಡ, ದೂರದ ಕಣ್ಣಿಗೆ ಬೆಟ್ಟ ಅಲ್ವಜ್ಞ॥



10

ರಾಜಕಾರಣಿಯ ಮಾತಿನಜಾಲ
ಶಾವಿಗೆ ಎಳೆಯಲ್ಲಿ ಅಂಗವಸ್ತ್ರವನೇಯ್ದಂತೆ
ನಾ ಹೊಡೆದಂತೆಮಾಡುವೆ, ನೀ ಅತ್ತಂತೆ ಮಾಡು ಅಲ್ವಜ್ಞ॥

11

ಚುನಾವಣೆ ಬಂದರೆ ದೇಶದಲ್ಲಿ ಸುಖಶಾಂತಿ
ಮುಗಿದರೆ ಆಜಾತಿ, ಈಜಾತಿ, ಮೀಸಲಾತಿ
ವೋಟಿಗೆ ಹಣ ಮೀಸಲಿಟ್ಟರೆ ಸಾಕು ಅಲ್ವಜ್ಞ॥

12

ಹೊಟ್ಟೆ ಹಸಿದಾಗ ಎಲ್ಲಾದರೂ ಉಣಬಹುದು
ಅಡಿಗನೋ, ಮಯ್ಯನೋ ಯಾರಾದರೇನು
ಕಿಸೆಯಲ್ಲಿ ಎ.ಟಿ.ಎಂ. ಕಾರ್ಡಿದ್ದರಾಯ್ತು ಅಲ್ವಜ್ಞ॥

**13**

ಉಡಿಗೆ ತೊಡಿಗೆಗಳು ಅವರವರ ದೇಹಕ್ಕೆ ಭಾವಕ್ಕೆ
ದೇಶಕಾಲ ಹವಾಮಾನಕ್ಕೆ ಚೆಂದಕ್ಕೆ
ಗೇಣುಬಟ್ಟೆ ನಾಗರೀಕತೆಯ ಮಾನದಂಡ ಅಲ್ಪಜ್ಞ॥

**14**

ಮಂತ್ರಿಗೆ ಬುದ್ಧಿ ಮಾತುಹೇಳುವುದು
ಕಟುಕನಿಗೆ ಅಹಿಂಸೆಯ ಪಾಠ ಹೇಳುವುದು
ತೈಲವಿಲ್ಲದ ಹಣತೆಯಲಿ ಬತ್ತಿ ಹಚ್ಚಿದಂತೆ ಅಲ್ಪಜ್ಞ॥



**15**

ಕಾಲುಳ್ಳವರು ನಡೆದು ದೇಶಸೇವೆ ಮಾಡಿದರು
ಮುಡಿ ಇದ್ದವರು ಬೋಳಿಸಿ ದೇಶಸೇವೆ ಮಾಡಿದರು
ಎರಡೂ ಇಲ್ಲದವರು ಮೂರೂ ಬಿಟ್ಟರು ದೇಶಕ್ಕಾಗಿ ಅಲ್ಪಜ್ಞ॥

**16**

ಪ್ರಶಸ್ತೀ ವ್ಯಾಮೋಹ ಪ್ರವಾಸೋದ್ಯಮವಲ್ಲ
ಹೋದಲ್ಲಿಬಂದಲ್ಲಿ ಕಾಮಕೇಳಿಯ ಹಗರಣ
ಡಿ.ಎನ್.ಎ.ಟೆಸ್ಟಿಗೆ ಆಹ್ವಾನ ಕೊಟ್ಟಂತೆ, ಅಲ್ಪಜ್ಞ॥

**17**

ಕಾನೂನು ಬಲವಲ್ಲದ ಕಟ್ಟಳೆಯ ಎಷ್ಟು
ವಾದಿಸಿದರೇನು? ಮದ್ದಿಲ್ಲದ ಪಟಾಕಿಯ ಹಚ್ಚಿ
ಬಾಲಕರು ಶಬ್ದಕ್ಕೆ ಕಾದು ಕುಳಿತಂತೆ ಅಲ್ಪಜ್ಞ॥

**18**

ಅರ್ಥವಿಲ್ಲದ ವಾದ ವ್ಯರ್ಥ ಸಾಹಸವಿದ್ದು
ಅರ್ಥಿಯಂ ಕಕ್ಷಿಯನು ಮೆಚ್ಚಿಸಿದೊಡೆ
ಅರ್ಥಲಾಭ ವಿಹದು ಅಲ್ಪಜ್ಞ॥

**19**

ಕೆಳಕೋರ್ಟಿನ ನ್ಯಾಯಾಧೀಶರು
ಹೈಕೋರ್ಟಿಗೆ ಹೋದರು ನ್ಯಾಯ ಕೇಳಲಿಕೆ
ವಕೀಲರನ್ನಿಟ್ಟುಕೊಳ್ಳಲು ''ಟೈಮ್'' ಕೇಳಿದರು ಅಲ್ಪಜ್ಞ॥

**20**

ವೈಕುಂಠದ ಬಾಗಿಲಲಿ ನೂಕುನುಗ್ಗಲು
ತೆರೆದರು ನಾಲ್ಕು ಹೊಸ ಟಿಕೆಟ್ ಬೂತುಗಳು
ದೇವಾಲಯದ ಟ್ರಸ್ಟಿ 'ರಿಯಲ್ ಎಸ್ಟೇಟ್' ಉದ್ಯಮಿ ಅಲ್ವಜ್ಜ॥

**21**

ನವಜಾತ ಶಿಶುವಿಗೆ ಮೊಲೆ ಉಣಿಸಲೊಲ್ಲಳು ತಾಯಿ
ತನ್ನ ರೂಪ ಲಾವಣ್ಯ ಮಾಸದಿರಲೆಂದು
ಮಾತೆಯೇ ಪೂತನಿಯಾದರೆ ಶಿಶು ಶಿಕ್ಷಿಸದೆ, ಅಲ್ವಜ್ಜ॥



**22**

ವೆಬ್ಬಿನಲಿ ಸರಸತಿಯು ಒಲಿದಾಳು
ಪಬ್ಬಿನಲಿ ನಾಲಿಗೆಯ ನುಡಿಸ್ಯಾಳು
ಮಬ್ಬಿನಲಿ ಕೈಹಿಡಿದು ನಡೆಸ್ಯಾಳು ಅಲ್ವಜ್ಜ॥

**23**

ಟೀವಿ ಓದು, ಎಸ್.ಎಂ.ಎಸ್.ಬರಹ
ಈಜುಬಾರದವನ ಎದೆಪಟ್ಟು ಜ್ಞಾನ
ತಳಪಾಯವಿಲ್ಲದ ಬಹುಮಹಡಿ ಕಟ್ಟಡದಂತೆ ಅಲ್ವಜ್ಜ॥



**24**

ನಾ ಕೊಟ್ಟ ಹಣ ಸ್ಮಶಾನಕ್ಕೆ ಹೋದ ಹೆಣದಂತೆ
ಅವಕೊಟ್ಟ ಚೆಕ್ ಗೋಡೆಗೆ ಬಡಿದ ಚೆಂಡಂತೆ
ರೊಕ್ಕದಲೆಕ್ಕ ಅಷ್ಟಕ್ಕಷ್ಟೆ ಅಲ್ವಜ್ಜ॥

**25**

ನಡುವೆ ಅಂತರವಿರಲಿ
ಅವಸರದಿಂದ ಅಪಘಾತವಾಗದಿರಲಿ
ಇದು ಸಂಚಾರ ನಿಯಮಮಾತ್ರವಲ್ಲ ಅಲ್ವಜ್ಜ॥

**26**

ಎಲ್ಲಿ ನೋಡಿದರಲ್ಲಿ ಮೆಟ್ರೋ ಹಳಿಗಳು
ಮೇಲ್ಸೇತುವೆಗಳು, ತಂಗುದಾಣಗಳು
ಮಾವು ಬೇವಿನ ಹಸಿರು ಹೆಸರಿಲ್ಲ ಅಲ್ವಜ್ಜ॥

27
ಮಾತಿನಲಿ ಮೌನದ ಯುಕ್ತಿ
ಮೌನದಲಿ ಮಾತಿನ ಶಕ್ತಿ
ಮಾತು ಮೌನಗಳಲ್ಲಿ ಒಳದನಿಯೊಂದಿಹುದು ಅಲ್ಪಜ್ಞ॥

28
ಪ್ರಜಾಪ್ರಭುತ್ವದ ಯಜ್ಞಕ್ಕೆ ಸಭಾಪತಿಯ ಹವಿಸ್ಸು
ಪೂರ್ಣಾಹುತಿಗೆ ಶಾಸಕರ ಶಿರಸ್ಸು
ವಾಮಾಚಾರದರಕ್ಷೆ ಮಂತ್ರಿಗೆ ಅಲಂಕಾರ ಅಲ್ಪಜ್ಞ॥



29
ಸೀರೆ ಹಂಚುವಾಗ ಚುನಾವಣೆ ಗೆದ್ದಂತೆ
ಸೋತು ಠೇವಣಿ ಕಳಕೊಂಡಾಗ
ಅರಿಶಿನ ಚೊಂಬು ಕೈಗೆ ಕೊಟ್ಟಂತೆ ಅಲ್ಪಜ್ಞ॥

30
ನೀರಿಲ್ಲದೊಡೇನು, ದುಡಿದರೆ ಮೈ ಎಲ್ಲನೀರು
ಕರೆಂಟಿಲ್ಲದೊಡೇನು ಮಿನುಗದೆ ತಾರೆಗಳು
ಮೊಗದ ಮೇಲಿನ ಮುಗುಳ್ನಗೆ ಮಾಸದಿರಲಿ ಅಲ್ಪಜ್ಞ॥

## ಬೇಸರವೇಕೆ?

ಪಂಡಿತನೊಬ್ಬ ಕಂಚಿ ಪರಮಾಚಾರ್ಯರ ಬಳಿ ಬಂದು ತಾನು ಗೀತೆಯನ್ನು ಅರೆದು ಕುಡಿದಿದ್ದೇನೆ ಎಂದು ಹೇಳಿಕೊಂಡ.
ಹಾಗಿದ್ದರೆ ಗೀತೆ ಬಗ್ಗೆ ೧೦ ದಿನಗಳ ಪ್ರವಚನ ನೀಡಿ ಎಂದು ಅವನನ್ನು ಕೇಳಿಕೊಂಡರು. ಅದಕ್ಕೆ ಅವನು ಒಪ್ಪಿದ. ಮೊದಲ ದಿನ ಸುಮಾರು ೫೦ ಮಂದಿ ಹಾಜರಿದ್ದು ಪ್ರವಚನ ಕೇಳಿದರು. ಆದರೆ ಹಾಜರಾತಿ ಕಡಿಮೆ ಆಗುತ್ತಾ ಬಂದಿತು. ಕೊನೆಯ ದಿನ ಪ್ರವಚನ ಕೇಳಿದವರು ಇಬ್ಬರೇ ಇಬ್ಬರು. ಬೇಸರಗೊಂಡ ಪಂಡಿತ ಜನಗಳ ಅಸಡ್ಡೆ ಬಗ್ಗೆ ಪರಮಾಚಾರ್ಯರ ಬಳಿ ದೂರಿಕೊಂಡ.
"ಬೇಸರಪಡದಿರಿ. ಕೃಷ್ಣ ಗೀತಾ ಪ್ರವಚನ ನೀಡಿದಾಗ ಕೇಳಿಸಿಕೊಂಡಿದ್ದು ಒಬ್ಬನೇ" ಎಂದವರು ಅವನಿಗೆ ಸಮಾಧಾನ ಹೇಳಿದರು.

# ಆಟಿಕೆ ಮಾಡಿ ನೋಡಿ

**ದಿನ ಬಳಕೆಯ ವಸ್ತುಗಳಿಂದ ಮಾಡಬಹುದಾದ,**
**ಶ್ರೀ ಅರವಿಂದ ಗುಪ್ತರು ರಚಿಸಿರುವ ಸುಮಾರು ಇನ್ನೂರ**
**ಐವತ್ತು ವೈಜ್ಞಾನಿಕ ಆಟಿಕೆಗಳ ಮಾಹಿತಿಯನ್ನು**
**ಪಿ.ಎಮ್. ಪ್ರಕಾಶ್ ರವರು ಕನ್ನಡಕ್ಕೆ ಭಾಷಾಂತರ ಮಾಡಿ**
**ಇಂಟರ್ನೆಟ್ಟಿನಲ್ಲಿ ಅಳವಡಿಸಿದ್ದಾರೆ**

http://nandiprakash.blogspot.com

**ನಿಮ್ಮ ಮಕ್ಕಳೊಂದಿಗೆ ಆಟಿಕೆಗಳನ್ನು ಮಾಡಿ ಆನಂದಿಸಿ**




# ಇನ್ನೋವೇಟರ್ ಡೈರಿ






• ವಿ. ಸೀತಾರಾಮಯ್ಯ

**ಊ**ಟದ ಹೋಟೇಲೂ ಹೋಟೇಲೇ; ಕಾಫಿ ಹೋಟೇಲೂ ಹೋಟೇಲೇ. ಇಂದು ಈ ಎರಡನೆಯ ಜಾತಿಗೆ ಹಲವಾರು ಹೆಸರಿವೆ: ರೆಸ್ಟೋರೆಂಟ್? ಆ ಭವನ, ಈ ಭವನ, ಕ್ಯಾಂಟೀನ್, ಕೃಫೆ, ಲಂಚ್ ಹೋಂ, ಕೆಬಿನ್, ನಾನಾ ವಿಲಾಸಗಳು, ಮಂದಿರಗಳು–ಇನ್ನೂ ಎಷ್ಟು ಎಷ್ಟೋ. ಅದೆಲ್ಲ ಹೊಸ ಕಾಲದ ಮಾತು. ಹಿಂದಿನ ಕಾಲದಲ್ಲಿ ಆ ಜಾತಿಗೆಲ್ಲ ಕಾಫೀ ಕ್ಲಬ್ಬೆಂದೂ ದೋಸೆ ಅಂಗಡಿಯೆಂದೂ ಲೋಕರೂಢಿಯ ಹೆಸರು. ಜಾತಿವಾಚಕ ಅದು. ಯಾವ ವಿಲಾಸದ ಹೆಸರು ಹಾಕಿದರೂ ಸರಿಯೇ. ಟಿಫಿನ್ ರೂಂ ಎಂದರೂ ಅದೇ. ಇಂಗ್ಲಿಷಿನಲ್ಲಿ ಕಾಫೀ ಕ್ಲಬ್; ಕನ್ನಡದಲ್ಲಿ ದೋಸೆ ಅಂಗಡಿ. ಅಲ್ಲಿ ಕಾಫೀ ಜೊತೆಗೆ ಟೀ ಸಿಕ್ಕುತ್ತಿರಲಿಲ್ಲವೆಂದಲ್ಲ, ಕಾಫೀ ಟೀ ಮೈಗಾಗದವರಿಗೆ ಹಾಲೋ ಕೋಕೊವೋ ದೊರಕುತ್ತಿರಲಿಲ್ಲವೆಂದೂ ಅಲ್ಲ. ದೊರಕುತ್ತಿದ್ದವು. ಅವನ್ನು ಕುಡಿಯುವವರ ಸಂಖ್ಯೆ ಕಡಿಮೆ. ನಮ್ಮಲ್ಲಿ ಕಾಫೀ ಹೊಡೆತವೇ ಹೊಡೆತ. ಕಾಫೀ ಎಂದು ಹುಣಿಸೆಬಿತ್ತ, ಈಚಲುಬಿತ್ತ ಹುರಿದು ಹುಡಿಮಾಡಿ, ಅದೆಂಥುದೇ ಆಗಲಿ, ಯಾವುದರಿಂದ ಮಾಡಿಕೊಡಲಿ ಆ ಅಂಗಡಿಗಳಿಗೆ ಹೋದವರು ಕಾಫಿ ಕುಡಿದೇ ಬರುತ್ತಿದ್ದರು. ಕುಡಿಯಲು ಕಾಫೀ, ತಿನ್ನಲು ದೋಸೆ. ಬರಿಯ ದೋಸೆ ತಿಂದು ಹಿಂತಿರುಗುವ ಮನುಷ್ಯನಿಗೆ ಸಾಧಾರಣವಾಗಿ ಗೌರವ ಕಡಿಮೆ. ಈಗಿನಂತೆಯೇ ಆಗಲೂ, ಮನೆಯಲ್ಲಿ ಗತಿ ಇಲ್ಲದೆಯೊ ಮಾಡುವವರಿಲ್ಲದೆಯೋ ಅಥವಾ ಹಸಿದ ಬಿಕನಾಸಿಗಳು ಹೋಟೆಲಿಗೆ ಹೋಗಿ ಹಾಗೆಮಾಡಬಹುದೇ ಹೊರತು ಗೃಹಸ್ಥರು, ಮರ್ಯಾದಸ್ಥರು ಎಂದಿಗೂ ಹಾಗೆಮಾಡರು. ಮರ್ಯಾದೆ ಬೇಡವೆ, ಸುಮ್ಮನೆ ತಿಂದುಬಂದರೆ ಏನು ಭಾಗ್ಯ? ನಾಯಿ ತಿನ್ನುತ್ತದೆ. ಒಂದೊ ಎರಡೊ ಯಥಾಶಕ್ತಿ ದೋಸೆ ತಿನ್ನಬೇಕು. ಅದನ್ನು ಗಂಟಲಲ್ಲಿ ಸುಖವಾಗಿ ಸಾಗಕಳುಹಿಸಲು ಬಿಸಿಬಿಸಿಯಾಗಿ ಕಾಫೀ ಕೋಡಿ ಇಳಿಸಬೇಕು. ಹೇಗೂ ಕಾಫೀ ಕುಡಿದುಬರುವುದೇ ನಾಗರಿಕವೃತ್ತಿ. ಕೈಯಲ್ಲಿ ಸಾಕಷ್ಟು ಕಾಸಿಲ್ಲವೇನು? ಖಾಲಿ ಕಾಫೀ ಕುಡಿದು ಹಿಂತಿರುಗಿ ಬನ್ನಿ. ಸಂಪ್ರದಾಯ ಇದು.

ಅದು ಹಾಗಿರಲಿ. ನಾನು ಈಗ ಆರಂಭಿಸಿದ್ದು ದೋಸೆಯ ವಿಷಯ ಬರೆಯಲು. ದೋಸೆ

ಒಂದೇ ಅಲ್ಲ, ಹೋಟೆಲಲ್ಲಿ ಮಾಡುವುದು – ಇಡ್ಲಿ, ಉಪ್ಪಿಟ್ಟು ಅಥವಾ ಯಾವುದೋ ಸಿಹಿಯು, ಕಾರದ 'ಬಾತು,' ಪೂರಿ ಇತ್ಯಾದಿ ಏನೇನೊ ಇರಬಹುದು. ಕಾಫೀ ಮಾರದ ಕಾಫೀ ಕ್ಲಬ್ ಹೇಗೆ ಇರಲಾರದೊ ದೋಸೆ ಇಲ್ಲದ ದೋಸೆ ಅಂಗಡಿಯೂ ಇರಲಾರದು. ಇಂದು ಟೀಗೆ ಕರೆದು – ಈ ಜನಕ್ಕೆ ಪ್ರಾಮಾಣಿಕತೆ ಬೇಡವೆ? – ಟೀಯನ್ನೇ ಕೊಡದೆ ಉಪಚಾರಕೂಟಗಳು ನಡೆಯಬಲ್ಲವು. ಕಾಫೀ ಇಲ್ಲವೆನ್ನುವ ಕಾಫೀಕ್ಲಬ್ಬುಗಳು ಹಿಂದೆ ಇರಲಿಲ್ಲ, ಈಗ ಇಲ್ಲ, ನಾಳೆ ಇರಲಾರವು.

ಮೂರು ಬಗೆಗಳಿಗೆ ದೋಸೆಯೆಂದೇ ಸಾಮಾನ್ಯ ಹೆಸರು. ಸಾದಾ, ತುಪ್ಪ, ಮಸಾಲೆ. ಈ ಮೂರು ಬಗೆಯವೂ ದೋಸೆಗಳೇ. ಒಂದೇ ಪದಾರ್ಥದ ರೂಪಾಂತರಗಳು, ರುಚ್ಯಂತರಗಳು, ವಿಶೇಷಗಳು. ಅದರದರ ಗೌರವ ಅದಕ್ಕೆ ಸಲ್ಲುತ್ತದೆ. ಒಂದರ ಪ್ರಿಯರಿಗೆ ಇನ್ನೊಂದು ಕೆಲವೇಳೆ ಹಿಡಿಸದು. ಇದರಲ್ಲಿ ವೀರಪಂಥಗಳುಂಟು. ನನಗೆ ಆ ನಡುವೆ ಜಗಳ ಇಷ್ಟವಿಲ್ಲ. ದೋಸೆ ಅಂಗಡಿಗಳು ಹುಟ್ಟಿದ ಕಾಲದಿಂದಲೂ ಆ ಮೂರು ವರ್ಗದವೂ ಹೆಸರಾದವೇ. ಆದರೂ ಸಾದಾ ಕಂಡರೆ ಅಂಗಡಿಯವನಿಗೆ ಅಷ್ಟು ಗೌರವವಿಲ್ಲ, ತನ್ನ ಪದಾರ್ಥದಲ್ಲಿಯೂ ಗೌರವವಿಲ್ಲ. ಅದನ್ನು ಬಯಸುವವನ ಮೇಲಿನ ವಿಶ್ವಾಸವೂ ಅಷ್ಟಕ್ಕಷ್ಟೇ. ಆದರೆ ತನ್ನ ಗಿರಾಕಿಗಳ ರುಚಿಯೂ ಇಷ್ಟವನ್ನೂ ಈಡೇರಿಸಬೇಕಾದುದು ಅವನ ಪ್ರಯೋಜನವಾದ್ದರಿಂದ ಅದಕ್ಕೆ ಪ್ರಯತ್ನಿಸುತ್ತಾನೆ. ಸಾದಾ ದೋಸೆಗೆ ಕೆಲಸ ಜಾಸ್ತಿ, ಖರ್ಚು ಹೆಚ್ಚು, ಸಂಪಾದನೆ ಕಡಿಮೆ. ಆದ್ದರಿಂದ ಅವನಿಗೆ ಅದರ ಮೇಲೆ ಪಕ್ಷಪಾತವುಂಟಾಗದು. ಇತ್ತ ಇವರಿಗೆ ಇದು ಅಗ್ಗ, ಆರೋಗ್ಯಕರವೆಂದು ಭ್ರಾಂತಿ ಬೇರೆ. ಆರೋಗ್ಯಕ್ಕಾಗಿ ಹೋಟಲಿಗೆ ಹೋಗುವ ಮಂದಿ ಅದು! ಇಂಥ ಎರಡು ಅನುಕೂಲಗಳುಳ್ಳ ಪದಾರ್ಥ ಸಹಜವಾಗಿ ಇವರಿಗೆ ಪ್ರಿಯ. ಒಂದೊಂದು ಸಮಯ ಒಂದು ಮಧ್ಯಸ್ಥವೃತ್ತಿ ಅನುವಾಗುತ್ತದೆ. ಎರಡು ಮೂರಕ್ಕಿಂತ ಕಡಿಮೆ ಸಾದಾದೋಸೆ ಮಾರುವದಿಲ್ಲವೆಂದೊ ಗೊತ್ತಾದ ಒಂದು ಸೆಟ್ ದೋಸೆ ಕೊಳ್ಳಬೇಕೆಂದು ಕ್ರಮ, ಸಮಯ ಏರ್ಪಡುತ್ತದೆ. ಅಂಥ ಕಡೆ ಸೆಟ್ಟಿಗೆ ಎರಡು ಮೂರು ಆಣೆ ಹಾಕಿ ದೋಸೆಗೆ ಗಾತ್ರ ಚಿಕ್ಕದು ಮಾಡಿ ಸಾದಾದೋಸೆಯ ಪ್ರಚಾರವಾಗುವುದು ಪದ್ಧತಿ.

ತುಪ್ಪದ ದೋಸೆಯ ವಿಷಯ ಹಾಗಲ್ಲ. ಸಾಮಾನ್ಯವಾಗಿ ಆ ಬಗೆಯದು ಒಂದೊಂದಕ್ಕೇ ವ್ಯಾಪಾರ. ಜೊತೆ, ಜೋಡಿ 'ತುಪ್ಪಾ' ಅಪರೂಪ. ತುಪ್ಪವೆಂಬ ಯಾವುದನ್ನೋ ಹಾಕಿ ಗರಿಗರಿಯಾಗಿ, ಗರಗ್ಗಾಗಿ ಕಾವಲಿಯವನು ತೆಗೆದುಕೊಟ್ಟರೆ ಮಾಣಿಯೊ ಪೊಯ್ಯನೊ ನಿಮಗೆ ತಂದುಕೊಡುತ್ತಾನೆ. ಆ ನೋಟ ಮೈಗೆ ಪುಳಕ ತರುವ ಪ್ರಸಂಗ. ಒಂದೊಂದು ಅಂಗಡಿಯ ರುಚಿ, ಗರಗು ಆ ಹುಡುಗನ ಸಭ್ಯತೆ, ಶುಚಿ, ಠೀವಿಗಳಂತೆಯೇ ಒಂದೊಂದು. ಚಟ್ನಿಯೊ ಪಲ್ಯವೊ ಹಾಕಿಕೊಂಡು ಹತ್ತಿರ ಬಂದ ಅದನ್ನು ಕಂಡರೆ ಆಗುವ ಆನಂದ ಅತೀವ. ಅವನು ನಿಮಗೆ ತಿಳಿದವನಾಗಿ ಯಜಮಾನನಿಗೆ ನೀವು ಬೇಕಾದರೆ ತುಪ್ಪವೊ ಚಟ್ನಿಯೊ ಗರಗೊ ಸ್ವಲ್ಪ ಸ್ಪೆಷಲ್ ಆಗುವುದು. ಸ್ಪೆಷಲ್ ಬೆಣ್ಣೆ, ಸ್ಪೆಷಲ್ ತುಪ್ಪ, ಈಚಿನ ಕಾಲದವು ನಿಜ. ಆದರೆ ಆ ಹೆಸರುಗಳು ಬಳಕೆಗೆ ಬಾರದ ಬಹು ಮುಂಚೆಯೇ ಸ್ಪೆಷಲ್ ಸಪ್ಲೈ ಆಗುತ್ತಿತ್ತು.

ಮೂರನೆಯ ಜಾತಿ ಮಸಾಲೆಯದು. ಅದರಲ್ಲಿ ಎರಡು ಪಂಗಡ, ಸ್ಪೆಷಲ್ ಭಾಗ ಬಿಟ್ಟು;

ಒಂದು ಬೆಣ್ಣೆಯದು; ಇನ್ನೊಂದು ತುಪ್ಪದ್ದು. ಆ ಎರಡರಲ್ಲಿ ಪಲ್ಯದ್ದು, ಸಾಗುದು. ದೋಸೆಗೆ ಯಾವ ಯಾವ ಮಸಾಲೆ ಮೇಲೆ ಬೀಳುವುದೋ ಯಾವುದಾದರೂ ಬೀಳಲಿ – ದೋಸೆ ಹಾಕಿ ತಿಪ್ಪಿ, ಬೆಣ್ಣೆ, ತುಪ್ಪ, ಚಟ್ನಿ, ಪಲ್ಯ/ಸಾಗು ಹಾಕಿ ಹದವಾದ ಕೂಡಲೆ ಸರಿಯಾಗಿ ಮಡಿಕೆ ಮಡಿಸಿ, ಮೊಗಚುವ ಕೈಯಿಂದ ಪ್ಲೇಟಿಗೊ ಎಲೆಗೊ ಹಾಕಿ ನಿಮ್ಮ ಕೈಗೆ ತಂದುಕೊಟ್ಟರೆ ಕಾವಲಿಯ ಮೇಲೆ ಬಡಿದ ಮೊಗಚುವ ಕೈಯ ನಾದದಿಂದಲೇ ನೆಟ್ಟಗಾದ ಕಿವಿ ಹುರುಪುಗೊಳ್ಳುತ್ತದೆ. ಆ ಸ್ಥಿತಿದೃಶ್ಯ ''ಸಲೆ ಸೊಗಸು.'' ಅದರ ಗಿರಾಕಿ ಕೈ ಹೊಸೆದುಕೊಳ್ಳುವುದು, ಷರಾಯಿ ಮಡಿಕೆ ಸರಿಮಾಡಿಕೊಂಡು ಅದನ್ನು ಗೌರವದಿಂದ ಎದುರುಗೊಳ್ಳುವುದು ಮುಂತಾದ ನೋಟ ಚೆನ್ನ. ಆ ದೋಸೆಯೇ ಆಗಲಿ ಕಾವಲಿಯ ಮೇಲೆ ಕೈಬಡಿದಾಗ, ಹಾಗೆ ಹೀಗೆ ಮೊಗಚಿ ಆಡಿಸಿದಾಗ ಹರಿದೀತೆ? ಚೂರಾದೀತೆ? ಕಾವಲಿಯಿಂದ ಕೈ ಎತ್ತುವಾಗ ಹವಣು ತಪ್ಪಿ ಕೆಳಗೆ ಬಿದ್ದೀತೆ? ಅನಾಮತ್ತು ಬಿಸಿಬಿಸಿಯಾಗಿ ಬರುವ ಅದು ಎದುರಿಗೆ ಸ್ಥಾಪಿತವಾದ ಕೂಡಲೆ ಅದರ ಮಡಿಕೆ ತೆರೆಯುವ ದೃಶ್ಯವೂ ಚೆನ್ನವೇ. ಮುಟ್ಟುವುದಕ್ಕಾಗದಷ್ಟು ಬಿಸಿ. ಮುರಿದುಹೋಗಿ ಬೆರಳಿಗೆ ಬಿಸಿ ತಟ್ಟಿ ಒಂದು ಚೂರೂ ಈಚೆಗೆ ಬಾರದೆ ಬೆರಳು ಸುಟ್ಟ ಹದ ದೋಸೆಗೆ ನಿಜವಾದ ಶಿಫಾರಸ್ಸು ಆಯಿತು. ಇಷ್ಟು ಕಷ್ಟಪಟ್ಟು ಮಾಡಿದ, ತರಿಸಿದ ಆ ಪದಾರ್ಥವನ್ನು ಬಿಡುವುದಕ್ಕಾಗುತ್ತದೆಯೆ? ಹೆಬ್ಬೆರಳಿಂದ ಇತರ ಬೆರಳುಗಳನ್ನು ಸವರಿಕೊಳ್ಳುತ್ತ ತುಟಿಯುಸಿರೂದಿ ಬೆರಳಿಗೂ ದೋಸೆಗೂ ಹಾಯೆನ್ನುವಂತೆ ಮುಂದಿನ ವ್ಯವಹಾರಕ್ಕೆ ಸಜ್ಜುಗೊಳ್ಳುವಾಗ ಕಾಣುವ ಹಾರ್ದಿಕ ಆತುರ, ನಯನ ಮನೋಹರವಾದ್ದು. ತಮ್ಮ ದೋಸೆಗೆ ಕಾಯುತ್ತ ದೂರದಲ್ಲಿ ಕುಳಿತವರಿಗೆ ಮಾತ್ರ ನಿಮಗೆ ದೃಷ್ಟಿ ತಾಕುವಷ್ಟು ಅಸೂಯೆ. ಒಂದು ಕ್ಷಣ ತಾಳಬಾರದೆ, ನೀವು ಕುಳಿತು ಸ್ವಲ್ಪ ಹೊತ್ತಿನ ಮೇಲೆ ಬಂದವರು ಅವರು. ಅವರ ಆರ್ಡರೂ ರಿಜಿಸ್ಟರ್ ಆಗಿದೆ. ದೋಸೆಗೆ ಅವರ ಸರದಿಯೂ ಬರುತ್ತದೆ. ನೋಡಿ: ಬಂತು. ಅಷ್ಟರಲ್ಲಿ ಆತುರ, ಅಸೂಯೆ, ಈ ದೃಷ್ಟಿಪಾತ ಏಕೆ?

ಅಂತೂ ಏನೇ ಹೇಳಿ, ನಿಮ್ಮ ಮೆಚ್ಚಿನ ಹೋಟೆಲಿಗೆ ಹೋಗಿ ದೋಸೆ ತಿನ್ನುವ ಸಂಭ್ರಮ ನಿಜವಾಗಿ ಸಂಭ್ರಮವೇ. ಸ್ವಲ್ಪ ಆರಿದರೆ ಆ ಅಧ್ವಾನ್ನವನ್ನು ಮುಟ್ಟಲಾಗದು. ನಾಲಿಗೆಗೆ ರುಚಿಸದು. ವಾಸನೆ, ತಂಗಳು ಆರಿದ್ದನ್ನು ತಿನ್ನುವುದಕ್ಕೇ ಹೋಟೆಲಿಗೆ ಹೋಗುವುದು? ಬಿಸಿಯ ಹದದಲ್ಲಿ ತಿನ್ನುವ ಸಂತೋಷ ವಾಸ್ತವವಾದ್ದು.

ಈ ಪ್ರಕರಣದಲ್ಲಿ ನನಗೆ ದೋಸೆಯ ಹಿರಿಮೆಗೆ ಇನ್ನೊಂದು ದೊಡ್ಡ ಕಾರಣ ತೋರಿದೆ. ಹೇಳದಿದ್ದರೆ ಮನಸ್ಸಿಗೆ ನ್ಯೂನತೆ ತೋರುತ್ತದೆ. ಉಳಿದ ಎಲ್ಲವನ್ನೂ ಹತ್ತು ಜನರಿಗಾಗಿ ಒಟ್ಟಿಗೆ ಮಾಡುತ್ತಾರೆ. ನಿಮಗಾಗಿಯೇ ಪ್ರತ್ಯೇಕವಾಗಿ ಮಾಡುವುದಿಲ್ಲ. ಹತ್ತು ಜನಕ್ಕೆ ಮಾಡಿದುದರಲ್ಲಿ ನಿಮಗೂ ಭಾಗ; ಹತ್ತರಲ್ಲಿ ನೀವು ಹನ್ನೊಂದು. ದೋಸೆ ಹಾಗಲ್ಲ. ನೀವು ಹೇಳಿದಂತೆ ನಿಮಗೇ ಪ್ರತ್ಯೇಕವಾಗಿ ಅದನ್ನು ಮಾಡಿಕೊಡುತ್ತಾರೆ. ಎರಡು ವ್ಯಕ್ತಿತ್ವಗಳಿಗೆ ಬೆಲೆ ಇಲ್ಲಿ. ದೋಸೆಗೆ, ನಿಮಗೆ. ಈ ವಿಶೇಷ ಅದರ ಸ್ವರೂಪ ಲಕ್ಷಣ. ಸ್ವತಂತ್ರವಾಗಿ ಹುಟ್ಟಿದ ನಮಗೆ ಅಂಥದೇ ಗುಣದ ಆಕರ್ಷಣೆ ಹೋಗುತ್ತದೆಯೆ? ನಿಮಗೆ ಹೇಗೆ ತೋರುವುದೊ ಕಾಣೆ. ನನ್ನ ಮನಸ್ಸಿಗೆ ಈ ವಿಶೇಷತೆ ಬಹು ಮೆಚ್ಚು. ದೋಸೆಯನ್ನು ಆಧುನಿಕ ಸತ್ವವನ್ನಾಗಿರಿಸಿರುವ ಲಕ್ಷಣ ಅದು.



ಇನ್ನೂ ಒಂದು ಸಂಗತಿ: ಏಕೊ ಏನೊ, ಎಷ್ಟು ಚೆನ್ನಾಗಿ ಮಾಡಿದರೂ ಮನೆಯಲ್ಲಿ ಮಾಡಿದ ದೋಸೆ ಹೋಟೆಲದರ ರುಚಿಯ ಸಮಕ್ಕೆ ಬರುವುದಿಲ್ಲವೆನ್ನುತ್ತಾರೆ. ಮನೆಯ ಹೆಂಡತಿಯೇ ಹೀಗೆ ಹೇಳುತ್ತಾಳೆ. ಉತ್ತಮವಾಗಿ ತಾನು ಅಟ್ಟ ದೋಸೆಗಿಂತ ಹೋಟೆಲ್ ದೋಸೆ ಆಕೆಗೂ ಹೆಚ್ಚು ರುಚಿಯೆಂದು ಆಕೆಯ ಬಾಯಿಂದಲೇ ಪದೇ ಪದೇ ಕೇಳಿದ್ದೇನೆ. ಹೆಂಗಸು ತನ್ನ ಗುಣಕ್ಕೆ ಅಪೇಕ್ಷೆ ಕಡಿಮೆ ಮಾಡಿಕೊಂಡು ಇನ್ನೊಂದನ್ನು ಹೊಗಳುವ ಈ ಮನೋವೃತ್ತಿಯನ್ನು ಕಂಡರೆ ಆ ಪದಾರ್ಥದ ಗುಣ ನಿಜವಾಗಿ ವಿಶಿಷ್ಟವಾದ್ದಿರಬೇಕು. ಹೇಗೂ ಆಗಲಿ, ಪ್ರಕಾಂಡವಾದ ಆ ಕಾವಲಿಯ ಪ್ರಭಾವವೋ ಅದರ ಮೇಲೆ ಬಳಿಯುವ ಆ ತೈಲ ತುಪ್ಪದ ಭಾಗ್ಯವೊ ಅದನ್ನು ಬಳಿಯುವ ಆ ಬಟ್ಟೆಯ ಕೂರ್ಚದ ಭಾಗ್ಯವೊ ಆ ಎಲ್ಲದರ ಸಮ್ಮಿಳಿತ ಸೌಭಾಗ್ಯವೊ ಅಂತೂ ಅದರ ಸಮಕ್ಕೆ ಇನ್ನೊಂದು ರುಚಿಬಾರದು.

ನಾನು ಕೆಲವರನ್ನು ಕಂಡಿದ್ದೇನೆ: ಒಬ್ಬರು ಇಬ್ಬರು, ಅತಿಯೆಂದರೆ ಮೂವರು – ಸಂಖ್ಯೆ ಅದಕ್ಕಿಂತ ಹೆಚ್ಚಾದರೆ ಸಂಗ ಗುಂಪಾಗುತ್ತದೆ, ಗುಂಪು ಗೊಂದಲವಾಗುತ್ತದೆ; ಸಂಗ ಒಡೆಯುತ್ತದೆ, ಸಂಗದ ಅಖಂಡತೆಗೆ ಚ್ಯುತಿ ಬರುತ್ತದೆ – ದಿನಾ ಒಂದು ಕಡೆ ಸೇರಿ ಯಾವುದೊ ಒಂದು ಗೊತ್ತಾದ ಕಡೆ ಒಂದು ಮುದ್ದೆ ಬೆಣ್ಣೆಯನ್ನು ಕೊಂಡು, ತಮ್ಮ ಪ್ರೀತಿಯ ದೋಸೆಯಂಗಡಿಗೆ ತೆರಳಿ, ಪ್ರಸನ್ನವಾಗಿ ಬಾಯಿತುಂಬ ನುಡಿದು ತಮಗೆ ತೆರೆಯುವ ಸ್ವಾಗತದೊಡನೆ ಒಳಗೆ ಹೋಗಿ ಕುಳಿತು ಅವನು ಹಾಕುವಷ್ಟು, ಇವರು ಕೇಳುವಷ್ಟು ದೋಸೆಗಳನ್ನು ಹಾಕಿಸಿಕೊಂಡು, ಸಂಗ್ರಹಿಸಿ ತಂದ ನವನೀತವನ್ನು ಹಂಚಿಕೊಂಡು, ಅದನ್ನು ಸವಿದು ತೃಪ್ತರಾಗಿ, ತೃಪ್ತಿಯ ಸಪ್ತಸ್ವರ ಸನ್ನಾದಗಳಿಂದ ವಿಜೃಂಭಿಸುತ್ತ ಅಲ್ಲಿಂದ ಬೇರೆ ಇನ್ನೊಂದು ಅಂಗಡಿಗೆ ಹೋಗಿ ಅಲ್ಲಿ ಸಾಕಷ್ಟು ಕಾಫೀ ಕುಡಿದು ತಮ್ಮ ತಮ್ಮ ಮನೆಗಳಿಗೂ ಕೆಲಸಗಳಿಗೂ ಕಸರತ್ತಿಗೂ ನೆಮ್ಮದಿಯಾಗಿ ಹೋಗುತ್ತಿದ್ದ ಹಿಂದಿನ ಕಾಲದ ಒಂದು ಚಿತ್ರ ನನ್ನ ಕಣ್ಣಿಗೆ ಕಟ್ಟಿದಂತಿದೆ. ಗದ್ದಲದ, ಅವಸರದ ಈ ಕಾಲದಲ್ಲಿ ಇಂಥ ದೃಶ್ಯ ಕಡಿಮೆಯಾಗುತ್ತಿದೆ. ಅಥವಾ ಜನ ಹೆಚ್ಚಾದ್ದರಿಂದ ಕಣ್ಣಿಗೆ ಬೀಳುತ್ತಿಲ್ಲವೊ! ದೋಸೆ ಮಾಡುವವನಿಗೂ ಗಿರಾಕಿಗೂ ನಿಕಟತೆ, ಆಪ್ತತೆ ಪೂರ್ತಿ ಮಾಯವಾಗುತ್ತಿದೆ. ಈ ಸಂಗತಿ ಜನರು ಸತ್ವಹೀನರಾಗಿ, ರುಚಿಹೀನರಾಗಿ ಆಗುತ್ತಿರುವುದಕ್ಕೆ ಸಾಕ್ಷಿಯಲ್ಲವೆನ್ನುತ್ತೀರ? ಏನೋ ಅವಸರ; ಯಾವುದರಲ್ಲಿಯೂ ಅತೃಪ್ತಿ. ಯಾವುದಕ್ಕೂ ಅವಧಾನವಿಲ್ಲ. ಒಂದೇ ಮನಸ್ಸಿನಿಂದ ಪರಿಷ್ಕಾರವಾಗಿ ದೋಸೆ ತಿನ್ನುವ ಪ್ರವೃತ್ತಿಯೂ ಕಾಣೆಯಾಗುತ್ತಿದೆ. ಈ ಕಾಲದ ರಂಗು

ಚುಂಗು ಈಗ್ಗೆ ಬೇರೆ ಇದೆಯಾದರೂ ತುಂಬು ಮನಸ್ಸಿನಿಂದ ಇಷ್ಟವಾದ್ದನ್ನು ಸವಿಯುವ ಹುಮ್ಮಸ್ಸೂ ಹರ್ಷವೂ ಎಲ್ಲಿ ಪೂರ್ತಿ ಹೋಗಿಬಿಡುವುವೊ ಎಂಬ ಶಂಕೆ ನನಗೆ.

ಬೆಂಗಳೂರು ನಿವಾಸಿಗಳಿಗೆ ಎಷ್ಟು ದೋಸೆ ಅಂಗಡಿಗಳು ಪರಿಚಿತವಲ್ಲ! ಎಲ್ಲರಿಗೂ ಎಂದಲ್ಲ, ತಜ್ಞನಿಗೆ. ವಿಶ್ವಾಸವಿರುವವರಿಗೆ. ಉಳಿದವರ ವಿಮುಖರ ಮಾತು ಬೇಡ. ನಾವು ಸಕ್ತರು. ಎಷ್ಟು ಬಗೆಯ ದೋಸೆಗಳು! ಕಾಳಮ್ಮನ ಗುಡಿ ಬೀದಿಯ ಎಡ್ವರ್ಡ್ ದೋಸೆ. ಪಬ್ಲಿಕ್ ಲೈಬ್ರರಿಯ ಹನುಮಂತರಾಯರ ದೋಸೆ. ಬಳೇಪೇಟೆಯ ನಾರಣಪ್ಪನವರ ಮೋಟರ್ ಟೈರ್ ದೋಸೆ. ಉಡುಪಿ ಹೋಟೆಲಿನ ಒಂದೂ ಕಾಲಾಣೆಯ ಮಸಾಲೆ ದೋಸೆ. ಕಂಚೀವಿಳಾಸದ ರಮಢೋಲ್ ದೋಸೆ, ಐಯ್ಯಂಗಾರ್ ಮಾರ್ಕೆಟ್ ಬಳಿಯ ದೋಸೆ ಪ್ರಖ್ಯಾತವಾದ ಭಕ್ಷ್ಯಗಳು. ಗುಣಪಕ್ಷಪಾತಿಗಳೆಲ್ಲರಿಗೂ ಈ ಬಗೆಗಳು ಪರಿಚಿತ. ಇತರ ನೂರಾರು ಅಂಕಿತಗಳು ವಿಶಿಷ್ಟ ಜಾತಿಯವಾದ್ದರಿಂದ ಬಹುಶಃ ಅವು ಸರ್ವಸಾಮಾನ್ಯವಲ್ಲ. ಒಂದೊಂದರ ರುಚಿಯೂ ಒಂದೊಂದು ಕೀರ್ತನೆಗೆ ತಕ್ಕ ಪದಾರ್ಥ. ಎಲ್ಲೆಲ್ಲಿಯ ಪದಾರ್ಥವೂ ಒಂದೇ ರೀತಿ ಒಂದೇ ರುಚಿಯದಾಗುತ್ತಿರುವ ಕಾಲದಲ್ಲಿಯೂ ದೋಸೆ ದೋಸೆಯೇ ಆದ್ದರಿಂದ ಅಪರೂಪವಾಗಿ ಆಯಾ ಅಂಗಡಿಯ ಕೈವಾಡ ಅದಕ್ಕೆ ಉಳಿಯುತ್ತದೆ. ಆಕಾರ, ಗಾತ್ರ, ರುಚಿ, ಹದ, ಪರಿಮಳಗಳಲ್ಲಿ ವಿಶಿಷ್ಟತೆ ಇನ್ನೂ ತಕ್ಕಮಟ್ಟಿಗೆ ರೂಢಿಸಿದೆ. ಮನೆಯನ್ನು ಮಾರಿಯಾದರೂ ದೋಸೆ ತಿನ್ನುವವರಿರುವವರೆಗೂ ಎರಡು ರೂಪಾಯಿಗೆ ಒಂದು ಸೇರು ಅಕ್ಕಿ ಮೂರಕ್ಕೆ ಒಂದು ಸೇರು ಉದ್ದಿನಬೇಳೆ ಆದಾಗಲೂ ಉಳಿದೀತೆಂಬ ಭರವಸೆ ನನಗೆ.

ಈಚೆಗೆ, ಸುಮಾರು 1915ರಲ್ಲಿ, ಬೊಂಬಾಯಿ ಆನಂದಭವನದವರು ಅಂಗಡಿಯಿಟ್ಟಾಗಿನಿಂದ ಅಗಲವಾದ ವಿಜಾತಿಯವಾದ ಪೊರಕೆ ಅಂಚಿನ ರವೆದೋಸೆ ಒಂದು ಪದಾರ್ಥವಾಯಿತಾದರೂ ದೋಸೆಯೆಂದರೆ ಎಂದಿಗೂ ಅಕ್ಕಿಯದೇ ದೋಸೆ. ಹುದುಗು ಇನ್ನಾವುದೇ ಬೀಳಲಿ ಹದಿನಾರಾಣೆ ಹುದುಗೆಂದರೆ ಉದ್ದಿನದೇ ಹುದುಗು. ಸಾಚಾ ಸಾಮಾನಿಗೆ ಬೆರಕೆ ಸೇರದು. ಮೈದಾ ಬೆರಸಲಿ, ಗೋಧಿಹಿಟ್ಟು ಬೆರಸಲಿ ಅಕ್ಕಿಯದೇ – ಹಸಿ ಅಕ್ಕಿ ಮನೆಯಲ್ಲಿ, ಕುದುಪಲಕ್ಕಿ ಹೋಟಲಲ್ಲಿ – ಮೂಲಧಾತು. ಹಿಟ್ಟನ್ನು ಬೆರಸು ಘೋಟಾವಣೆ ತಂತ್ರ ನನಗೊಪ್ಪದು. ದೋಸೆಯ ಹಿಟ್ಟನ್ನು ರುಬ್ಬಿಯೇ ಮಾಡಬೇಕು. ಯಂತ್ರದಲ್ಲಲ್ಲ, ನಾಡೊರಳಲ್ಲಿ; ತಿರುವುಗುಂಡಿನಲ್ಲಿ. ಹಾಗೆ ರುಬ್ಬುವ ವ್ಯಕ್ತಿಯವರ ಆಯ್ಕೆಯಲ್ಲಿಯೂ ಯಜಮಾನರು ಹೆಚ್ಚಿನ ಹುಷಾರನ್ನೂ ವರಣ ಶಕ್ತಿಯನ್ನೂ ಬಳಸಬೇಕಾಗುತ್ತದೆ. ಹಿಂದಿನಕಾಲದಲ್ಲಿ ದೋಸೆ ತಿನ್ನಲು ಹಣವಿಲ್ಲದೆ, ಅದರ ಗೀಳಿರುವವರು ನಾಲ್ಕೊಬ್ಬೆ ಹಿಟ್ಟು ರುಬ್ಬಿಕೊಟ್ಟು ನಾಲ್ಕು ದೋಸೆ ತಿಂದು ಹೋಗುತ್ತಿದ್ದುದುಂಟು. ರುಬ್ಬುವ ವೈಖರಿಯ ಹಿನ್ನೆಲೆ, ಅದರ ಪರಿಣಾಮಕಾರಿ ಹುದುಗು ಹದವಾಗಿ ಸೇರುವ ಬನಿ–ಹಿಟ್ಟಿಗೆ ಬಾರದಾದರೆ ದೋಸೆ ಮಾಡಿದರೂ ಒಂದೇ ಮಾಡದಿದ್ದರೂ ಒಂದೇ.

ದೋಸೆಯ ಅಂಗಡಿಯ ವಿಷಯದಲ್ಲಿ ಇಷ್ಟು ವರ್ಣನೆ ಮಾಡಿದವರನ್ನು ಕುರಿತು ಇಂಥವನಿಗೆ ಮನೆ ಇರಲಾರದು, ಇವನು ಯಾವನೊ ಗುಂಡುಗೋವಿ ಎಂದುಕೊಳ್ಳಬೇಡಿ.

ನಾನು ಗುಂಡೂ ಹೌದು; ನಿಮ್ಮರ್ಥದಲ್ಲಲ್ಲವಾದರೂ ಕೋವಿಯೂ ಹೌದು, ದೋಸೆಯ ಪೂರ್ವಸ್ಥಿತಿಯ ಮೂಲಸಾಧನ ಗುಂಡು; ಕೋವಿ ನಾನು; – ಗುರಿ ಇಟ್ಟರೆ ಕೋವಿಯಿಂದ ಇಟ್ಟಂತೆ ಲಕ್ಷ್ಯಬೇಧನವಾಗುವುದಾದ್ದರಿಂದ ಎದುರುಮಾತು ಉರಿದು ಬೀಳಬೇಕು. ಎರಡು ಸಂಸಾರದ ಸುಖ ಕಂಡವನಿಗೆ ಈ ಬಗ್ಗೆ ಹೆಚ್ಚಿನ ಭಾಗ್ಯ ಸಂಪಾದನೆಯಾಗಿದೆ ಎಂದು ಬೇರೆ ಬೇರೆ ಜೊತೆ ಕೈಬಳೆಗಳ ಗಲುಕಿನಲ್ಲಿ ಪಕ್ವವಾದ ರುಚಿ, ಅನುಭವ ಪಡೆದದ್ದರಿಂದಲೇ ನನಗೆ ವೈವಿಧ್ಯದಲ್ಲಿ ಅಸಹನೆಯಿಲ್ಲ. ಕಾಲೇಜಿನ ನಮ್ಮ ಗುರುಗಳೊಬ್ಬರು ಹಿಂದೆ ಯಾರಿಗೂ ಹೇಳಿದಂತೆ, ನೀವೇಕೆ ಮದುವೆಮಾಡಿಕೊಳ್ಳಲಿಲ್ಲ ಎಂಬುದಕ್ಕೆ ಉತ್ತರವಾಗಿ – ಅವರು, ಬಂದಾ ರೂಪಾಯಿಗಿಂತ ನನಗೆ ಹದಿ ಹದಿನಾರಾಣೆ ಚಿಲ್ಲರೆ ಹೆಚ್ಚು ಪ್ರಿಯ – ""I prefer sixteen annas change to a Rupee" ಎಂದು. ಚಿಲ್ಲರೆಯ ಬೆಲೆಯನ್ನು ನೀವು ಹೇಗೇ ಕಟ್ಟಿ; ಅವರಾಡಿದ ಇಂಗ್ಲೀಷ್ ಮಾತಿನಲ್ಲಿ ಚೇಂಜ್ (change) ಎಂಬ ಮಾತಿದೆ; ಬೇಸರ ನಿವಾರಣದ ವಿವಿಧತೆಯ ಸೂಚಿಕೆಯಾಗಿ. ಚಿಲ್ಲರೆಯ ಗೌರವ ಚಿಲ್ಲರೆಗಿದೆಯಾದರೂ ಚೇಂಜ್-ಕ್ಲಿಯೋಪಾತ್ರ ರಾಣಿಯ – ರಂಗುರಂಜನೆ ಅದಕ್ಕಿಲ್ಲ. ಎಲ್ಲ ದರಲ್ಲಿಯೂ ಎಲ್ಲ ಗುಣವನ್ನೂ ಅರಸುವುದೂ ನಿರೀಕ್ಷಿಸುವುದೂ ಸಾಧುವಲ್ಲವೆಂಬುದು ಮನಸ್ಸಿಗೆ ಸ್ವಲ್ಪ ಸಮಾಧಾನ ತರುತ್ತದೆ.

ದೋಸೆಯನ್ನು ಮಾಡಲು ಬಾರದ ಹೆಣ್ಣು ಕೈ ಯಾವ ಸಂಸಾರಕ್ಕೆ ಬರುತ್ತದೆ? ಈ ಕಾಲದ ನಿಮಗೆಲ್ಲ ಆ ಪುಣ್ಯವಿದೆಯೊ ಇಲ್ಲವೊ ಕಾಣೆನೇ ಹೊರತು ನಮ್ಮ ಕಾಲದವರಿಗೆ ಅದು ಬಿ.ಎ., ಎಂ.ಎಸ್.ಸಿ.ಗಳಿಗಿಂತ ದೊಡ್ಡ ಯೋಗ್ಯತೆ; ಹೆಚ್ಚು ಗಣ್ಯವಾದ ಉಪಾಧಿ. ಮೊದಲು ನಾವು ಹೆಣ್ಣಿನ ವಿಚಾರ ಮಾಡುವಾಗ ಸೀಗೆಪುಡಿ, ಮೆಣಸಿನಪುಡಿ ಮಾಡಬಲ್ಲರೆ? ದೋಸೆಗೆ ರುಬ್ಬುವ ಅಭ್ಯಾಸ, ಭತ್ತ, ಅವಲಕ್ಕಿ ಕುಟ್ಟುವ, ಹಿಟ್ಟು ಬೀಸುವ ಅಭ್ಯಾಸ ಇವೆಯೆ? ಹುಳು ಬೀಳದಂತಹ ಉಪ್ಪಿನಕಾಯಿ ಹಾಕಬಲ್ಲರೆ? ಹಪ್ಪಳ, ಸಂಡಿಗೆ, ಶಾವಿಗೆ ಮುಂತಾದುವನ್ನು ಮಾಡಬಲ್ಲರೆ? ನಾಲ್ಕು ಸೇರಕ್ಕಿ ತಪ್ಪಲೆ ಇಳಿಸಬಲ್ಲರೆ? ಬಟ್ಟೆ ಒಗೆಯಬಲ್ಲರೆ, ಅಭ್ಯಂಜನ ಮಾಡಿಸಬಲ್ಲರೆ? ದೊಡ್ಡ ಅಡಿಗೆ ಮಾಡಿ ಬಡಿಸಿ ತಾವು ಕೆಲವು ಗಂಟೆಗಳು ಹೆಚ್ಚಾಗಿ ಉಪವಾಸ ತಡೆಯಬಲ್ಲರೆ ಎಂದು ಮುಂತಾಗಿ ಪರೀಕ್ಷೆ ನಡೆಸಿದ ಮೇಲೆಯೇ ಮದುವೆಯಾಗುತ್ತಿದ್ದದ್ದು. ನಮ್ಮ ಕಾಲದವರೆಲ್ಲರಿಗೂ ಆ ತರಬೇತು ಇರುತ್ತಿತ್ತು. ಮೊದಲಿಂದ ಹಿಡಿದು ಕಡೆಯವರೆಗೂ ಅವರೇ ಎಲ್ಲ ಮಜಲಲ್ಲಿಯೂ ಆ ಸಂಸ್ಕಾರದಲ್ಲಿ ಪರಾಯಣರಾಗಿರುತ್ತಿದ್ದವರು. ಪರೀಕ್ಷೆಗಳಲ್ಲಿ ಉತ್ತೀರ್ಣರಾಗುತ್ತಿದ್ದವರು. ಅಜ್ಜಿಯೊ ತಾಯೊ ಮಾಡುವುದನ್ನು ನೋಡಿ ಶಾಸ್ತ್ರ ಲಕ್ಷಣಗಳನ್ನು ಕಲಿತ ಗಂಡಿಗೆ ಅದರ ಆಗಮ, ರುಚಿವಿಮರ್ಶನ, ಹದ ಎಲ್ಲ ಗೊತ್ತು. ಮಾಡಲು ಕಲಿತ ಹೆಣ್ಣಿಗೆ ಅದರ ಸಂಭಾರ, ಸಾಧನೆ, ರೂಪಣ, ಬಡಿಸೋಣ ಗೊತ್ತು. ಕಾವಲಿ, ಕಾವು, ಹುಯ್ಯಿ, ಪಾಕ ಗೊತ್ತು. ಒಂದೇ ಸಮನಾಗಿ ಹಿಟ್ಟು ಕಲಸಿಕೊಂಡು ಗಂಟಿಲ್ಲದೆ, ಕಲ್ಲು, ಕರಟ, ಇದ್ದಿಲುಪುಡಿ ಸೇರದೆ, ಒಂದೊಂದಕ್ಕೆ ಎಷ್ಟು ಬೇಕೊ ಅಷ್ಟಷ್ಟನ್ನೇ ಅಳತೆಯ ಸೌಟಿನಲ್ಲಿ ಕಾವಲಿಗೆ ಹಾಕಿ ಬರೆದು, ವಿಷ್ಣುಚಕ್ರದ, ಸೂರ್ಯಚಂದ್ರರ ವರ್ತುಲತೆಯನ್ನು ಧಿಕ್ಕರಿಸುವಂತೆ ತೆಳ್ಳಗೊ ದಪ್ಪಕ್ಕೊ ನಿಮ್ಮಿಷ್ಟವನ್ನು ಅನುಸರಿಸಿ ದೋಸೆ ಹುಯಿದು, ಘೃತವೆಂದರೆ ಘೃತವನ್ನೇ



ಎರೆದು, ತಿರುವಿಹಾಕಿ, ತಿರುಗಿ ಘೃತವೆರೆದು ಎಳಗೆಂಪಗೆ ಅದನ್ನು ಬೇಯಿಸಿ, ಒಂದೆರಡು ಒಳ್ಳೆಯ ಮಾತಾಡಿ ನಿಮಗೆ, ತಮ್ಮನಿಗೆ, ಮಕ್ಕಳಿಗೆ ಆಕೆ ಕೊಡುವಾಗ ಕಾವಲಿಯ ಆ ಸಾನ್ನಿಧ್ಯ, ಹುಯ್ಯುವವರ ಆ ಪ್ರೀತಿಯ ಏಕಾಂತೋಪಚಾರ ದೊರೆತರೆ ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ ಸರ್ವಜ್ಞ. ಅವರು ಮಾಡಿ ಮಾಡಿ ಕೊಡುವುದು, ನಾವು ಬೇಡ ಬೇಡವೆಂದು ತಿನ್ನುವುದು. ಬೇಕಾದ್ದಕ್ಕಿಂತ ಹೆಚ್ಚಾಗುವ ಭಯದ ಮಿತಿಯನ್ನು ಮೀರಿ, ಮಾಡಿದವರಿಗೆ ತೃಪ್ತಿಯುಂಟುಮಾಡುವುದು ಇಂಥಾ ಪ್ರಪಂಚದ ಮಹಾ ಲಕ್ಷಣ. ಹೋಟೆಲಲ್ಲಿ No Admission ಎಂದು ಬೋರ್ಡು ಹಾಕಿ ಒಳಗೆ ಏನೇನನ್ನೋ ಯಾರು ಯಾರೊ ಮಾಡುವ ಆವರಣದಲ್ಲಿ ಈ ಧಾರಾಳವೆಲ್ಲಿ ಬರಬೇಕು? ಅಂಗಡಿ ಸಾಮಾನು ಮಾರುವ ಕೈಯ ಹಿಡಿತಕ್ಕೂ ಕೊಳ್ಳುವ ಕಿಸೆಯ ಮಿತಿಗೂ ನಿರ್ಘೃಣವಾಗಿ ಒಳಪಡುವುದರಿಂದ ಇಕ್ಕಟ್ಟಿಗೆ ಸಿಕ್ಕುವುದು. ಮನೆ, ಅಂಗಡಿ ಎರಡೂ ಒಂದೆಯೇ? ಇದರ ಭೋಗ ಇದಕ್ಕೆ; ಅದರ ಭಾಗ್ಯ ಅದಕ್ಕೆ. ಬೆಲೆಗೆ ಕೊಳ್ಳುವ ಅಂಗಡಿ ಸಾಮಾನಿನ ಮುಖ್ಯ ಲಕ್ಷಣ ಹಿಡಿತ, ಮಿತಿ. ಮಿತದಿಂದಲೇ ಅದರ ವೆಚ್ಚ, ಬೆಲೆ ಹೆಚ್ಚುವುದಾದ್ದರಿಂದಲೂ ಮನೆಯ ತೆರೆಗೈಧಾರಾಳದಿಂದ ತೃಪ್ತಿ ಬರುವುದರಿಂದಲೂ ಪಕ್ಷಪಾತಗಳು ಮನೆಯಿಂದ ಅಂಗಡಿಗೆ ತಿರುಗುವ ವಿಪರೀತಕ್ಕೆ ತುಡಿಯುತ್ತವೆ. ಇಂಥ ಬಯಕೆಗಳು ಬದಲುವುದು ಸಂಸ್ಕಾರ ಪ್ರಭಾವದಿಂದಲ್ಲ; ಚಿತ್ತಚಾಪಲ್ಯದಿಂದ. ಮನೆಯ ಹೆಂಡತಿ ಈ ಚಾಪಲ್ಯಕ್ಕೆ ಈಡಾದರೆ ಸಂಸಾರದ ಗತಿಯೇನು? ಆಕೆಗೆ ಈ ರಹಸ್ಯ ಹೇಗೆ ಅರ್ಥವಾಗಬೇಕು? ಆದ್ದರಿಂದಲೇ ಆಕೆ ಅಂಗಡಿಯ ಪದಾರ್ಥಕ್ಕೆ ಎರಡನೆಯ ಕೈಯಾಗಬೇಕಾಗುವುದು ಪಾಪ.

ಮನೆಯಲ್ಲಿ ದಿನವೂ ಕೇಳಿದಾಗಲೆಲ್ಲ ದೋಸೆ ಮಾಡಲಾದೀತೆ? ಆಗದ ಕೆಲಸ. ಆದರೆ ವಾರಕ್ಕೆ ಮೂರು ನಾಲ್ಕು ದಿನವಂತೂ ನಮಗೆ ಆ ಸೇವೆ ದಶದಶಮಾನಗಳಿಂದ ಸಂದಿದೆ. ತುಂಬು ಅನುಭವದಿಂದ, ನಡೆದ ಸಂತೋಷಗಳ ನೆನಪಿಂದ, ಇನ್ನೂ ಇರದ ಉತ್ಸಾಹದಿಂದ ಆಡುವ ಮಾತು ಇದು. ದೂರದ ಅಡಿಗೆಯ ಮನೆಯಿಂದ ಚೊಯ್ ಎಂಬ ಶಬ್ದ ಕೇಳಿಸಿದೊಡನೆಯೇ ಬೈಠಕ್‌ಖಾನೆಯಲ್ಲಿ ಕಕ್ಷಿಗಾರರ ನಡುವೆ ಕುಳಿತು ಫೀಸು ಕೇಳುತ್ತಿರುವ ಕಿವಿಗೂ ಮೂಗಿಗೂ ಅದರ ಸಂಬಂಧವೇರ್ಪಡುತ್ತದೆ. ಎರಡೂ ಅರಳುತ್ತವೆ. ಒಳಗೆ ಅರಿಯದಂತೆಯೇ ಆಹ್ಲಾದವುದಿಸುವುದು. ದುರ್ದಮ್ಯವಾದ ಪುಳಕ ಬರುವುದು. ಎಲ್ಲ ಸಂತೋಷಗಳ ಅನುಭವದಲ್ಲಿನಂತೆಯೇ ರಕ್ತದ ವೇಗ ಹೆಚ್ಚುವುದು. ಸುತ್ತಲಿನವರ ಗಮನಕ್ಕೆ ಬೀಳದೆ ಬಾಯಲ್ಲಿ ಲಾಲಾಜಲ ಆಡುವುದು; ತಿಳಿಯಾಗುವುದು. ಬೀದಿಯಲ್ಲಿ ಹೋಗುವ ಯಾವನೊ ಪೋರ, ಯಾವನೊ ರಸಿಕ ಎಲ್ಲಿಂದಲೋ ಬರುವ ದೋಸೆಯ ವಾಸನೆಯನ್ನು

ಗ್ರಹಿಸಿ ಗುರುತಿಸುವರು. ವ್ಯಾಖ್ಯಾನ ಮಾಡುವರು. ಅದು ಕೇಳಿಸಿ ಒಂದೇ ಕ್ಷಣದಲ್ಲಿ ಅಸಮಾಧಾನವೂ ಸಮಾಧಾನವೂ ಇತ್ತ ಬೈಠಕ್‌ಖಾನೆಯಲ್ಲಿ ಉಂಟಾಗುವುವು. ಈ ಪ್ರಕರಣದ ಇನ್ನೊಂದು ವಿಶೇಷ: ಕೆಲವು ಗೆಳೆಯರ ಮನೆಯ ದೋಸೆ ಬಹು ಪ್ರಖ್ಯಾತವಾದ್ದರಿಂದ ಆ ಕಾರ್ಯಕ್ರಮದ ವಾಸನೆ ತಟ್ಟಿದರೆ ಸಾಕು, ಸ್ನೇಹಿತರ ಸವ್ವಾರಿ ಅನಿರೀಕ್ಷಿತವಾಗಿ ನೆರೆಯುವುದು. ಐದೈದು ಹತ್ತುಹತ್ತು ನಿಮಿಷಗಳ ಅಂತರದಲ್ಲಿ ಅವರು ಇವರು ದಯಮಾಡಿಸಿ ಸಂತೋಷಕೂಟವನ್ನು ನಡೆಸುವರು. ಮನೆಯವರ ಮನಸ್ಸಿನಲ್ಲಿ ಈ ಅಭ್ಯಾಗತರ ಎಣಿಕೆ ಮೊದಲೇ ಜಮಾ ಆಗಿರುವುದರಿಂದ ಪೂರ್ವಸಿದ್ಧತೆ ಇದ್ದೇ ಇರುತ್ತದೆ. ಮನೆಯ ಹೆಂಡತಿ ಸಂಸಾರಿಯಲ್ಲವೆ? ಆದ್ದರಿಂದಲೇ ಯಾವ ಗೆಳೆಯರೂ ಬಾರದ ದಿನ ನಿಮಗೆ ಪ್ರಶ್ನೆ ಕೇಳಿಬರುತ್ತದೆ: ಇವತ್ತೇನು ಅವರ ಸುಳಿವಿಲ್ಲ? ಇವರ ಭೇಟಿಯಿಲ್ಲ? ಇನ್ನೊಬ್ಬರಿಗೆ ಹೇಳಿಕಳಿಸಬಾರದಿತ್ತೇನು ಮುಂತಾಗಿ.

ಮನೆಯ ದೋಸೆಯವರೆಗೆ ಬಂದಾಯಿತು. ಇವು ಸಾದಾವೂ ಅಲ್ಲ, ತುಪ್ಪವೂ ಅಲ್ಲ; ಎರಡೂ ಹೌದು. ಮನೆಯಲ್ಲಿ ಗೃಹಸ್ಥರು ಭೇದಮಾಡುವುದು ಹೇಗೆ? ಅದು ಸಾದಾವಾದರೂ ಹೋಟೆಲಿನ ಒಣಕಲು ಚಕ್ಕಳವಾಗದು. ತುಪ್ಪವೆಂದರೆ ಹನಿಯುವ ಬಸಿಯುವ 58ರ ಧಾರಾಪುರವಾಗದು. ಜೊತೆಗೆ ಮನೆಯ ಯೋಗ್ಯತೆಗೆ ತಕ್ಕಂತೆ ಮೇಲ್ತುಪ್ಪ ಬೀಳಬೇಕಲ್ಲವೆ? ಕೇಳಲಿ, ಕೇಳದಿರಲಿ, ಹಸ ಎಮ್ಮೆ ಕಟ್ಟಿರುವ ಮನೆಗಳ ಹೈನದ ಸಮೃದ್ಧಿ ದೋಸೆಯ ಮೇಲೆ ದುಮುಕುತ್ತದೆ. ಈ ಬಗೆಗೂ ಇಂದಿಗಿಂತ ನಮ್ಮ ಕಾಲ ಇನ್ನಷ್ಟು ಅನುಕೂಲದ್ದಾಗಿತ್ತು. ಹೊರಗೆ ಹೆಚ್ಚು ದುಡಿತವಿರಲಿಲ್ಲ. ಕಚೇರಿಗೆ ಬೇಕಾದಾಗ ಬೇಕಾದಷ್ಟು ಮಾತ್ರ ಹೋಗಿ ಬರಬಹುದಾಗಿದ್ದ ಕಾಲ. ಹೆಚ್ಚು ಕಾಲ ಕಚೇರಿಯಲ್ಲಿದ್ದ ಮಾತ್ರದಿಂದ ಈಗ ಕೆಲಸ ಹೆಚ್ಚಾಗುತ್ತಿದೆಯೆಂದಲ್ಲ – ಆಗ ಕಾಲಾವಕಾಶ ಧಾರಾಳವಾಗಿರುತ್ತಿತ್ತು ಎನ್ನುವುದಕ್ಕಾಗಿ ಮಾತ್ರ ಹೇಳಿದೆ; ನಿಶ್ಚಿಂತೆಯಿಂದ ಒಳಗೆ ಕುಳಿತು ದೋಸೆ ತಿನ್ನುವುದಕ್ಕೆ. ದಿನದಿನಕ್ಕೆ ಬದುಕು ಬಿಗಡಾಯಿಸುತ್ತಿದೆ. ಯಾವುದಕ್ಕಾಗಿ ದುಡಿತವೋ ಆ ಗುರಿಯ ಸಾಧನೆಗೆ ಸಮಯವೇ ಇಲ್ಲ. ಮನೆ, ಸಂತೋಷ, ಊಟ, ಉಪಚಾರ, ಮಾನ, ಮರ್ಯಾದೆ, ಶಾಂತಿ ಬೇಕೆಂದು ತಾನೆ ಈ ಚಾಕರಿಗಳನ್ನೆಲ್ಲ ನಾವು ಮಾಡುವುದು? ಚಾಕರಿಯ ಅನಿಷ್ಟ ಅಗೌರವಗಳನ್ನೆಲ್ಲ ನುಂಗಿಕೊಳ್ಳುವುದು? ಚಾಕರಿ ಮಾಡುವುದಕ್ಕೊಪ್ಪುವುದು? ಅದಕ್ಕೆ ಬೇಕಾದ ನಾಲ್ಕು ಕಾಸು ಸಂಪಾದಿಸುವುದಕ್ಕೆ ಜೀವಿತ ಕಾಲವೆಲ್ಲ ವೆಚ್ಚವಾಗಿಬಿಡುತ್ತದೆ. ಅದರಲ್ಲಿ ತೊಡಗುವುದು, ಅದನ್ನು ನೆನೆಯುವುದು, ಅದನ್ನೇ ಕುರಿತು ಎಲ್ಲೆಲ್ಲಿಯೂ ಮಾತನಾಡುವುದು, ಅದಕ್ಕಾಗಿ ಸಿದ್ಧವಾಗುವುದು, ಗಾಡಿ, ರೈಲು, ಬಸ್ಸು ಕಾಯುವುದು, ತಡವಾದರೆ ನಿಮಿಷ ನಿಮಿಷ ಎಣಿಸಿ ತಲ್ಲಣಿಸುವುದು. ಪುರುಷಾರ್ಥಕ್ಕಿಂತ ಅದನ್ನು ಸಾಧಿಸುವ ಗಾಸಿಯೇ ನಮ್ಮ ಪಾಲಿಗೆ ಉಳಿಯುವ ಭಾಗ್ಯ ಇಂದು. ಇಂಥ ಕಾಲದಲ್ಲಿ ಸಾವಕಾಶ, ಸಾವಧಾನ ಎಲ್ಲಿಂದ ಬರಬೇಕು? ಅವಕಾಶ, ಅವಧಾನ ದೊರಕುವುದಾದರೆ ದೋಸೆಯ ಸಂಸ್ಕೃತಿಗೆ ಧಕ್ಕೆ ಬರುತ್ತದೆ.

ಮನೆಯ ದೋಸೆಗಳಲ್ಲಿ ಬಗೆಗಳು ಅನೇಕ. ಶುದ್ಧ ಜಾತಿಗಳನ್ನು, ಅವುಗಳಲ್ಲಿ ಮುಖ್ಯವಾದವುಗಳನ್ನು ಮಾತ್ರ ಇಲ್ಲಿ ನೆನಸಿಕೊಳ್ಳಬಹುದು. ಒಂದೊಂದು ಮನೆಗೆ, ಊರಿಗೆ

ಒಂದೊಂದು ಜನಕ್ಕೆ ಒಂದೊಂದು ಬಗೆ ಸಿದ್ಧ. ಬೀದಿಯಲ್ಲಿ ಕುಳಿತು ಮಾರುವ, ಮಡಕೆಯಲ್ಲಿ ಮಾಡಿದ ಕುದುಪಲಕ್ಕಿಯ ದೋಸೆಯಂಥದನ್ನೂ ಸಾಮಾನ್ಯ ಬಳಕೆಯವನ್ನೂ ರೈಲ್ವೆ ಸ್ಟೇಷನ್, ಮಾರ್ಕೆಟ್, ಮಂಡಿಪೇಟೆಗಳಲ್ಲಿ ಅನ್ನದೊಡನೆ ಮಾರುವ ದೋಸೆಯ ಬಗೆಗಳನ್ನೂ ಸದ್ಯಕ್ಕೆ ಬಿಡುತ್ತೇನೆ. ನಡುಮಟ್ಟದವರ ದೋಸೆಯ ವಿಷಯ ಇಲ್ಲಿ ನನಗೆ ಸಂಬಂಧಿಸಿದ್ದು. ಉಳಿದವರ ಪರಿಚಯ ನನಗಿಲ್ಲವಾಗಿ ತಿಳಿಯದ ಅದನ್ನು ಕುರಿತು ನುಡಿದು ಅಪಚಾರ ಮಾಡಲು ನಾನೇನು ವಿಮರ್ಶಕನು ಕೆಟ್ಟೆನೆ? ದೋಸೆಯ ಆಕಾರ, ಸ್ಟ್ಯಾಂಡರ್ಡ್ ಒಬ್ಬೊಬ್ಬರಲ್ಲಿ ಒಂದೊಂದು. ಮುಖ್ಯ ಬಗೆಗಳು ದಪ್ಪ ಜಾತಿಯವು, ತೆಳ್ಳನೆಯವು. ದಪ್ಪದವುಗಳಲ್ಲಿ ಮಖಮಲ್ಲಿನಂತೆ, ಮೈಸೂರುಪಾಕಿನ ಬಿರುಕಿನಂತೆ, ಎಲ್ಲರ ಮನೆಯ ದೋಸೆಯೂ ತೂತೆ, ಕೇಳಿಲ್ಲವೆ? ಜೇನುಗೂಡಿನ ಹಟ್ಟಿಯಂತೆ ಮೃದುವಾದುದು ಒಂದು; ಬಳುಕಿಸದೆ ಎತ್ತಲಾಗದ ತೆಳುವಿನದೂ ನವುರಿನದೂ ಇನ್ನೊಂದು. ಅಗಲವಾದ ದೊಡ್ಡ ಬಿಸ್ಕತ್ತಿನಂತೆ ಉಡುಪಿಯಲ್ಲಿ ಮಾಡುವ ದಪ್ಪ ದೋಸೆ ಅದೊಂದು ಬಗೆ. ಇನ್ನೊಂದು: ಬಾಣಲೆಯಲ್ಲಿ ಮಾಡುವ ಹದದ್ದು; ಇನ್ನೊಂದು ಶ್ರೀಮಂತ, ರಾಜಮಹಾರಾಜರ ಸೇವನೆಗಾಗಿ ಮಾಡುವ ಫೆಲ್ಟ್, ವುರ್ಸ್ಟೆಡ್ ಹದದ ದೋಸೆ; ಇನ್ನೊಂದು ಕೆಲವರಿಗೆ ರುಚಿಸುವ ಪಾರ್ಚ್‌ಮೆಂಟ್ ದೋಸೆ. ಯಾವುದೂ ಹರುಕಲು ಮುರುಕಲು ಆಗಬಾರದು. ಬಹುಶಃ ಒಂದು ಬಗೆಯದನ್ನು ಬಿಟ್ಟು ಸಾಧಾರಣವಾಗಿ ದೋಸೆ ಮುರಿದರೆ ಹಾಕುವ ಕೈ ಪಳಗಿಲ್ಲ ಎಂದರ್ಥ. ಪಳಗದ ಸಂಗತಿಗಳನ್ನು ನನ್ನ ಮುಂದೆತ್ತಬೇಡಿ. ಹಸಿಯಿಲ್ಲದ, ಅಂಟಿಲ್ಲದ, ಸೀಯದ, ಒಣಕಲಲ್ಲದ ಮೃದುವಾದ, ಎಳಗೆಂಪಿನ, ಹಲ್ಲಿಗೆ ಹದವಾಗಿ ನುರಿಯುವ, ಕಡಿದಕೂಡಲೆ ಸಿಹಿಯಾಗುವ, ಬಾಯಲ್ಲಿ ನೀರೂರಿಸುವ ಅಗಿವ ಹೆಚ್ಚು ಅಗತ್ಯಕೊಡದೆ ನಾಲಗೆಯ ತಿರುವಿಗೆ ಸಿಕ್ಕುವ ಪ್ರಕಾರ ಅವ್ವಲ್ ಜಾತಿಯದು. ಉಳಿದವು ಎಷ್ಟೋ ಇವೆ. ಅವನ್ನು ಇತರರು ವರ್ಣಿಸಲಿ.

ಈ ಎಲ್ಲ ರೀತಿಯನ್ನೂ ಕೆಂಡ, ಕಾವಲಿ, ಕೈವಾಡ ಸಾಧಿಸಬಲ್ಲವು, ಅವುಗಳ ಮನಸ್ಸು ಒಲಿದರೆ ಆಕೃತಿಯಾಯಿತು, ರಚನೆಯಾಯಿತು. ಇನ್ನು ರುಚಿಯ ವಿಷಯ ತಿನ್ನುವವರದು. ಅವರ ಭೋಗಕ್ಕಾಗಿಯಲ್ಲವೆ ಎಲ್ಲ ಪ್ರಯತ್ನ? ಅವರು ದೋಸೆ ಮಾಡಬಲ್ಲವರಾಗಬೇಕಿಲ್ಲ. ವಿಮರ್ಶೆ ವ್ಯಾಖ್ಯಾನ ತಿನ್ನುವವರಿಗೆ ಸಂಬಂಧಿಸಿದುದೇ ಹೊರತು ಮಾಡುವವರಿಗಲ್ಲ. ಅವರು ಅಡಿಗೆಯವರಲ್ಲ, ರಸಿಕರು, ವಿಮರ್ಶಕರು; ಅವರ ಖುಷಿಗಾಗಿ, ಭೋಗಕ್ಕಾಗಿ, ಪರಮಾಯಿಷಿಗಾಗಿ ಮಾಡುವವರೆಲ್ಲ ಮಾಡುವುದು, ಮಾಡುವವರ ರುಚಿ ತಿನ್ನುವವರದೂ ಆಗಿದ್ದರೆ ಅಥವಾ ತಿನ್ನುವವರ ರುಚಿಗೆ ತಕ್ಕಂತೆಲ್ಲ ಮಾಡುವವರು ಮಾಡುವರಾದರೆ ಅದೂ ಸರಿಯೇ. ಆದರೆ, ಎಲ್ಲಿಯೇ ಆಗಲಿ ಎಂದೇ ಆಗಲಿ ಸತ್ಯ ಇದು: ನೂರು ತರಹ ದೋಸೆ ಚೆನ್ನಾಗಿರಬಲ್ಲದು. ಇಲ್ಲಿನದೇ ಚೆನ್ನ ಇನ್ನೊಂದಲ್ಲ; ಇದು ಹೀಗಿದ್ದರೆಯೇ ಚೆನ್ನ, ಬೇರೆ ಚೆನ್ನಾಗದು ಎಂಬ ಹಟಮಾರಿತನ ಅವಿವೇಕ. ತಿಳಿದವರ, ಅನುಭವ ರಸಿಕರ ಲಕ್ಷಣವಲ್ಲ, ಮಾತಲ್ಲ. ಯಾರು ಇದಕ್ಕೆಲ್ಲ ಚಿಕಿತ್ಸೆ, ವಿಧಾನ ವಿಧಿಸುವವರು? ಸಿದ್ಧಹಸ್ತದ ವೈದ್ಯಕೊಟ್ಟ ನೀರು, ಬೂದಿ ಪರಮೌಷಧಿಯೂ ಸಂಜೀವನವೂ ಆಗಬಲ್ಲುದು ಎನ್ನುವುದಿಲ್ಲವೆ? ಹಾಗೆಯೇ

ಸಿದ್ಧಹಸ್ತದ ದೋಸೆ – ಸುಕೃತ. ತಾವೇ ಸುಟ್ಟು ಬೆಂದಿರುವ ವಿದಗ್ಧರಿಗೆ ಇದು ವೇದ್ಯವಾದ ಸಂಗತಿ.

ಮನೆಯಲ್ಲಿನವೂ ಎಷ್ಟು ಬಗೆಯವೋ ಪ್ರಕಾರಗಳು ಎಂದೆನಲ್ಲವೆ? ಮೆಂತೆಯದ್ದು, ಕಾಯಿದೋಸೆ, ಉದ್ದಿನದು, ಅವಲಕ್ಕಿಯದು, ಅಕ್ಕಿ ತೊಗರಿ ನುಚ್ಚಿನದು, ತಪ್ಪಲೆ ದೋಸೆ, ರವೆದೋಸೆ, ಮಸಾಲೆ ಹಾಕಿದ್ದು ಹಾಕದ್ದು, ಉರುಳುಗಡ್ಡೆ ಅಥವಾ ಮೂಲಂಗಿ, ಸೌತೆಕಾಯಿ – ಕೆಲವರಿಗೆ ನೀರುಳ್ಳಿ – ತುರಿಯನ್ನೊ ಇನ್ನಾವುದನ್ನೊ ಸೇರಿಸಿ ಹದ ಮಾಡಿದ್ದು, ಬೂದುಗುಂಬಳ, ಸೋರೆ, ಸೌತೆಗಳ ಎಳತಿಳನ್ನು ಬೆರಸಿದ್ದು; ಇತ್ಯಾದಿ. ಕೊತ್ತುಂಬರಿಸೊಪ್ಪು, ಮೆಣಸಿನಕಾಯಿ ಹಾಕಬಹುದು ಬಿಡಬಹುದು. ಕೆಲವಕ್ಕೆ ಹಸಿಯ ತೆಂಗಿನಕಾಯಿ ಸೊಗಸು. ಕೆಲವಕ್ಕೆ ಒಣಕೊಬ್ಬರಿ ತುರಿ ಬೆರೆದಂತೆ ಕಾಯಿತುರಿ ಬೆರೆಯದು. ಆಯಾ ದೋಸೆಗೆ ತಕ್ಕಂತೆ ಚಟ್ನಿಯೊ ಪುಡಿಯೊ ಸಾಹಿತ್ಯಬೇಕು. ಪಲ್ಯಗಳು ಹಾಗೂ ಹೀಗೂ ಹೊಂದುತ್ತವೆಯಾದರೂ ಎಲ್ಲ ಅಲ್ಲ. ದೋಸೆಯ ಜೊತೆಗೆ ಆಲೂ ಪಲ್ಯ ಎತ್ತಿದ್ದು. ನನ್ನ ಗೆಳೆಯರೊಬ್ಬರು ಆಲೂ ಪಲ್ಯಕ್ಕಾಗಿಯೇ ಅಂಗಡಿಯಲ್ಲಿ ದೋಸೆ ಆರ್ಡರ್ ಮಾಡುತ್ತಾರೆ. ಆದರೂ ದೋಸೆಗೆ ಚಟ್ನಿ ಹೊಂದುವಷ್ಟು ಸ್ವಾರಸ್ಯವಾಗಿ ಪಲ್ಯಗಳು ಹೊಂದುವುವೊ ಇಲ್ಲವೊ. ಇದು ರುಚಿಯ ಪಕ್ಷಪಾತ ಭೇದವಾದ್ದರಿಂದ ಅಂಥದನ್ನು ಚರ್ಚಿಸಿ ಫಲವಿಲ್ಲ. ಒಲಿದರೆ ಮಾತ್ರ ಬರಬಲ್ಲ ಒಲವು ಬೇಡಿದರೆ ಬಂದೀತೆ?.... ಬಗೆಬಗೆಯ ಚಟ್ನಿಗಳು ಒಪ್ಪುವುವಾದರೂ ತೆಂಗಿನಕಾಯದು ಉತ್ಕೃಷ್ಟ ಕಾಯಿ ತನಿಯಾಗಿದ್ದಷ್ಟೂ ಸುಖ. ಕಣಿವೆ ಕೆಳಗಿನವರು ತೋಸೈಗೆ ಎಣ್ಣೆ, ಮಳಹಾಯಿ ಪುಡಿ ಸೇರಿಸುವ ಕಯಾಲಿನವರು. ಆ ಸಂಭಾರ ವಿಚಿತ್ರವಾಗಿ ಕಿವಿಗೆ ಕೇಳಿಸಿದರೂ ಕಣ್ಣಿಗೆ ಕಾಣಿಸಿದರೂ ಪರವಾಗಿಲ್ಲ. ನಮ್ಮ ತೂಕಕ್ಕೆ, ಮಾನಕ್ಕೆ ಅದು ಏರದಿದ್ದರೂ ದಕ್ಷಿಣದ ಬಹುಭಾಗಕ್ಕೆ ಪ್ರಿಯವಾದ್ದರಿಂದ ಅದಕ್ಕೆ ಒಂದು ರೀತಿಯ ಬಹುಮತವನ್ನು ಈ ಕಾಲದಲ್ಲಿ ಅಲಕ್ಷಿಸುವ ಹಾಗಿಲ್ಲ. ಆದ್ದರಿಂದ ದೋಸೆ ತಿನ್ನುವಾಗ ದಕ್ಷಿಣದವರನ್ನು ಬಿಟ್ಟರೆ ಉಳಿಯುವ ಹಾಗಿಲ್ಲ. ಉತ್ತರದವರು ದೋಸೆಯ ಪಾಲಿಗಿಲ್ಲ. ಉತ್ತರವೇ ಏಕೆ? ತುಂಗಭದ್ರೆಯಾಚೆಯ ನಮ್ಮ ಸೋದರ ಕನ್ನಡಿಗರಿಗೆ ಕೂಡ ದೋಸೆ ದಕ್ಕಿದ್ದಲ್ಲ. ಮರಾಠಿ, ಹಿಂದೂಸ್ತಾನಿ ಸಂಪ್ರದಾಯದವರು ದೋಸೆ ಒಲಿಯದ ನಿರ್ಭಾಗ್ಯರು. ಅವಕ್ಕಾಗಿ ನಮ್ಮವರೆಗಾದರೂ ಬರಬೇಕು. ಮನೆಯ ದೋಸೆಯೂ ಮದುರೆ, ಶಿತ್ತಂಬಲಂ ದೋಸೆಗಳೂ ಸ್ವಲ್ಪ ಬಿಸಿ ಕಡಿಮೆಯಾದರೂ ರುಚಿಗೆಡವು. ಮನೆಯ ತೆರದವು ಅವು. ಪಲ್ಯವಿದ್ದರೆ ಒಳಿತು; ಇಲ್ಲವಾದರೆ ನಷ್ಟವಿಲ್ಲ.

ದೋಸೆ ಮೃದುವಾಗಿ, ಬಿಸಿಯಾಗಿ, ಸವಿಯಾಗಿ ಆದಾಗ ತಿಂದ ಬಾಯಿ ಚೊಕ್ಕಟವಾಗುವುದು. ಗಂಟೆಗಳವರೆಗೆ ಆ ಸುಖದ ಭಾವನೆ, ನೆನಪು, ಪರಿಮಳ ಉಸಿರಲ್ಲಿ, ಬಾಯಲ್ಲಿ, ಒಳಗೆ ನಿಲ್ಲುತ್ತ ಹಾಯೆನಿಸುತ್ತಿರುವುದು. ಎಷ್ಟರಮಟ್ಟಿಗೆ ಸಂತೃಪ್ತಿ ತುಂಬಿದೆಯೆಂಬುದನ್ನು ಒಳಗು ನಿರಂತರವಾಗಿ ತಿಳಿಸುತ್ತಿರುವುದು. ಒಳ್ಳೆಯ ದೋಸೆ ತಿಂದು ಹೋಗಿದ್ದ, ತಿನ್ನಿಸಿದ್ದ ಆಫೀಸರಿಂದ ದೊಡ್ಡ ಪ್ರಯೋಜನ ಪಡೆದವರುಂಟು. ಲಕ್ಷಾಂತರ ರೂಪಾಯಿನ ಕಂಟ್ರಾಕ್ಟು, ಲೈಸೆನ್ಸು ಬೇಕಾದರೆ ಅದನ್ನು ಪಡೆಯಲು ಇದಕ್ಕಿಂತ ಮೇಲ್ತೆರದ

ಉಪಚಾರ ಬೇರೊಂದಿಲ್ಲವೆನ್ನದವರಿಲ್ಲ. ಬಿದ್ದಿದ್ದ ಎಷ್ಟೋ ಜುಲ್ಮಾನೆಗಳು ವಜಾ ಆಗಿವೆ. ಶಾನುಭೋಗರು ಕಂದಾಯಕ್ಕೆ ವಾಯಿದೆ ಕೊಡಿಸುತ್ತಾರೆ. ಬರ್ತರ್ಫ್ ಆದವರ ಮೇಲಿನ ಆಜ್ಞೆಗಳನ್ನು ಹಿಂದಕ್ಕೆ ತೆಗೆದುಕೊಂಡ ಸಂದರ್ಭಗಳಿವೆ. ತಿಂದಂದು ಮನಸ್ಸು ಪ್ರಸನ್ನ; ದಿಕ್ಕು ದೆಸೆ, ನೆಲ ಜಲ, ಬಾನು ರಸ್ತೆ, ಕಚೇರಿ ಫೈಲು, ಒಳಗೆ, ಸುತ್ತ ಎಲ್ಲವೂ ಪ್ರಸನ್ನ, ನಡೆವ ದಾರಿ ಸುಗಮ. ಲೋಕ ನುಣುಪಾಗಿ ಗಾಜಿನಂತೆ, ಶುಭ್ರವಾದ ಗಾಜಿನಲ್ಲಿನಂತೆ ಕಾಣುವುದು, ಹಾಡಬೇಕೆನ್ನಿಸುವುದು. ಗಟ್ಟಿಯಾಗಿ ಹಾಡಿದರೆ ಅಸಭ್ಯವೆಂದೊ ಕರ್ಕಶವೆಂದೊ ನುಡಿಯುವವರಿಲ್ಲದಿದ್ದರೆ ಗಟ್ಟಿಯಾಗಿಯೇ ಹಾಡೋಣ ವೆನ್ನಿಸುವುದು. ಸಣ್ಣ ದನಿಯನ್ನಾದರೂ ಅಡಗಿಸುವುದು ಅವಶ್ಯವಾಗುವುದು. ಬೀದಿಯಲ್ಲಿ ಕಾಣುವವರಿಗೆಲ್ಲ ಮುದ್ದು ಮುಚ್ಚಟೆ ಹರಡೋಣವೆನ್ನಿಸುವುದು. ದೋಸೆಯ ಹದ ಕೆಡಿಸಿ ನ್ಯಾಯಾಧೀಶರನ್ನು ಬೆಂಚಿಗೆ ಕಳಿಸಿನೋಡಿ; ಯಾವ ದುರ್ದೈವದ ಅಪರಾಧಿಗೊ ಫಾಸಿ ಶಿಕ್ಷೆ ಕಾದಿರುತ್ತದೆ.



ಸ್ನೇಹಿತರೊಬ್ಬರು ಆಕ್ಸ್‌ಫರ್ಡಿಗೆ ಹೋಗಿದ್ದರು. ಅಲ್ಲಿಂದ ಫ್ರಾನ್ಸ್, ಜರ್ಮನಿ, ಇನ್ನೂ ಎಲ್ಲೆಲ್ಲಿಯೊ ಸುತ್ತಿಬಂದವರು ಅವರು. ಊಟದ ರಸಿಕರೂ ಆದ ಪ್ರಯುಕ್ತ ಯಾವ ದೇಶದಲ್ಲಿ ಯಾವುದು ಉತ್ತಮ ಖಾದ್ಯವೊ ಪಾನೀಯವೊ ಅದನ್ನೆಲ್ಲ ಅರಿತು ಬಂದಿದ್ದರು. ಅವರು ಜುಜುಬಿ ನೂರು, ಸಾವಿರ ಸಂಬಳದವರಲ್ಲ. ದೊಡ್ಡ ಕೀರ್ತಿ ಸಂಪಾದಿಸಿದವರು. ಆ ತಿಂಡಿ ಈ ತಿಂಡಿಗಳನ್ನು ವರ್ಣಿಸಿ ನಮಗೆ ಹಕ್ಕಿ, ಹಂದಿ, ದನದ ಫಲಗಳ ಸಹನೆ, ಪ್ರೀತಿ ಉಂಟುಮಾಡಿದರು. ಪಾಶ್ಚಿಮಾತ್ಯರ ಅಡಿಗೆ ಹೇಗೇ ಇರಲಿ ಅವರು ಹೇಗೇ ವರ್ಣಿಸಲಿ, ನಮ್ಮ ಅಡಿಗೆಯ ಹತ್ತಿರಕ್ಕೆ ಬರಲಾರದು ಎಂದು ನಮಗೆ ಶತಕ ಶತಕಗಳಿಂದ, ಏಕೆ ಅಲೆಕ್ಸಾಂಡರ್ ಕಾಲದಿಂದ ತೀರ್ಮಾನವಾಗಿ ಹೋಗಿದೆ. ಉಪ್ಪು, ಹುಳಿ, ಕಾರ ಬೇರೆಯಾಗಿ ಬೆರಸಿಕೊಳ್ಳುವವರ ಊಟವೇನು ಊಟ ಹೇಳಿ. ನಮ್ಮ ಸ್ನೇಹಿತರ ಮುಡಿನುಡಿ ಸಿದ್ಧಾಂತಕ್ಕೆ ಬಂದಿದ್ದ ಅವರ ನಿಶ್ಚಯಕ್ಕೂ ಅಂತಃಪ್ರಮಾಣಕ್ಕೂ ಸಾಕ್ಷಿಯಂತಿತ್ತು. ಅದನ್ನು ಹೇಳುವಾಗ ಅವರ ಮುಖ ಪ್ರಫುಲ್ಲಿತವಾಗಿತ್ತು. ಕಣ್ಣು ತುಟಿ ಅಭಿಮಾನದಿಂದ ಬಿರಿದಿದ್ದವು. ಶುಭ್ರವಾದ ಅವರ ದಂತ ಪಂಕ್ತಿ ಪ್ರಸನ್ನವಾದ ಮುಗುಳುನಗೆಯ ಬೆಳಕಿನಲ್ಲಿ ದೀಪ್ತವಾಗಿತ್ತು.

ಹೇಳಿದರು ಅವರು: ಭೂಮಿಯ ನಾಲ್ಕು ದಿಕ್ಕುಗಳಲ್ಲಿ ತಿರುಗಿಬನ್ನಿ; ಸ್ವರ್ಗದ ಎಂಟು ಗಾಳಿಗಳನ್ನು ಕೇಳಿ ಅವರು ಆ ಕಾಲದಲ್ಲಿ, ಈಗ್ಗೆ 30-35 ವರ್ಷಗಳ ಹಿಂದಿನ ಒಂದು ಸ್ವರ್ಣಯುಗದಲ್ಲಿ - ಇಂಗ್ಲೀಷಿನಲ್ಲಿ ಆಡಿದ ಮಾತು ಅವು. ನನ್ನ ಕಿವಿಯಲ್ಲಿಯೂ ಅಂತಃಕರಣದಲ್ಲಿಯೂ ಮಾರ್ದನಿ ಕೊಡುತ್ತಿವೆ ಇನ್ನೂ ಅವರು ಹೇಳಿದರು: ನಮ್ಮೆರಡು ಮೂರು ಪದಾರ್ಥಗಳಿಗೆ ಸಮನಾದ ಖಾದ್ಯ ಲೋಕದಲ್ಲಿ ಇನ್ನೊಂದಿಲ್ಲ. ಹಿದಕವರೆ ಮೇಲೋಗರ, ತುಣಿ ತೇಂಗೊಳಲು, ಎಲ್ಲಕ್ಕೂ ಅತಿಶಯವಾಗಿ ನಮ್ಮ ದೋಸೆ ಎಂದು. ಇನ್ನಾರಿಗೆ ಹೇಗೆನಿಸುವುದೊ ನನಗಂತೂ ಈ ಸತ್ಯ ವಾದಾತೀತ; ಅಖಂಡ; ಪರಮ ಪ್ರಮಾಣದ್ದು; ಸ್ವಯಂಸಿದ್ಧ. ಅಂಥ ಮಾತಿಗೆ ವೃತ್ತಿಯೇಕೆ? ವ್ಯಾಖ್ಯಾನವೇಕೆ? ಟೀಕೆ ಟಿಪ್ಪಣಿ ಸಲ್ಲದ, ಅವಕ್ಕೆ ಮೀರಿದ, ನಿರ್ವಚನಕ್ಕೆ ಎಟುಕದ, ಅತೀತ ಸತ್ಯ ಅದು. ಸಿದ್ಧ ಸಾಧನಂ ದೋಷಃ ಎನ್ನುವ ತಾರ್ಕಿಕರಾರೂ ಅಲ್ಲಿರಲಿಲ್ಲವಾಗಿ ನಿಂದಾಸ್ತುತಿಮಾಡಿಯೂ ಅದನ್ನು ಹೊಗಳಬೇಕಿರಲಿಲ್ಲ. ನಿಮ್ಮಲ್ಲಿಯೂ ಯಾರೂ ಇರಲಾರಿರಿ. ಇಂತಹ ಸತ್ಯವನ್ನು ಹೊಸತಾಗಿ ಸ್ಥಾಪಿಸಬೇಕಾದ್ದೇನಿದೆ? ಎಂದಿಗೂ ನಮಗೆ ಹೆಮ್ಮೆಯೇ: ಯೋಗ್ಯತೆಯಲ್ಲಿ, ಸಂಸ್ಕೃತಿಯಲ್ಲಿ, ಆಧ್ಯಾತ್ಮ ವಿಚಾರದಲ್ಲಿ, ಮಾತಿನಲ್ಲಿ, ಅಭಿಮಾನದಲ್ಲಿ ನಮ್ಮನ್ನು ಇನ್ನಾವ ಜನಾಂಗ ಮೀರಿಸಬಲ್ಲುದು? ಹೀಗಿರುವಾಗ ದೋಸೆಯನ್ನು ಕುರಿತು ಇಂಥ ಮಹನೀಯರು ಮಾಡಿದ ಪ್ರಶಂಸೆಯನ್ನು ಕಪಟವರಿಯದ ಸ್ನೇಹಿತರೊಡನೆಯೆ ಸಲ್ಲಾಪದಲ್ಲಿ ತೊಡಗಿದ್ದ ಅವರ ಮಾತನ್ನು ಒಪ್ಪದ, ಅದಕ್ಕೆ ಸಂತೋಷಪಡದ ಬಡವು ಯಾವನಿದ್ದಾನು?

ದೋಸೆ ಆರೋಗ್ಯವೋ ಅನಾರೋಗ್ಯವೊ ನಾನರಿಯೆ. ಚೆನ್ನಾಗಿ ದೋಸೆ ಮಾಡಿದರೆ ಎಂತಹ ಸ್ಥಿತಿಯಲ್ಲಿಯೂ ನನಗೇನೂ ಕಬೂಲೇ. ಮನೆಯಲ್ಲಿ ಮಾಡಿದರೆ ಮೂರು, ನಾಲ್ಕು, ಅಂಗಡಿಯದಾದರೆ ಒಂದಾದರೂ ಪೂರ್ತಿ-ಒನ್ ಬೈ ಟೂ, ಥೂ, ಅಲ್ಲ - ಸ್ಪೆಷಲ್ ಮಸಾಲೆ ತಿನ್ನಲು ನಾನಂತೂ ಸಿದ್ಧ... ಒಂದು ಸಲ ಗೆಳೆಯರೊಬ್ಬರ ಮನೆಗೆ ಊಟಕ್ಕೆ ಕರೆದಿದ್ದರು; ಹೋದೆವು. ಸ್ವಲ್ಪ ತಡಮಾಡಿ ಹೋಗಬೇಕಾಯಿತು. ಊಟಕ್ಕೆ ಕುಳಿತು ತೊಡಗಿದ ಒಡನೆಯೇ ಅಲ್ಲಿನ ಯಜಮಾನಿತಿಯರು ನಮ್ಮ ಲಕ್ಷಣವನ್ನು ಗುರುತಿಸಿದರು: 'ನಿಮಗೆ ಆಗಿರಬೇಕು, ಆ ಶನಿ, ಮಸಾಲೆದೋಸೆ; ಊಟ ಹೇಗೆ ರುಚಿಸೀತು; ನಿಮಗಾಗಿ ಈ ಎಲ್ಲ ಅಡಿಗೆ ಮಾಡಿ ಏಕೆ ಕಾಯಬೇಕೊ' ಎಂದರು. ಅದು ಬಹುದಿನದ ಸ್ನೇಹಿತರ ಪ್ರೀತಿಯ ಆಕ್ಷೇಪಣೆಯಾದ್ದರಿಂದ ಕೋಪವುಂಟುಮಾಡಲಿಲ್ಲ. ಆದರೆ ಸಾಮಾನ್ಯವಾಗಿ ಸಂಕೋಚವಿಲ್ಲದ ಕಡೆ ನಾಚಿಕೆಯಾಯಿತೆಂದರೆ ಅದರ ಅರ್ಥವನ್ನು ನೀವು ಗ್ರಹಿಸಿರಿ. ನಿಜವನ್ನೇ ನುಡಿವವರ ಮುಂದೆ ಸುಳ್ಳಾಡುವುದಾದರೂ ಹೇಗೆ? ಆದರೂ, ಆದರೂ... ಅದನ್ನು ಶನಿ ಎನ್ನಬಾರದಾಗಿತ್ತು ಅವರು. ದೋಸೆ ಚೆನ್ನಾಗಿತ್ತು...

ಅವರು ತಾನೇ ಏನು ಮಾಡಿಯಾರು? ನಮಗಾಗಿ ಬೆಳಿಗ್ಗೆಯಿಂದ ದುಡಿದು ಪಲ್ಲೆಯ, ಪಾಯಸ, ಪಕ್ವಾನ್ನಗಳನ್ನು ಮಾಡಿ ಔತಣದ ಊಟಕ್ಕೆ ಕರೆದಿದ್ದವರು. ನಾವು ಗಡದ್ದಾಗಿ ಮೊದಲೇ ಮಸಾಲೆದೋಸೆ ತಿಂದುಹೋದರೆ ಅವರ ಮನಸ್ಸಿಗೆ ಹೇಗೆನಿಸಬೇಕು? ಬೇಸರವಾಗದಿರುತ್ತದೆಯೆ?.. ನೀವೂ ಹಾಗೆಯೇ ಅಂದೀರಿ. ನಿಮ್ಮ ಮಾತಿನಲ್ಲಿ ನಯವಿದೆ;

ಧರ್ಮವಿದೆ. ಅವರಲ್ಲಿ ಸಹಾನುಭೂತಿ, ಗೌರವ ಇವೆ. ಆಕ್ಷೇಪಣೆಯಲ್ಲಿ ಔಚಿತ್ಯವೂ ಪ್ರಕರಣಶುದ್ಧಿಯೂ ಇವೆ. ನಾನು ಬಲ್ಲೆ. ಅಪಾರ್ಥ ಮಾಡಿಕೊಳ್ಳಲಾರದ ಮಡ್ಡಿಯೆ, ಬೊಬ್ಬುಳಿ ತುಂಡೆ ನಾನು? ಆದರೆ ನಮ್ಮ ಪರವಾಗಿಯೂ ಒಂದು ಮಾತನ್ನು ಹೇಳುತ್ತೇನೆ. ಸಹಾನುಭೂತಿ ಹಾದೀತು. ಮನೆಯ ಮಹಾತಾಯಾದ್ದರಿಂದ ಆಕೆಗಂತೂ ಹಾಯಿತು–ಕತೆ ಹೇಳಿದ ಮೇಲೆ. ಅವರ ಮನೆಗೆ ಹೋಗುವ ದಾರಿಯಲ್ಲಿಯೇ ಈ... ಹೋಟಲೇಕಿರಬೇಕು? ಅದರ ಬಾಗಿಲಲ್ಲಿ ಕ್ಯೂ ನಿಂತವರಲ್ಲಿ ಕಾಲೇಜಿನ ಹಳೆಯ ಕಾಲದ ಸ್ನೇಹಿತರು ನಮ್ಮನ್ನೇಕೆ ಗುರುತಿಸಿ ತಡೆದು ನಿಲ್ಲಿಸಬೇಕು? ನಮಗೆ ಅವರೂರಲ್ಲಿ ನೂರಾರು ಉಪಚಾರ ಮಾಡಿದ್ದವರಿಗೆ ನಾವು ಪ್ರತ್ಯುಪಚಾರ ಮಾಡುವುದು ಸರಿಯೆ? ನಾವು ಅವರಿಗೆ ಕೊಡಿಸದಾದರೆ ಹೋಗಲಿ, ಅವರು ಒತ್ತಾಯಮಾಡಿ ನಮ್ಮನ್ನು ಒಳಕ್ಕೆ ಕರೆದರೆ ಬರುವುದಿಲ್ಲವೆಂದು ಬರ್ಬರತೆ ತೋರಿಸುವುದಕ್ಕಾಗುತ್ತದೆಯೆ? ಒಳಗೆ ಹೋದಮೇಲೆ ನಮಗೆ ಬೇಡವೆಂದರೂ ಅವರು ಆರ್ಡರ್ ಮಾಡಿದ ದೋಸೆಯನ್ನು ತಿನ್ನದಿರುವುದೆ? ಚೆನ್ನಾಗಿದ್ದ ಅವರ ರುಚಿಯನ್ನು ಅಲ್ಲಗಳೆಯುವುದು ತರವೆ? ಸಂದರ್ಭಗಳು ಹೀಗೆ ಬೀರಿ ನಮ್ಮನ್ನು ದುರ್ಬಲಗೊಳಿಸಿದರೆ – ನಮ್ಮನ್ನು ಸೋಲಿಸಿದರೆ, ನಮ್ಮ ಸ್ವಾತಂತ್ರ್ಯವನ್ನು ಬಿಗಿದರೆ ಚಂಡಿಸುವುದು ನಾಗರಿಕವಾದೀತೆ? ಸರಿಯಾಗಿ ಇಲ್ಲಿ ಊಟ ಮಾಡುವ ಹಾಗಿರಲಿಲ್ಲವಾಗಿ ಬಂದ ಬೀರಿತ್ತು ಆಕ್ಷೇಪಣೆ. ಬಾಯ ಮಾತು ಕಟ್ಟಿತು.

ಒಂದು ಸಂಗತಿಯಂತೂ ತಥ್ಯ: ಬೇಸರವಾದಾಗ, ಯಾವುದಾದರೂ ಚಿಂತೆ ಕಾಡುವಾಗ, ಅದರಿಂದ ಪಾರಾದ ಹೊರತು ಬದುಕು ದುರ್ಭರವಾದಾಗ, ಆ ಸ್ಥಿತಿಯಿಂದ ಮನಸ್ಸು ಕೆಡುವಂತಿದ್ದರೆ, ವಿಷಮಗೊಳ್ಳುವ ಹಾಗಿದ್ದರೆ ಪಾನವಲ್ಲ, ಅಫೀಮಲ್ಲ ಮದ್ದು. ಸಂಗೀತವಲ್ಲ, ನಾಟ್ಯವೂ ಅಲ್ಲ; ಸ್ನೇಹವಲ್ಲ, ಇನಿಯಳ ಲಲ್ಲೆಯಲ್ಲ ಚಿಕಿತ್ಸೆ. ನನ್ನ ಸಿದ್ಧಾಂತ ಇದು. ಬಹುದಿನದ ಅನುಭವದಿಂದ ಸ್ಥಿರಗೊಂಡದ್ದು. ಮನೋರೋಗಕ್ಕೆ ಮಸಾಲೆದೋಸೆ ಮದ್ದು ಎಂಬುದು ನನ್ನ ಚಿಕಿತ್ಸೆ. ಅಂಥ ಸಂದರ್ಭಗಳಲ್ಲಿ ಎರಡನೆಯ ಯೋಚನೆ ಮಾಡದೆ ಬಲವಾಗಿ ಒಂದನ್ನು ಹಾಕಿಬಿಡಿ. ತಲೆಯ ರಕ್ತ ಒಡನೆಯೇ ಹೊಟ್ಟೆಗೆ ಇಳಿಯುತ್ತದೆ. ಹಲವು ಗಂಟೆಗಳ ಕಾಲ, ನಿಮಗೆ ಪುಣ್ಯವಿದ್ದರೆ ಒಂದೆರಡು ದಿನಗಳ ಕಾಲ ತನ್ನ ಕಡೆಗೇ ತನ್ನ ಪರಿಣಾಮಗಳ ಕಡೆಗೇ ನಿಮ್ಮ ದೇಹವನ್ನೂ ಮನಸ್ಸನ್ನೂ ಸರ್ವ ವ್ಯಾಪಾರಗಳನ್ನೂ ಸೆಳೆದುಹಿಡಿದುಬಿಡುತ್ತದೆ. ಅದರ ಮುಂದೆ ಯಾವ ಚಿಂತೆ ನಿಂತೀತು? ಅಂತಹ ಚಿಂತಾಮಣಿ ಕೈಯಲ್ಲಿರುವಾಗ, ರಸ್ತೆರಸ್ತೆಗೂ ಸಂಸ್ಥೆ, ಸಾಮಗ್ರಿ ಇರುವ ಜನತೆಗೆ ಯಾವ ಮನೋರೋಗ ಬಂದೀತು? ಯಾವ ಬಯಕೆ ಬೇನೆ ಉಂಟಾದಾವು?

*ಮೈಸೂರು ವಿ.ವಿ. ಪ್ರಕಟಿಸಿದ (1982) '**ಗದ್ಯವಿಹಾರ**' ಸಂಪುಟದಿಂದ ಆಯ್ದುಕೊಂಡಿದ್ದು*

# ಗಡಗಡ ನಡುಗಿಸಿದ ಮೇಡಂ !

– ಡಾ|| ಎಚ್. ನರಸಿಂಹಯ್ಯ

ಅಮೆರಿಕಾದಿಂದ ತುಂಬ ಉತ್ಸಾಹದಿಂದ ಬಂದಿದ್ದೆ. ಅಲ್ಲಿದ್ದಾಗಲೂ ನನಗೆ ಕಾಲೇಜಿನದೇ ಯೋಚನೆ. ಯಾವ ಹೊಸ ಯೋಚನೆಗಳನ್ನು ಮೊದಲು ಮಾಡಬೇಕು. ಕಾರ್ಯಕ್ರಮಗಳನ್ನು ನಡೆಸಬೇಕು ಅಂತ ಯೋಚಿಸುತ್ತಿದ್ದೆ. ಕಾಲೇಜು ಮೊದಲಾದಾಗಿನಿಂದಲೂ ನಮ್ಮದು ವಿದ್ಯಾರ್ಥಿಗಳಿಗೆ ಮಾತ್ರ ಸೀಮಿತವಾಗಿತ್ತು. ಹಲವಾರು ಕಾರಣಗಳಿಂದ ನಾವು ಹೆಣ್ಣು ಮಕ್ಕಳನ್ನು ಕಾಲೇಜಿಗೆ ಸೇರಿಸಿಕೊಳ್ಳುತ್ತಿರಲಿಲ್ಲ. ಪ್ರಿನ್ಸಿಪಾಲ್ ಆಗುವುದಕ್ಕಿಂತ ಮುಂಚೆಯೇ ನಾನು ಕಾಲೇಜು ಅಧ್ಯಾಪಕರ ಸಂಘದಲ್ಲಿ (ಕಾಲೇಜು ಕೌನ್ಸಿಲ್) ಮಂಡಿಸಿದ್ದೆ. ಸುಮಾರು ಒಂದು ಗಂಟೆಗಿಂತ ಹೆಚ್ಚು ಕಾಲ ಚರ್ಚೆ ನಡೆಯಿತು. ಕೊನೆಗೆ ವಿಷಯವನ್ನು ಮತಕ್ಕೆ ಹಾಕಿದಾಗ ಹೆಣ್ಣು ಮಕ್ಕಳನ್ನು ಕಾಲೇಜಿಗೆ ಸೇರಿಸಿಕೊಳ್ಳಬೇಕು ಎಂದು ನಿರ್ಧಾರವಾಯಿತು. ಅದಾದ ಸುಮಾರು ಒಂದು ತಿಂಗಳಿಗೆ ನಾನು ಪ್ರಿನ್ಸಿಪಾಲ್ ಆಗಿ ಚುನಾಯಿತನಾದೆ. ಕೋ-ಎಜುಕೇಶನ್ ಯಶಸ್ವಿ ಮಾಡುವುದರಲ್ಲಿ ನನ್ನ ಜವಾಬ್ದಾರಿ ಹೆಚ್ಚಾಯಿತು. ಆದರೆ ಕೋ-ಎಜುಕೇಶನ್ ನನಗೇನೂ ಸಮಸ್ಯೆ ಆಗಲಿಲ್ಲ. ಎಲ್ಲರೂ ಸ್ನೇಹಿತರಂತೆಯೇ ವರ್ತಿಸುತ್ತಿದ್ದರು. ಕೆಲವು ಸಣ್ಣಪುಟ್ಟ ತಮಾಷೆಯಿಂದ ಕೂಡಿದ ಘಟನೆಗಳು ನಡೆಯುತ್ತಿದ್ದವು.

ಒಬ್ಬ ಪುಟ್ಟ ಹುಡುಗಿ ಕಾಲೇಜಿಗೆ 'ಸ್ಕರ್ಟ್' ಹಾಕಿಕೊಂಡು ಬರುವುದನ್ನು ಕಾಲೇಜಿನ ಅಧ್ಯಾಪಕರು ಆಕ್ಷೇಪಿಸಿದರು. ಆ ಹುಡುಗಿ ತುಂಬಾ ಚಿಕ್ಕ ಹುಡುಗಿ. ಅದನ್ನು ಗಂಭೀರವಾಗಿ ತೆಗೆದುಕೊಳ್ಳಬೇಕಾದ ಅವಶ್ಯಕತೆ ಇಲ್ಲ ಎಂದು ಅಧ್ಯಾಪಕರಿಗೆ ಹೇಳಿದಾಗ ಅವರು ಉದಾಸೀನ ಮಾಡಿದರೆ ನಾಳೆ ಮೇಡಂಗಳೂ 'ಸ್ಕರ್ಟ್' ಹಾಕಿಕೊಂಡು ಬರಬಹುದು – ಎಂಬ ಅತಿ ಉತ್ಪ್ರೇಕ್ಷೆಯಿಂದ ವಾದವನ್ನು ಮುಂದಿಟ್ಟರು. 'ಸರಿಯಪ್ಪ ಅವರ ಮನೆಯವರಿಗೆ ಹೇಳ್ತೀನಿ' ಅಂತ ಫೋನ್ ಮಾಡಿ ಆ ಹುಡುಗಿಯ ತಾಯಿಗೆ ತುಂಬಾ ಸಂಕೋಚದಿಂದ ಈ ವಿಷಯ ತಿಳಿಸಿದೆ. 'ಗೊತ್ತಾಯಿತು ಬಿಡಿ ಸಾರ್' ಅಂತ ಆಕೆ ಹೇಳಿದರು. ಮಾರನೆಯ ದಿನ ನಾನು ತರಗತಿಗೆ ಅಕ್ಕಪಕ್ಕ ನೋಡದೆ ನೆಟ್ಟಗೆ ಹೋಗುತ್ತಿದ್ದೆ. ಪಕ್ಕದಲ್ಲಿ ಹೋಗುತ್ತಿದ್ದ ಒಬ್ಬ ಹುಡುಗಿ 'ನಮಸ್ಕಾರ ಸಾರ್' ಅಂತ ನಗುತ್ತಾ ಹೇಳಿದಳು. 'ನಮಸ್ಕಾರಾನಮ್ಮ' ಅಂತ ನೋಡಿದಾಗ ಆ ಚಿಕ್ಕ ಹುಡುಗಿ ಸ್ಕರ್ಟ್ ಬದಲಾಗಿ ಸೀರೆ ಉಟ್ಟುಕೊಂಡಿದ್ದಳು. ನನಗೂ ನಗು ಬಂತು.

ಒಂದು ದಿನ ಯಾವುದೋ ವಿಷಯವನ್ನು ಪ್ರಕಟಿಸುವ ಉದ್ದೇಶದಿಂದ ಬಿ.ಎಸ್.ಸಿ. ಪ್ರಾಣಿ ಶಾಸ್ತ್ರ(ಜೂಯಾಲಿಜಿ) ತರಗತಿಗೆ ಹೋದೆ. ಆಗ ವಿ. ಗೌರಿ ಪಾಠ ಮಾಡುತ್ತಿದ್ದರು. ಒಳಗೆ ಹೋದ ತಕ್ಷಣ ಒಂದು ಬದಲಾವಣೆಯನ್ನು ಕಂಡೆ. ಒಂದು ಬೆಂಚಿನಲ್ಲಿ ವಿದ್ಯಾರ್ಥಿಗಳು ಅವರ ಹಿಂದಿನ ಬೆಂಚಿನಲ್ಲಿ ವಿದ್ಯಾರ್ಥಿನಿಯರು – ಹೀಗೆ ಎಲ್ಲಾ ಬೆರೆತು ಹೋಗಿದ್ದರು. ಆದರೆ ಒಂದು ವ್ಯತ್ಯಾಸವೆಂದರೆ ಒಂದೇ ಬೆಂಚಿನಲ್ಲಿ ವಿದ್ಯಾರ್ಥಿಗಳೂ, ವಿದ್ಯಾರ್ಥಿನಿಯರು ಒಟ್ಟಿಗೆ ಕುಳಿತುಕೊಂಡಿರಲಿಲ್ಲ. ಉಳಿದ ಭೌತಶಾಸ್ತ್ರ, ರಸಾಯನಶಾಸ್ತ್ರ ಗಣಿತಶಾಸ್ತ್ರ – ಮುಂತಾದ ವಿಷಯಗಳಲ್ಲಿ ವಿದ್ಯಾರ್ಥಿಗಳು ಒಂದು ಪಕ್ಕ, ವಿದ್ಯಾರ್ಥಿನಿಯರು ಇನ್ನೊಂದು ಪಕ್ಕ ಕುಳಿತುಕೊಳ್ಳುವ ಪದ್ಧತಿ. ನಂತರ ಗೌರಿಯವರನ್ನು ಕರೆಸಿ, ''ದಯವಿಟ್ಟು ವಿದ್ಯಾರ್ಥಿ, ವಿದ್ಯಾರ್ಥಿನಿಯರನ್ನು ತರಗತಿಯ ಒಂದೊಂದು ಪಕ್ಕದಲ್ಲಿ ಬೇರೆಬೇರೆಯಾಗಿ ಕೂಡಿಸಿ. ಇತರ ತರಗತಿಗಳಲ್ಲಿ ಹಾಗೇನೆ ಕುಳಿತುಕೊಳ್ಳುವುದು. ನಿಮ್ಮಲ್ಲಿ ಕುಳಿತುಕೊಳ್ಳುವುದು ತಪ್ಪು ಅಂತ ಹೇಳುವುದಿಲ್ಲ. ಅದು ಸೂಕ್ಷ್ಮವಾದ ವಿಷಯ (Sensitive Subject)" ಎಂದು ವಿವರಿಸಿದೆ.

ಅದೇ ತರಗತಿಗೆ ಮಾರನೆ ದಿನ ಅವರ ಜೊತೆಯಲ್ಲಿಯೇ ಹೋದೆ. ಎಲ್ಲ ತುಂಬಾ ಗಂಭೀರವಾಗಿ ಎದ್ದು ನಿಂತುಕೊಂಡರು. ವಿದ್ಯಾರ್ಥಿನಿಯರೆಲ್ಲಾ ಮುಂದುಗಡೆ ಬೆಂಚುಗಳಲ್ಲಿ ಕುಳಿತುಕೊಂಡಿದ್ದಾರೆ. ಉಳಿದ ಬೆಂಚುಗಳನ್ನು ಹಿಂದಿನ ಗೋಡೆಯ ತನಕ ಎಳೆದು ಅಲ್ಲಿ ಹುಡುಗರು ಕುಳಿತಿದ್ದರು. ಹೆಣ್ಣು ಮಕ್ಕಳ ಕೊನೆಯ ಡೆಸ್ಕಿಗೂ, ಗಂಡು ಮಕ್ಕಳ ಮೊದಲನೆಯ ಡೆಸ್ಕಿಗೂ 8–9 ಅಡಿ ಅಂತರ. ಆ ಕೊಠಡಿಗೆ ಎರಡು ಬಾಗಿಲುಗಳಿದ್ದು ಒಂದರ ಮೇಲೆ Boys only (ವಿದ್ಯಾರ್ಥಿಗಳು ಮಾತ್ರ); ಇನ್ನೊಂದರ ಮೇಲೆ Girls only (ವಿದ್ಯಾರ್ಥಿನಿಯರು ಮಾತ್ರ) ಅಂತ ಸ್ಪಷ್ಟವಾಗಿ ಸೀಮೆಸುಣ್ಣದಲ್ಲಿ ಬರೆದಿದ್ದರು. ಎಲ್ಲವೂ ಅರ್ಥವಾಯಿತು.

ಎಲ್ಲೆಲ್ಲೂ ಸ್ಮಶಾನಮೌನ. ಯಾವುದೋ ಕಾಲೇಜಿಗೆ ಸಂಬಂಧಪಟ್ಟ ವಿಷಯವನ್ನು ಮಾತನಾಡಿದೆ. ಹರ ಇಲ್ಲ ಶಿವ ಇಲ್ಲ. ಪ್ರತಿಕ್ರಿಯೆ ಸೊನ್ನೆ. ಹಿಂದೆ ಹಾಗಾಗುತ್ತಿರಲಿಲ್ಲ. ನಾನು ಯಾವ ತರಗತಿಗೆ ಪ್ರವೇಶ ಮಾಡಿದರೂ ವಿದ್ಯಾರ್ಥಿಗಳು ಲವಲವಿಕೆಯಿಂದ ಇರುತ್ತಿದ್ದರು. ನಾಲ್ಕೈದು ನಿಮಿಷಗಳು ಹೀಗೆ ಮಾತನಾಡಿ ನೇರವಾಗಿ ಸಮಸ್ಯೆಗೆ ಬರೋಣ ಅಂತ ''ಏಕಪ್ಪ ನೀವೆಲ್ಲಾ ಇವತ್ತು ಹೀಗೆ ಅಸಾಮಾನ್ಯವಾಗಿ ಮೌನವಾಗಿದ್ದೀರಿ'' ಅಂದೆ. ಒಬ್ಬರೂ ತುಟಿಪಿಟಕ್ ಅನ್ನಲಿಲ್ಲ. 'ಹೇಳಿ ಪರವಾಗಿಲ್ಲ ಏನು ವಿಷಯ' ಅಂತ ಸ್ವಲ್ಪ ಚುಚ್ಚಿ ಮಾತಾಡಿದೆ.

'ನಿಮಗೆ ಗೊತ್ತಲ್ಲ ಸಾರ್' ಅಂತ ಒಬ್ಬ ಬಾಯಿ ಬಿಟ್ಟ.

'ಏನಪ್ಪಾ ಅದು, ನನಗೆ ಗೊತ್ತಿಲ್ಲಪ್ಪ' ಅಂದೆ.

''ಆಹಾಹಾ, ಏನ್ ಸಾರ್ ಗೊತ್ತಿಲ್ಲಾ ಅಂತ ಹೇಳ್ತೀರಿ. ನೀವು, ವಿ.ಜಿ. (ವಿ. ಗೌರಿ) ಅವರಿಗೆ ಏನು ಹೇಳಿದ್ದೀರಿ ಸಾರ್?''

''ಅಯ್ಯೋ ಅದೇನಪ್ಪ, ಚಿಕ್ಕ ವಿಷಯ? ಅದನ್ನು ಯಾಕಪ್ಪ ಇಷ್ಟು ಗಂಭೀರವಾಗಿ ತೆಗೆದುಕೊಂಡಿರಿ?''



"ನಮ್ಮಲ್ಲಿ ನಿಮಗೆ ನಂಬಿಕೆ ಇಲ್ಲದಿದ್ದರೆ ನಾವೇನು ಮಾಡೋದು ಸಾರ್? ಈ ಹಿಂದೆ ಕುಳಿತುಕೊಂಡಿದ್ದ ಹಾಗೆ ಕುಳಿತುಕೊಂಡರೆ ಏನಾಗುತ್ತೆ ಸಾರ್'' ಅಂದ. ಒಬ್ಬಿಬ್ಬರು ದನಿಗೂಡಿಸಿದರು. ತರಗತಿ ಲವಲವಿಕೆ ಆಯಿತು. ನನಗೆ ಬೇಕಾದದ್ದು ಅದೇ. ''ನೋಡಿಯಪ್ಪ ಹಿಂದೆ ಕೂತಿದ್ದ ಹಾಗೆ ಕೂತಿದ್ರೆ ಏನಾಗುತ್ತೆ ಅಂತ ಒಬ್ಬ ವಿದ್ಯಾರ್ಥಿ ಕೇಳಿದ. ಒಂದೇ ಡೆಸ್ಕಿನಲ್ಲಿ ವಿದ್ಯಾರ್ಥಿನಿಯರು-ವಿದ್ಯಾರ್ಥಿಗಳು ಪಕ್ಕಪಕ್ಕದಲ್ಲಿ ಕುಳಿತುಕೊಂಡ್ರೆ ಏನಾಗುತ್ತೆ ಅಂತ ಇನ್ನೊಬ್ಬ ಕೇಳಬಹುದು. ಸ್ನೇಹಿತರಾಗಿ ನಾವು ಒಟ್ಟಿಗೆ ಕಾಫಿ ಕುಡಿಯಲು ಹೋಟೆಲಿಗೆ ಹೋದರೆ ಏನಾಗುತ್ತೆ ಅಂತ ಮತ್ತೊಬ್ಬರು ಕೇಳಬಹುದು. ಸಿಸ್ಟರ್ ಅಂತ ತಿಳಿದುಕೊಂಡು ನಾನು ಅವರ ಜೊತೆಯಲ್ಲಿ ಸಿನಿಮಾಕ್ಕೆ ಹೋದರೆ ಏನಾಗುತ್ತೆ ಅಂತ ಮಗದೊಬ್ಬ ಕೇಳಬಹುದು. ನನಗೆ ಇವುಗಳಿಗೆಲ್ಲ ಖಚಿತವಾಗಿ ಉತ್ತರ ಹೇಳುವುದಕ್ಕೆ ಆಗುವುದಿಲ್ಲ. ನಾನು ಇಷ್ಟೇ ಹೇಳುವುದು. ಇನ್ನೊಬ್ಬ ವಿದ್ಯಾರ್ಥಿನಿಯನ್ನು ಪ್ರಯಾಸದಿಂದ ಸಿಸ್ಟರ್ ಅಂತ ತಿಳಿದುಕೊಂಡು ಸಿನಿಮಾಕ್ಕೆ ಹೋಗುವ ಬದಲು ನಿನ್ನ ಸಿಸ್ಟರ್ ಜೊತೆಗೆ ಹೋಗುವುದೇ ಒಳ್ಳೆಯದು'' ಅಂದೆ. ತರಗತಿಗೆ ತರಗತಿಯೇ ಘೊಳ್ ಎಂದು ನಕ್ಕಿತು. ಸಮಸ್ಯೆ ಸುಗಮವಾಗಿ ಪರಿಹಾರವಾಯಿತು. ಅವರೆಲ್ಲಾ 'ಸಾರ್ ಸರ್' ಅಂತ ಹೇಳುತ್ತಾ ಡೆಸ್ಕ್‌ಗಳನ್ನು ಮೊದಲಿದ್ದ ಹಾಗೆಯೇ ಕೂಡಿಸಿ ಒಂದು ಪಕ್ಕದಲ್ಲಿ ವಿದ್ಯಾರ್ಥಿಗಳು ಇನ್ನೊಂದು ಪಕ್ಕದಲ್ಲಿ ವಿದ್ಯಾರ್ಥಿನಿಯರು ಕುಳಿತುಕೊಂಡರು. ''ಥ್ಯಾಂಕ್ ಯು'' ಎಂದು ಹೇಳಿ ಬಂದೆ.

ಕಾಲೇಜಿನ ಒಂದು ಕಾರ್ಯಕ್ರಮಕ್ಕೆ ಮಹಾರಾಣಿ ಕಾಲೇಜಿನ ಪ್ರಾಂಶುಪಾಲರಾಗಿದ್ದ ಪ್ರೊ. ಪಾರ್ವತಮ್ಮನವರನ್ನು ಆಹ್ವಾನಿಸಿದೆವು. ಸಮಾರಂಭಕ್ಕೆ ಮುಂಚೆ ಮಾತನಾಡುತ್ತಿದ್ದಾಗ ಅವರು ಇದ್ದಕ್ಕಿದ್ದ ಹಾಗೆ ''ಇನ್ನೊಂದು ಕಾಲೇಜಿನಲ್ಲಿ ಕೆಲಸ ಮಾಡುತ್ತಿದ್ದ ಒಬ್ಬ ಅಧ್ಯಾಪಕಿಯನ್ನು ನಿಮ್ಮ ಕಾಲೇಜಿಗೆ ಇತ್ತೀಚೆಗೆ ನೇಮಕ ಮಾಡಿಕೊಂಡಿದ್ದೀರಲ್ಲವೇ?'' ಎಂದು ಕೇಳಿದರು. ''ಹೌದು'' ಅಂದೆ. ''ಆಕೆ ಯಾವ ಕಾಲೇಜಿನಲ್ಲಿಯೂ ಕೆಲಸ ಮಾಡಲು ಯೋಗ್ಯಳಲ್ಲ. ಅಂತಹದರಲ್ಲಿ ನಿಮ್ಮಂತಹ ಕಾಲೇಜಿಗೆ ಏಕೆ ತೆಗೆದುಕೊಂಡಿರಿ? ಆಕೆಯ ವಿಷಯ ನಿಮಗೆ ಗೊತ್ತಿಲ್ಲದೆ ತೆಗೆದುಕೊಂಡಿದ್ದೀರಿ. ತೆಗೆದುಕೊಳ್ಳುವುದಕ್ಕಿಂತ ಮುಂಚೆ ಇಂತಹ ವಿಷಯಗಳಲ್ಲಿ ಸ್ವಲ್ಪ ಪೂರ್ವೋತ್ತರ ತಿಳಿದುಕೊಂಡಿದ್ದರೆ ಚೆನ್ನಾಗಿತ್ತು'' ಎಂದು ಹೇಳುತ್ತಾ

ಆಕೆಯ ಚಟುವಟಿಕೆಗಳ ಬಗ್ಗೆ ಒಂದೆರಡು ಉದಾಹರಣೆಗಳನ್ನು ಕೊಟ್ಟರು. ನನಗೆ ಭಯವಾಯಿತು. ಆ ದಿನದ ಕಾರ್ಯಕ್ರಮದಲ್ಲೆಲ್ಲಾ ನನಗೆ ಇದೇನೆ ಯೋಚನೆ. ಮರುದಿನ ಶನಿವಾರ. ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯ ಕೆ. ನಂಜುಂಡ ಶಾಸ್ತ್ರಿಗಳು ನಾನಿದ್ದ ಹಾಸ್ಟೆಲ್ಲಿನ ಕೊಠಡಿಗೆ ಬಂದು ''ಓ ಡಾಕ್ಟ್ರೇ ನಿಮಗೆ ಬಹಳ ಮುಖ್ಯವಾದ, ಸೀರಿಯಸ್ ಆದ ವಿಷಯ ಹೇಳಬೇಕು ಅಂತ ಬಂದಿದ್ದೀನಿ. ನೀವು ಹೊಸದಾಗಿ ನೇಮಕ ಮಾಡಿಕೊಂಡಿರುವ ಅಧ್ಯಾಪಕಿ ನಮ್ಮ ಶಾಲೆಯ ಅಧ್ಯಾಪಕಿಯ ಹತ್ತಿರ ಬಂದು ''ಓ ನೀವು ನನ್ನ ಜೊತೆ ಬನ್ನಿ, ಒಬ್ಬ ಐಶ್ವರ್ಯವಂತನಿರುವ ಹೋಟೆಲಿಗೆ ನಿಮ್ಮನ್ನು ಕರೆದುಕೊಂಡು ಹೋಗ್ತೀನಿ. ಸಾಕಷ್ಟು ಹಣ ಕೊಡ್ತಾನೆ ಅಂತ ಹೇಳಿದರಂತೆ. ಆಕೆ ಅತ್ತುಕೊಂಡು ಬಂದು ನನಗೆ ಹೇಳಿದರು'' ಎಂದು ಶಾಸ್ತ್ರಿಗಳು ಆತಂಕದಿಂದ ಹೇಳಿದಾಗ ನನಗೆ ಷಾಕ್ ಹೊಡೆದ ಹಾಗಾಯಿತು. ಹಿಂದಿನ ದಿನ ಸಾಯಂಕಾಲ ಪ್ರೊ. ಪಾರ್ವತಮ್ಮನವರು ಹೇಳಿದ್ದ ಮರುದಿನವೇ ಸಾಬೀತಾಗಿ ನನಗೆ ದುಗುಡ ಹೆಚ್ಚಾಯಿತು. ಮನಸ್ಸು ತಲ್ಲಣಿಸಿತು. ನಮ್ಮ ಕಾಲೇಜಿನಲ್ಲಿ ನೂರಾರು ಹೆಣ್ಣು ಮಕ್ಕಳಿದ್ದಾರೆ. ಅನೇಕ ಮೇಡಂಗಳಿದ್ದಾರೆ. 'ಏನಪ್ಪಾ ಗತಿ, ಈ ಸಂದಿಗ್ಧ ಸ್ಥಿತಿಯಿಂದ ಹೇಗೆ ಪಾರಾಗುವುದು' ಎಂದು ಗಾಢವಾಗಿ ಯೋಚಿಸಿದೆ. ಮಂಡಳಿಯವರೊಂದಿಗೆ ಆಕೆಯನ್ನು ಕಾಲೇಜಿನಿಂದ ಬಿಡಿಸುವ ಬಗ್ಗೆ ಸಮಾಲೋಚಿಸಿದೆ. ಯಾವುದೇ ತಾತ್ಕಾಲಿಕ ನೇಮಕಾತಿಯನ್ನು ರದ್ದುಗೊಳಿಸಬೇಕಾದರೆ ಒಂದು ತಿಂಗಳ ನೋಟೀಸ್ ಕೊಡಬೇಕು ಅಥವಾ ಅದಕ್ಕೆ ಬದಲಾಗಿ ಒಂದು ತಿಂಗಳ ಸಂಬಳ ಕೊಡಬೇಕು ಎಂಬ ನಿಯಮವಿದೆ. ಅದನ್ನು ಜಾರಿಗೊಳಿಸಬೇಕಾದರೆ ಆಡಳಿತ ಮಂಡಳಿಯ ನಿರ್ಣಯ ಬೇಕು. ಅದಕ್ಕಾಗಿ ಆಡಳಿತ ಮಂಡಳಿಯ ಮೀಟಿಂಗನ್ನು ಕರೆಯಲು ನಿರ್ಧರಿಸಲಾಯಿತು.

ಮರುದಿನ ಸಂಜೆ 7-30ರ ಸಮಯದಲ್ಲಿ ಆಫೀಸಿನಲ್ಲಿದ್ದೆ. ಆಕೆ ಒಳಗೆ ಬಂದರು. ''ಏನ್ ಸಾರ್, ನನ್ನನ್ನು ಕೆಲಸದಿಂದ ತೆಗೆದುಹಾಕಲು ಯೋಚನೆ ಮಾಡುತ್ತಿದ್ದೀರಂತೆ. ಏತಕ್ಕೆ ಹಾಗೆ ಮಾಡ್ತಾ ಇದ್ದೀರಿ'' ಅಂತ ಗಡುಸಾಗಿಯೇ ಕೇಳಿದರು.

''ನಾವು ನಿಮ್ಮನ್ನು ತಾತ್ಕಾಲಿಕವಾಗಿ ನೇಮಕ ಮಾಡಿಕೊಂಡೆವು. ಈಗ ಅಷ್ಟು ಕೆಲಸ ಇಲ್ಲ ಅಂತ ಗೊತ್ತಾಯಿತು. ಜೊತೆಗೆ ನಿಮ್ಮ ಕೆಲಸ ಪರೀಕ್ಷೆಗೆ ಸಂಬಂಧಪಟ್ಟದ್ದಲ್ಲ. ಅದಕ್ಕಾಗಿ ಆ ಹುದ್ದೆಯನ್ನೇ ರದ್ದುಮಾಡಬೇಕೆಂದು ಯೋಚಿಸುತ್ತಿದ್ದೇವೆ.''

''ಏನ್ ಸಾರ್, ನಾನು ಬಂದು ಇನ್ನೂ ಎಂಟು ದಿನಗಳಾಗಲಿಲ್ಲ. ಆಗಲೇ ನನ್ನನ್ನು ತೆಗೆದುಹಾಕಬೇಕು ಅಂತ ಇದ್ದೀರಿ. ನನ್ನ ವಿಷಯದಲ್ಲಿ ನಿಮಗೆ ಯಾರೋ ಏನೋ ಹೇಳಿರಬೇಕು. ನನ್ನ ವಿಷಯ ತಿಳಿದುಕೊಳ್ಳಬೇಕಾದರೆ ನೀವು ಇವರನ್ನು ಕೇಳಿ, ಅವರನ್ನು ಕೇಳಿ'' ಅಂತ ಎರಡು ಹೆಸರನ್ನು ಅಗ್ರಹಪೂರ್ವಕವಾಗಿ ಹೇಳಿದಳು. ಆ ಹೆಸರುಗಳನ್ನು ಕೇಳಿದ ತಕ್ಷಣ ನನ್ನ ಸಂಶಯ ಖಾಯಂ ಆಯಿತು.

''ಇಲ್ಲಮ್ಮ ನಿಮ್ಮ ವಿಷಯ ನನಗೆ ಯಾರೂ ಏನೂ ಹೇಳಲಿಲ್ಲ. ನಿಜವಾಗಿಯೂ ನಮಗೆ ಆ ಹುದ್ದೆ ಈಗ ಬೇಕಾಗುವುದಿಲ್ಲ'' ಎಂದೆ.

''ಇದನ್ನೆಲ್ಲಾ ನಾನು ನಂಬುವುದಿಲ್ಲ. ಹಾಗೇನಾದರೂ ನನ್ನನ್ನು ಕೆಲಸದಿಂದ ತೆಗೆದರೆ ನಿಮ್ಮನ್ನು ಮುಗಿಸ್ತೀನಿ, ಹುಷಾರಾಗಿರಿ'' ಅಂತ ಆರ್ಭಟಿಸುತ್ತಾ ಹೆದರಿಸಿ ಹೋದರು. ಅಯ್ಯೋ ಭಗವಂತ ಒಳ್ಳೆಯ ಕಷ್ಟ ಬಂತಲ್ಲಪ್ಪಾ ಅಂತ ಅಂದುಕೊಂಡೆ. ಅನಿರೀಕ್ಷಿತ ಬೆಳವಣಿಗೆಗಳಾದಾಗಲೆಲ್ಲ 'ಭಗವಂತ' ಎಂದು ಸಲೀಸಾಗಿ ಹೇಳುವುದು ನನ್ನ ಅಭ್ಯಾಸ. ನನಗಂತೂ ಯೋಚನೆಯ ಮೇಲೆ ಯೋಚನೆ. ಒಂದೆರಡು ದಿನಗಳಾದ ಮೇಲೆ ಮೀಟಿಂಗ್ ನಡೆಯಿತು. ಒಂದು ತಿಂಗಳ ಸಂಬಳ ಕೊಟ್ಟು ಆಕೆಯನ್ನು ಕೆಲಸದಿಂದ ತಕ್ಷಣ ಬಿಡುಗಡೆ ಮಾಡಬೇಕು ಎಂದು ನಿರ್ಣಯ ಆಯಿತು.

ಆಡಳಿತ ಮಂಡಳಿಯ ಅಧ್ಯಕ್ಷರು ಐ.ಎ.ಎಸ್. ಅಧಿಕಾರಿಗಳಾಗಿದ್ದ ಸಿ. ನರಸಿಂಹಮೂರ್ತಿ. ಎರಡು ದಿನಗಳ ಹಿಂದೆ ನಾನು ಆಫೀಸಿನಲ್ಲಿದ್ದಾಗ ಆಕೆ ಬಂದು ಗಲಾಟೆ ಮಾಡಿದ್ದನ್ನು ಮೀಟಿಂಗ್‌ನಲ್ಲಿ ಹೇಳಿದೆ. ''ಆಕೆ ಯಾವ ಹೊತ್ತಿನಲ್ಲಿ ಬಂದು ಗಲಾಟೆ ಮಾಡಿದರು?'' ಎಂದು ಅಧ್ಯಕ್ಷರು ಕೇಳಿದರು. ಸಂಜೆ ಸುಮಾರು 7-30ಕ್ಕೆ ಎಂದೆ.

''ಆಗ ನೀವೊಬ್ಬರೇ ಇದ್ದೀರ?''

''ಹೌದು''

''ನೀವು ಅದೃಷ್ಟವಂತರು. ಅವರು ಗಟ್ಟಿಯಾಗಿ ಕಿರಿಚಿಕೊಂಡು ಅಸಭ್ಯವಾಗಿ ವರ್ತಿಸಿದ್ದರೆ ನಿಮ್ಮ ಗತಿ ಏನಾಗುತ್ತಿತ್ತು'' ಎಂದು ನರಸಿಂಹಮೂರ್ತಿಯವರು ಕೇಳಿದಾಗ ನನಗೆ ಆಕಾಶವೇ ಕಳಚಿಬಿದ್ದ ಹಾಗಾಯಿತು. ಜಂಘಾಬಲವೇ ಉಡುಗಿಹೋಯಿತು. ನಾನು ಕಕ್ಕಾಬಿಕ್ಕಿಯಾದೆ.

''ನಿಮಗೆ ಪ್ರಪಂಚಜ್ಞಾನ ಹೆಚ್ಚಾಗಿ ಇದ್ದ ಹಾಗಿಲ್ಲ. ಆಕೆ ಏನಾದರೂ ಕೂಗಿಕೊಂಡಿದ್ದರೆ ಅನಾಹುತವೇ ಆಗುತ್ತಿತ್ತು. ಪ್ರಪಂಚದಲ್ಲಿ ಎಂತೆಂತಹವರೋ ಇರುತ್ತಾರೆ. ನೀವು ಎಷ್ಟು ನಿರ್ದೋಷಿ ಎಂದು ಹೇಳಿ ಸಮರ್ಥಿಸಿಕೊಂಡರೂ ನೀವು ಹೇಳಿದ್ದನ್ನು ನಂಬದವರೂ ಇರುತ್ತಾರೆ. ಇದು ತುಂಬಾ ಸೂಕ್ಷ್ಮವಾದ ವಿಷಯ. ಮದುವೆಯಾಗದಿದ್ದವರ ಮೇಲೆ ಇಂತಹ ಆಪಾದನೆಗಳನ್ನು ಸುಲಭವಾಗಿ ಮಾಡಬಹುದು. ಮದುವೆ ಆದವರೂ ಇಂತಹ ಆಪಾದನೆಗಳಿಂದ ಹೊರತಲ್ಲ. ನಿಮ್ಮಂತಹವರ ಮೇಲೆ ಇಂತಹ ಆಪಾದನೆಗಳನ್ನು ಸಲೀಸಾಗಿ ಮಾಡಲು ಅವಕಾಶವಿರುತ್ತದೆ. ಕೊಚ್ಚೆಯನ್ನು ಎಸೆಯುತ್ತಾ ಹೋದರೆ ಅದು ಕಚ್ಚಿಕೊಳ್ಳದಿದ್ದರೂ ಕಲೆ ಉಳಿಯುತ್ತದೆ. (If you go on slinging mud it may not stick but the stain will be there.) ನೀವೇನೂ ಅಜಾತ ಶತ್ರುಗಳಲ್ಲ. ವಿವಿಧೋದ್ದೇಶಗಳಿಂದ ನಿಮ್ಮನ್ನು ತೇಜೋವಧೆ ಮಾಡಬಹುದು. ನೀವು ಹುಷಾರಾಗಿರಬೇಕು. ನಿಮಗೆ ಕೆಟ್ಟ ಹೆಸರು ತರಬಹುದು. ಹೆಂಗಸಿನೊಂದಿಗೆ ಮಾತನಾಡುವಾಗ ಒಬ್ಬರೇ ಇರಬೇಡಿ'' ಎಂದು ಬುದ್ಧಿವಾದ ಹೇಳಿದರು.

''ಅದೆಲ್ಲಾ ಸರಿ ಸಾರ್, ಆದರೆ ಹೆಂಗಸರು ಒಬ್ಬರೇ ಬಂದು ಮಾತನಾಡುವಾಗ ನಾನು ಇನ್ನೊಬ್ಬರನ್ನು ಕರೆಯಲು ಸಾಧ್ಯವೇ ಇಲ್ಲ. ವಿದ್ಯಾರ್ಥಿನಿಯರು, ಮೇಡಂಗಳು, ಇತರರು ನನ್ನೊಂದಿಗೆ ಮಾತನಾಡಲು ಬರುತ್ತಾರೆ. ಸಲೀಸಾಗಿ, ಸಹಜವಾಗಿ ಮಾತನಾಡುತ್ತಾರೆ. ಆಗ

ನಾನು ಹೇಗೆ ಇನ್ನೊಬ್ಬರನ್ನು ಕರೆಯಲಿ. ಇದರ ಮೇಲೆ ಏನಾಗುತ್ತದೋ ಅದನ್ನು ನಾನು ಅನುಭವಿಸಬೇಕಾಗುತ್ತದೆ'' ಎಂದು ನನ್ನ ಅಸಹಾಯಕತೆಯನ್ನು ವಿವರಿಸಿದೆ.

''ನಾನು ಹೇಳಿದ ಸಾಧ್ಯತೆಯನ್ನೂ ಮನಸ್ಸಿನಲ್ಲಿಟ್ಟುಕೊಳ್ಳಿ. ಹುಷಾರಾಗಿರಿ. ನಾಳೆ ಆಕೆಯನ್ನು ಕೆಲಸದಿಂದ ರಿಲೀವ್ ಮಾಡುವ ಸಮಯದಲ್ಲಿ ನೀವು ಆಫೀಸಿನಲ್ಲಿರಬೇಡಿ. ನಿಮ್ಮಲ್ಲಿಗೆ ಬಂದು ಅಸಹ್ಯವಾಗಿ ವರ್ತಿಸಬಹುದು. ಒಂದು ತಿಂಗಳ ಸಂಬಳ ಮತ್ತು ಆಕೆಯನ್ನು ಕೆಲಸದಿಂದ ರಿಲೀವ್ ಮಾಡುವ ಕಾಗದವನ್ನು ನಿಮ್ಮ ಆಫೀಸಿನ ಅಧಿಕಾರಿಗಳಿಗೆ ಕೊಟ್ಟು ನೀವು ಹೊರಗೆ ಹೋಗಿ'' ಎಂದರು. ಆಫೀಸ್ ಅಧಿಕಾರಿಗಳಾಗಿದ್ದ ಎಂ.ಎಸ್. ಮಾಧವಮೂರ್ತಿಯವರಿಗೆ ರಿಲೀವ್ ಆರ್ಡರ್ ಮತ್ತು ಒಂದು ತಿಂಗಳ ಸಂಬಳ ಕೊಟ್ಟು ''ಸಹಿ ತೆಗೆದುಕೊಳ್ಳಿ'' ಅಂತ ಹೇಳಿ ನಾನು ನಮ್ಮ ಸಂಸ್ಥೆಯ ಕಾರ್ಯದರ್ಶಿಗಳಾಗಿದ್ದ ಟಿ.ಎಸ್. ರಾಘವನ್ ಅವರ ಮನೆಗೆ ಹೋದೆ. ಆಗ 11 ಗಂಟೆ. ರಾಘವನ್ ಇರಲಿಲ್ಲ, ಅಂಗಡಿಗೆ ಹೋಗಿದ್ದರು. ಅವರ ಹೆಂಡತಿ ಇದ್ದರು. ಅಷ್ಟು ಹೊತ್ತಿನಲ್ಲಿ ನಾನು ಅವರ ಮನೆಗೆ ಹೋದದ್ದು ಅವರಿಗೆ ಆಶ್ಚರ್ಯವನ್ನುಂಟುಮಾಡಿತು. ''ರಾಘವನ್ ಎಷ್ಟು ಹೊತ್ತಿಗೆ ಬರುತ್ತಾರೆ?'' ಎಂದು ಕೇಳಿದೆ. ಮಧ್ಯಾಹ್ನ ಒಂದು ಗಂಟೆಗೆ ಬರ್ತಾರೆ ಅಂದರು.

''ನಾನು ನಿಮ್ಮ ಮನೆಯಿಂದ ಫೋನ್ ಮಾಡ್ತಾ ಇದ್ದೀನಿ. ಬೇಗ 12 ಗಂಟೆಗಿಂತ ಮುಂಚೆ ಮನೆಗೆ ಬನ್ನಿ. ನರಸಿಂಹಮೂರ್ತಿಗಳು ಮೀಟಿಂಗ್‌ನಲ್ಲಿ ಹೇಳಿದಂತೆ ಆಕೆಯನ್ನು ರಿಲೀವ್ ಮಾಡುವಾಗ ಕಾಲೇಜಿನಿಂದ ತಲೆತಪ್ಪಿಸಿಕೊಂಡು ಬಂದು ನಿಮ್ಮ ಮನೆಯಲ್ಲಿ ಆಶ್ರಯ ಪಡೆದಿದ್ದೇನೆ'' ಅಂತ ಅಂಗಡಿಯಲ್ಲಿದ್ದ ರಾಘವನ್ ಅವರಿಗೆ ಅಲ್ಲಿಂದಲೇ ಫೋನ್ ಮಾಡಿದೆ. ರಾಘವನ್ ನಮ್ಮ ಸಂಸ್ಥೆಗೆ ಕಾರ್ಯದರ್ಶಿಗಳಾಗಿದ್ದುದರಿಂದ ಈ ಎಲ್ಲಾ ವಿಷಯ ಅವರಿಗೆ ಗೊತ್ತಿತ್ತು. ಈ ಮಧ್ಯೆ ''ಆಕೆ ಬಂದರೆ? ರಿಲೀವ್ ಆಯ್ತೆ?'' ಅಂತ ತವಕದಿಂದ ಹತ್ತು ನಿಮಿಷಗಳಿಗೊಮ್ಮೆ ಮಾಧವಮೂರ್ತಿ ಅವರಿಗೆ ಫೋನ್ ಮಾಡುತ್ತಿದ್ದೆ. ರಾಘವನ್ ಅಂಗಡಿಯಿಂದ ಬರುವಷ್ಟರಲ್ಲಿ ರಿಲೀವ್ ಆದ ವಿಷಯ ಗೊತ್ತಾಯಿತು. ನನ್ನನ್ನು ವಾಚಾಮ ಗೋಚರ ಬೈದು ಸಂಬಳ ತೆಗೆದುಕೊಂಡು ಹೋದರು ಎಂದು ಮಾಧವಮೂರ್ತಿ ಹೇಳಿದರು. ನಾನು ನನ್ನ ಅಜ್ಞಾತವಾಸವನ್ನು ಮುಗಿಸಿ ಸುಮಾರು ಎರಡು ಗಂಟೆಯ ಹೊತ್ತಿಗೆ ಕಾಲೇಜಿಗೆ ಬಂದೆ. ಅದಾದಮೇಲೆ ಆಕೆ ನನ್ನನ್ನ ಭೇಟಿ ಮಾಡಲು ಬರಲಿಲ್ಲ. ಕೆಲವು ದಿನವಂತೂ ಆಕೆಯದೇ ನನಗೆ ಸಿಂಹಸ್ವಪ್ನವಾಗಿತ್ತು.

ಆ ಅಧ್ಯಾಯ ಮುಗಿಯಿತು. ಆದರೆ ನರಸಿಂಹಮೂರ್ತಿಗಳು ನನ್ನ ಮನಸ್ಸಿನಲ್ಲಿ ಬಿತ್ತಿದ ಭೀತಿಯಿಂದ ಹಲವು ವರ್ಷಗಳಾದರೂ ನನಗೆ ಬಿಡುಗಡೆ ಹೊಂದಲು ಸಾಧ್ಯವಾಗಲಿಲ್ಲ. ಒಬ್ಬರೇ ಮೇಡಂ ಅಥವಾ ವಿದ್ಯಾರ್ಥಿನಿ ನನ್ನ ಜೊತೆ ಮಾತನಾಡಲು ಬಂದಾಗಲೆಲ್ಲಾ (ಇದು ಬಹಳ ಸಾಮಾನ್ಯ) ಅವರು ಹೇಳಿದ್ದು ಜ್ಞಾಪಕಕ್ಕೆ ಬರುತ್ತಿತ್ತು. ಆದರೆ ಭಯವಾಗುತ್ತಿರಲಿಲ್ಲ. ಅವರೆಲ್ಲಾ ನನಗೆ ಚೆನ್ನಾಗಿ ಪರಿಚಯಸ್ತರು. ನಮ್ಮ ಆವರಣದಲ್ಲಿದ್ದವರಿಗೂ ಅಂತಹ ಮನೋಭಾವ ಖಂಡಿತ ಇರಲಿಲ್ಲ. ಪರಿಚಯಸ್ತರನ್ನು ತುಂಬಾ ಆತ್ಮೀಯತೆಯಿಂದ

ಮಾತನಾಡಿಸುತ್ತೇವೆ. ಆಬಾಲ ವೃದ್ಧರನ್ನು ಸಲಿಗೆಯಿಂದ ಮಾತನಾಡಿಸುವುದೇ ನನ್ನ ಸ್ವಭಾವ. ಒಂದೊಂದು ಸಲ ಹೊರಗಿನವರು ತಪ್ಪು ತಿಳಿದುಕೊಳ್ಳುವಷ್ಟು ಸಲಿಗೆ. ಆದರೆ ಅಪರಿಚಿತ ಹೆಂಗಸರು ಒಬ್ಬರೇ ಬಂದಾಗ ಸ್ವಲ್ಪ ಭಯವಾಗುತ್ತಿತ್ತು. ನನಗಾಗದವರು ಅದೇ ಬೇಕಾಗಿ ನನಗೆ ತೊಂದರೆ ಮಾಡುವ ಉದ್ದೇಶದಿಂದ ಕಳುಹಿಸಿರಬಹುದೇನೋ ಅನ್ನುವ ತವಕ ನನ್ನ ಯೋಚನೆಗೆ ಕಾರಣವಾಗುತ್ತಿತ್ತು. ಲಾಲ್‌ಬಾಗ್‌ಗೆ ನಾನು ಪ್ರತಿನಿತ್ಯ ಬೆಳಗಿನ ಜಾವ ಐದು ಗಂಟೆ ಹೊತ್ತಿಗೆ ವಾಕಿಂಗ್ ಹೋಗುತ್ತಿದ್ದಾಗ ಹಲವು ಗಜಗಳ ಮುಂದೆ ಯಾರಾದರೂ ಒಬ್ಬರೇ ಹೆಂಗಸರು ಹೋಗುತ್ತಾ ಇದ್ದು ಸುತ್ತಮುತ್ತ ಯಾರೂ ಇಲ್ಲದಿದ್ದರೆ ನನ್ನ ಹೃದಯ ಡವ ಡವ ಎಂದು ಹೊಡೆದುಕೊಳ್ಳುತ್ತಿತ್ತು. ಅಂತರ ಹೆಚ್ಚು ಮಾಡಿಕೊಳ್ಳಲು ನನ್ನ ವೇಗವನ್ನು ಕಡಿಮೆ ಮಾಡಿಕೊಳ್ಳುತ್ತಿದ್ದೆ. ಅಥವಾ ಪಕ್ಕದ ಇನ್ನೊಂದು ದಾರಿಯಲ್ಲಿ ಹೋಗುತ್ತಿದ್ದೆ. ಬಾಬಾಗಳು, ಯೋಗಿಗಳನ್ನು ಒಬ್ಬನೇ ನಿರ್ಭಯವಾಗಿ ಎದುರಿಸಬಲ್ಲೆ. ಆದರೆ ಕೆಲವು ವಿಷಯಗಳಲ್ಲಿ ನನಗೆ ಪುಕ್ಕಲು ಅಂದರೆ ಪುಕ್ಕಲು. ಈ ಘಟನೆಯಿಂದ ಮೊದಲಾದ ಭಯ ಹಲವು ವರ್ಷಗಳು ನನ್ನನ್ನು ಕಾಡುತ್ತಿತ್ತು. ವರ್ಷಗಳು ಕಳೆದ ಹಾಗೆಲ್ಲಾ ಭೀತಿ ಕಡಿಮೆ ಆಗಿ ಈಗ ಆ ಸಮಸ್ಯೆ ಇಲ್ಲ. ಆದರೆ ಆ ಘಟನೆಯನ್ನು ಮಾತ್ರ ಮರೆಯಲು ಸಾಧ್ಯವಿಲ್ಲ.

ಸೌಜನ್ಯ : 'ಸುಧಾ' ವಾರಪತ್ರಿಕೆ.



ಅಂಕಲ್, ಫುಲ್ ಬೋಡಿಸಿ ಬಿಡಿ. ಅಮ್ಮ ತಲೆಗೆ ಎಣ್ಣೆ ಹಚ್ಚಿಕೋ ಹಚ್ಚಿಕೋ ಅಂತ ಸುಮ್ಮನೆ ತಲೆ ತಿಂತಿರ್ತಾಳೆ.

# E ಕಸ : ಹೊಸ ಹೊಸ

• ಭುವನೇಶ್ವರಿ ಹೆಗಡೆ

**ಹ**ಬ್ಬ ಹರಿದಿನಗಳು ಬಂದಾಗ ಮನೆಯ ಅಟ್ಟ ಮಾಡು, ಜಗಲಿ ಒಂದೂ ಬಿಡದೆ ಬಲೆ ಹೊಡೆದು ಕಸ ತೆಗೆದು ಚೊಕ್ಕಟ ಮಾಡುವುದು ಮನೆ ಮಾಡಿಕೊಂಡಿರುವವರು ಸಾಮಾನ್ಯವಾಗಿ ಮಾಡುವ ಕೆಲಸ. ದೀಪಾವಳಿ ಬಂತೆನ್ನುವಾಗ ಕಸ ಹೊಡೆಯುವಾಗ ನನ್ನ ಬಾಲ್ಯದ ನೆನಪೊಂದು ಬಿಟ್ಟೆನೆಂದರೆ ಬಿಡವಾಗಿ ಕಾಡತೊಡಗಿತೆ – ಅದು ನನ್ನ ಹಳ್ಳಿತೋಟದ ನಡುವಿರುವ ದೊಡ್ಡ ಹಳೇಮನೆಯ ಮನೆ ಹೊದಿಕೆ ಕಾರ್ಯಕ್ರಮ.

ನಮ್ಮದು ಅಡಿಕೆ ತೋಟದ ನಡುವಿನ ವಿಶಾಲವಾದ ಉಪ್ಪರಿಗೆ ಮನೆ. ಆದರೆ ಮನೆಗೆ ಮುಚ್ಚಿಗೆ ಮಾತ್ರ ಅಡಿಕೆ ಸೋಗೆಯದು. ಹನ್ನೆರಡೆಕರೆ ಅಡಿಕೆ ತೋಟದ ಎಲ್ಲಾ ಸೋಗೆಗಳನ್ನೂ ಮನೆ ಹೊದಿಸಲು ಬೇಕೆಂಬ ಕಾರಣಕ್ಕಾಗಿ ಜೋಪಾನ ಮಾಡುವುದೇ ಒಂದು ಕೆಲಸವಾಗಿತ್ತು.

ಯುಗಾದಿ ಬರುವ ಮೊದಲು ಮಳೆ ಹನಿ ಹಿಡಿಯುವ ಮೊದಲು ಈ ಮನೆ ಹೊದಿಕೆ ಕಾರ್ಯಕ್ರಮ ಮುಗಿಯಬೇಕು. ಹಳೆ ಸೋಗೆ ತೆಗೆದು ಹೊಸ ಸೋಗೆ ಮುಚ್ಚಬೇಕು. ಹದಿನಾರಂಕಣದ ದೊಡ್ಡ ಮನೆಯನ್ನು ನಾಲ್ಕು ಬದಿಯಿಂದ ನಾಲ್ಕು ಜನ ಗಂಡಾಳುಗಳು ಏರಿ ಸೋಗೆ ತೆಗೆದು ಕೊಡಹಿ ಹೊಸ ಸೋಗೆ ಇಡಲು ಬೆಳಿಗ್ಗೆಯೇ ಪ್ರಾರಂಭ. ಇಬ್ಬರು ಅಸಿಸ್ಟೆಂಟ್‌ಗಳು, ಇಪ್ಪತ್ತು ಜನ ಆಳುಗಳ ಮಾತು ಕವಳ ಕೋಲಾಹಲ. ಅಂತೂ ಈ ವಾರ್ಷಿಕ ಮನೆ ಹೊದಿಕೆ ಕಾರ್ಯಕ್ರಮ ಹಿರಿಯರ ಕಾಲದಿಂದ ನಡೆದು ಬಂದ ಅದ್ದೂರಿ ವಾರ್ಷಿಕ ಆಚರಣೆ.

ಈ ಮುಖ್ಯ ಕೆಲಸಕ್ಕೇನೋ ಗಂಡಾಳುಗಳು ಸಂಬಳ ಸಿಗುತ್ತಾರೆ. ಆದರೆ ಅವರು ಮನೆಯ ಕೋಳಿನ ತನಕವೂ ಧಡಬಡ ವಂತಿ ಹುಡಿಯಾದ ಹಳೆ ಸೋಗೆ ತೆಗೆದು ಕೊಡಹಿ ಹೊಸ ಸೋಗೆ ಮುಚ್ಚುವಾಗ ಸೀಲಿಂಗ್ ಫಾಲಿಂಗ್ ಇಲ್ಲದ ಮನೆಯ ಒಳಗೆ ಕಲ್ಲಿದ್ದಲು ಚೂರುಗಳ ಹಾಗೆ ಕಾಣುವ ಕರಿ ಕರಿ ಸೋಗಿಪುಡಿ ರಾಶಿ ಬಿದ್ದಿರುತ್ತದೆ.

ಕೆಳಗಿನ ಲೋಕಕ್ಕೆ ಸೂಕ್ತ ವ್ಯವಸ್ಥೆ ಮಾಡಿಕೊಳ್ಳದಿದ್ದರೆ ಇಡೀ ಮನೆಯ ಚರಾಚರ ವಸ್ತುಗಳೆಲ್ಲ ಕರಿ ರಾಶಿಯಲ್ಲಿ ಹೂತು ಹೋಗಿ ಭಾನ್ಗಡಿಯಾಗಿರುತ್ತದೆ. ಬೆಲ್ಲದ ಗಡಿಗೆ, ಮಜ್ಜಿಗೆ, ಜೋನೆ ಬೆಲ್ಲದ ಕೊಡ, ಕಾಳು ಕಡಿ ಡಬ್ಬಿಗಳು, ಬಟ್ಟೆ ಬರೆ, ಕಂಬಳಿ, ಸೋಪು

ಶಾಂಪು... ಮನೆ ಅಂದ ಬಳಿಕ ಒಂದೆರಡೆ ಎಲ್ಲವೂ ಎರಡು ಮೂರು ದಿನದಿಂದಲೇ ಮನೆಯ ಒಂದು ಭಾಗಕ್ಕೆ ವರ್ಗಾಯಿಸಲ್ಪಡುತ್ತವೆ. ಆದರ ಮೇಲೆ ತಾಡಪಾಲಿನ ಮುಚ್ಚಿಗೆ.

ಒಂದು ವರ್ಷ ಮನೆ ಹೊದಿಕೆಯ ದಿನ ಎಂದು ತಿಳಿಯುವ ನಮ್ಮ ಪಕ್ಕದ ಹಳ್ಳಿಯ ಕೇಶಣ್ಣನೆಂಬವನು ರಾತ್ರಿ ಯಕ್ಷಗಾನ ನೋಡಿ ಬಂದು ಬೆಳಿಗ್ಗೆ ನಮ್ಮನೆಯಲ್ಲಿ ತಿಂಡಿ ತಿಂದು ರೂಮೊಂದರಲ್ಲಿ ಧರಾಶಯ್ಯಿಯಾಗಿ ನಿದ್ರಿಸಿಬಿಟ್ಟಿದ್ದ. ಗಡಿಬಿಡಿಯಲ್ಲಿ ಯಾರೂ ಗಮನಿಸಿರಲೂ ಇಲ್ಲ. ಮಧ್ಯಾಹ್ನದವರೆಗೆ ಅವನ ಮೈ ಮೂತಿ ಮೂಗೆಂಬ ಸಕಲ ಅವಯವಗಳೂ ಸೋಗೆ ಕರಿ ಪುಡಿಯ ಉಮರುವಿಕೆಯಿಂದ ಮುಚ್ಚಿಹೋಗಿ ಯಾರೋ ಮಕ್ಕಳು ರೂಮಿನಲ್ಲೇನೋ ಕರಿಭೂತ ಗೊರ್ ಎಂದು ಸಪ್ಪಳ ಮಾಡ್ತಾ ಅಲುಗಾಡುತ್ತಿದೆ ಎಂದು ಬೊಬ್ಬೆಯಿಟ್ಟಾಗಲೇ ಭಾನ್ಗಡಿಯ ಅರಿವಾಗಿದ್ದು. ಹಂಡೆಗಟ್ಟಲೆ ನೀರು ಸುರಿದು ಕೇಶಣ್ಣನನ್ನು ಸ್ವಚ್ಛಗೊಳಿಸಲಾಯಿತು.

ಮನೆ ಹೊದಿಕೆಯ ದಿನ ಮೇಲ್ಮನೆಯಲ್ಲಿ ಗಂಡಾಳುಗಳ ಕಾರುಬಾರು ನಡೆದು ಅವರೆಲ್ಲ ಸಂಜೆ ಕೆಳಗಿಳಿಯುತ್ತಿದ್ದಂತೆ ಸ್ವಚ್ಛತಾಶಾಸ್ತ್ರ ಸನ್ನದ್ಧರಾದ ಹೆಣ್ಣಾಳುಗಳ ಪಡೆ ಕಾರ್ಯಪ್ರವೃತ್ತವಾಗುತ್ತಿತ್ತು. ತಮ್ಮ ತಲೆಗೆ ಕರಿ ಧೂಳು ಬೀಳಬಾರದೆಂದು ಕಟ್ಟಿಕೊಂಡ ಬಟ್ಟೆಯ ಬಣ್ಣ ಎಲೆ ಅಡಿಕೆ ತಿನ್ನುತ್ತ ರಂಗೇರಿದ ತಾಂಬೂಲದ ತುಟಿಗಳು, ಹಾಕು ಒಗಟು ಕುಶಾಲು, ಪರಿಣಿತ ಹಾವಭಾವಗಳು, ಗಂಡಾಳುಗಳ ಕೆಲಸದ ಪರಿಯ ಟೀಕೆ.... ನೋಡು ನೋಡುತ್ತ ಇಡೀ ಮನೆಯ ಸಂದುಗೊಂದು ಕಿಡಕಿ ಕಪಾಟು ಒಂದೂ ಬಿಡದೆ ಝಳ ಝಳ ಗೊಳಿಸುವ ಅವರ ಕೈಚಳಕಕ್ಕೆ ಮಾರು ಹೋದ ನಾವು ಅವರ ಹಿಂದೇ ಸುತ್ತುತ್ತಿದ್ದೆವು.

ಅವರು ಕೇಳುವ ಚೌ,ಮಂಡಕ್ಕಿ, ಎಲೆ ಅಡಿಕೆ ಸುಣ್ಣ ತಂಬಾಕು.... ಎಲ್ಲವನ್ನೂ ಸಪ್ಲೈ ಮಾಡುತ್ತಿದ್ದೆವು. ಎಲ್ಲ ಮುಗಿದು ರಾತ್ರಿ ಎಲ್ಲರಿಗೂ ಒಟ್ಟಿಗೆ ಅಂಗಳದಲ್ಲಿ ಊಟ. ಬೆಳದಿಂಗಳಿದ್ದರಂತೂ ಹಾಡು ಹಬ್ಬ, ಕೇಸರಿಭಾತು, ಆಂಬೊಡೆ, ಪಾಯಸ ಹೀಗೆಲ್ಲ ಗಮ್ಮತ್ತಿನ ಊಟ, ಅಂತೂ 'ಕಸ ತೆಗೆಯುವುದು' ಅವತ್ತಿನ ಮಟ್ಟಿಗೆ ರಾಜೋಪಚಾರಕ್ಕೆ ಅರ್ಹ ಕೆಲಸ. ಇಷ್ಟಾದ ಬಳಿಕವೇ ನಮ್ಮ ಮನೆ ಯುಗಾದಿ ಹೊಸ ವರ್ಷಕ್ಕೆ ಸಜ್ಜಾಗುತ್ತಿತ್ತು. ಸುಣ್ಣ ಬಣ್ಣಗಳ ಜನರೂ ನಮ್ಮ ಹಳ್ಳಿಯಲ್ಲಿ ವಿ.ಐ.ಪಿ.ಗಳ ಸಾಲಿಗೆ ಸೇರಿದವರಾಗಿದ್ದರು. ಅಂತೂ ಹೊಸ ವರ್ಷಕ್ಕೆ ಹಳೆಯ ಕೊಳೆ ನೀಗಿಕೊಂಡ ಮನೆ ಸಜ್ಜಾಗುವ ಈ ದೃಶ್ಯ ಸದಾ ನನ್ನೊಳಗೆ ಹಸಿರಾಗಿರುವ ನೆನಪು.

ಈ ನೆನಪು ಮೊನ್ನೆ ನನ್ನೊಳಗೆ ಮೆಲ್ಲನೆ ಮೂಡಿ ಬರಲು ಕಾರಣ ನನ್ನ 'ಮೊಬೈಲ್ ಸ್ವಚ್ಛತಾ ಪ್ರಕರಣ'. ದೀಪಾವಳಿ ಕಳೆದ ಬಳಿಕ ನನ್ನ ಕರ್ಣ ಪಿಶಾಚಿ ಕೋತಿಯಂತೆ ಆಡತೊಡಗಿತ್ತು. ಕಳಿಸಿದ ಸಂದೇಶಗಳು ಅಲ್ಲಲ್ಲೇ ಸೋತು ಜೋತು ಬೀಳುವದು. ಬೆಳಿಗ್ಗೆ ಯಾಕೋ ಗುಡ್ ಮಾರ್ನಿಂಗ್ ಹೇಳಿದರೆ ಅದು ರಾತ್ರಿ ನನಗೆ ತಲುಪುವುದು, ಶಾಂತಪ್ಪನಿಗೆ ಮಾಡಿದ ಕಾಲು ರುದ್ರಪ್ಪನಿಗೆ ಹೋಗಿ ಆತನ ಕೋಪಕ್ಕೆ ತುತ್ತಾಗುವುದು, ಆತ್ಮೀಯರಲ್ಲಿ ಮಾತಾಡ್ತಾ

ಯೋಗಕ್ಷೇಮ ವಿಚಾರಿಸುತ್ತಿರುವಾಗಲೇ ಕುತ್ತಿಗೆ ಹಿಚುಕಿ ನಿಶ್ಯಬ್ಧವಾಗಿಸುವುದು.... ತಲೆ ಕೆಟ್ಟು ಹೋಗತೊಡಗಿತು.

ಉಳಿದಂತೆ ಆಟ ಊಟ ಕಿರುಚಾಟಗಳ ವಿಷಯದಲ್ಲಿ ಬೈದಂತೆ ಮಾಡಿದರೂ ನಮ್ಮ ಮನೆಯ 3Gಗಳನ್ನು (ಮೂರನೇ ತಲೆಮಾರಿನ ತರಲೆಗಳಾದ ಕಿರಿ ಜೀನಿಯಸ್‌ಗಳು) ಟೆಕ್ನಾಲಜಿ ವಿಷಯವೊಂದರಲ್ಲಿ ಬೈದು ವಿರೋಧ ಕಟ್ಟಿಕೊಳ್ಳುವಂತಿಲ್ಲ. ಅವುಗಳೇ ನಮಗೆ ಆಪದ್ಬಾಂಧುಗರು.

ಲೋ ಪುಟ್ಟಾ ನನ್ನ ಮೊಬೈಲ್ ಮಾತು ಕೇಳ್ತಿಲ್ಲ ಏನಾಯ್ತು ನೋಡ್ರೋ... ಎಂದಿದ್ದೇ ತಡ ಮೊಬೈಲ್ ಪರೀಕ್ಷಿಸಿದ ಪುಟ್ಟನ ಗ್ಯಾಂಗು ಪಕ ಪಕ ನಕ್ಕಿತು. 'ಮಮ್ಮೀ ಮೆಸೇಜ್ ಓವರ್ ಫ್ಲೋ ಆಗ್ಲಿಕ್ಹತ್ತಿದೆ' "Unwanted ಕಸಾನೆಲ್ಲ delete ಮಾಡಿ ಚಿಕ್ಕಮ್ಮ' Reset ಮಾಡಿದ್ರಾಯ್ತು ಆಂಟಿ.... ಆತ್ಮವಿಶ್ವಾಸಭರಿತ ಸಲಹೆಗಳು 3Gಗಳಿಂದ ಬರತೊಡಗಿದವು.

ಸಾರಾಂಶ ಹಳ್ಳಿ ಭಾಷೆಯಲ್ಲಿ ಕಸದ ರಾಶಿ ತುಂಬಿದೆ. ಕಸ ಹೊಡೆದು ಸ್ವಚ್ಛ ಮಾಡಿ ಎಂದಂತಾಯ್ತು. ಎಂಥಾ ಕಸ! ಆಗಲೇ ಅರಿವಾದದ್ದು ಇದು E ಕಸ ಎಂದು. E ಬ್ಯಾಂಕಿಂಗ್, E ಕಾಮರ್ಸ್, E ಪರ್ಚೇಸಿಂಗ್... ಕೇಳಲು ಎಷ್ಟು ಹಿತ! ಆದರೆ ಈಗ ಎದುರಾಗಿರುವ E ಕಸ ವಿಲೇವಾರಿ! ತಲೆ ಕೆಟ್ಟು ಕೆರ ಹಿಡಿದು ಹೋಯ್ತೆಂಬಂಥ ಕಸದ ರಾಶಿ.

ಮೊನ್ನೆ ಭಾನುವಾರ ಬೆಳಿಗ್ಗೆ ಹ್ಯಾಂಗ್ ಚೇರಿನಲ್ಲಿ ಕೂತು ಹ್ಯಾಂಗಾದ ಕರ್ಣಪಿಶಾಚಿಯ E ಕಸ ತೆಗೆಯುವ ಕಾರ್ಯಕ್ಕೆ ಮೊದಲಿಟ್ಟೆ ಅಬ್ಬ ಎಂತೆಂಥಾ ನಿರುಪಯುಕ್ತ ಕಸ. ಎತ್ತಿಟ್ಟುಕೊಳ್ಳಬೇಕೆನಿಸುವ ಕೆಲ ತುಂಟ ಚುರುಕು ನಗೆಹನಿಗಳೂ ಇದ್ದವು. ಆದರೆ ಜೀವನ ಎಂದರೇನು? ಅದರಲ್ಲಿ ನಮ್ಮ ಪಾತ್ರವೇನು? ಸಂತೋಷದ ವ್ಯಾಖ್ಯೆ, ಫ್ರೆಂಡ್‌ಶಿಪ್ ಕುರಿತ ವಿವರ... ಯಾರು ಎಲ್ಲಿಂದ ಕಳಿಸ್ತಾರೋ ಗೊತ್ತಿಲ್ಲ. ತತ್ವಜ್ಞಾನಿಗಳು, ಕವಿಗಳು, ಸಿನಿಕರು, ಜೋಕರುಗಳು... ನನ್ನೀ ಜಂಗಮ ವಾಣಿಯ ಡಬ್ಬಿಯಲ್ಲಿ ಸ್ಥಾವರಗಳಾಗಿ ನೆಲೆಗೊಂಡಿದ್ದಾರೆ.

''ದೀಪಾವಳಿಯು ನಿಮಗೆ ಒಳಿತು ತರಲಿ'' ಎಂದಷ್ಟೇ ಹಿತವಾಗಿ ಹಾರೈಸಿದ ಒಬ್ಬ ಮಹನೀಯನನ್ನು ಬಿಟ್ಟರೆ ಉಳಿವೆಲ್ಲವೂ ಅಧಿಕ ಪ್ರಸಂಗದ ಹಾರೈಕೆಗಳೇ. Three royal ladies were asking your adress. I have given your cell no. They will come to you pls. welcome them. (ಅಭ್ಯಾಸದಿಂದ ಸ್ಪೆಲ್ಲಿಂಗ್ ಪೂರ್ತಿ ಬರೆದು ಹೋಯ್ತು ಕರ್ಣಪಿಶಾಚಿಯ ಭಾಷೆಯಲ್ಲಿ Forಗೆ 4, Fromಗೆ 4m, Youಗೆ U, Areಗೆ R.... ಆಹಾ ಎಷ್ಟು ಸುಲಭ!)

ಹೀಗೆಂದು ಪ್ರಾರಂಭವಾದ ಹಾರೈಕೆ They are Sukha Samrudhi and Shanthi... ಎಂದು ಹೆಸರಿಸಿ. ಸುಮಾರು ಇಪ್ಪತ್ತು ಹಿತೈಷಿಗಳಿಂದ ಬಂದಿದೆ. ಆ Royal ladiesನ್ನು ನಾಲ್ಕಾಗಿಸಿ, ಆರಾಗಿಸಿ ಕೊನೆಗೆ good night and sweet dreams ಎಂಬ ಇಬ್ಬರನ್ನೇ ಆಗಿಸಿ ತರ ತರ(ಲೆ) ಹಾರೈಕೆ ಕಳಿಸಿದ್ದಾರೆ. ತಲೆಬಾಗಲೇ ಬೇಕು ಅವರಿಗೆ.

'ಈ' ಕಸ ಹೊಡೆಯುವುದು ಸುಲಭವೆ? ಚಮತ್ಕಾರದ ಆಹ್ವಾನಗಳು, ಗೆರೆ ಜೋಡಿಸುತ್ತ ಹೋದಂತೆ ಮೂಡಿ ಬರುವ ಕತ್ತೆಯ ಚಿತ್ರ, ಕೋತಿಯ ಚಿತ್ರ ಅದು ನೀನೇ ಎಂದು ಸಾಬೀತು ಪಡಿಸುವ ಕಿಡಿಗೇಡಿಗಳು. ಪ್ರೀತಿಯ (ಕೈಗಡದ) ಹೊಳೆ ಹರಿಸಿದ ವ್ಯಾಖ್ಯೆಗಳು, ಕಡೆಗೂ ತಾಯಿಯ ಪ್ರೀತಿಯೇ ಶ್ರೇಷ್ಠ ಎಂಬ ಉದಾತ್ತ ಹೇಳಿಕೆಗಳು.....

ಹೀಗೆ ಕಸ ತೂರಿದವರ್‍ಯಾರೂ ನನ್ನ ವೈರಿಗಳಲ್ಲ ಹಿತೈಷಿಗಳು ಎಂಬುದು ಗೊತ್ತು. ಹಾಗೂ ತಾವು ಕಳಿಸಿದ ಹಾರೈಕೆಗಳನ್ನು ನಾನು ಹೃದಯ ಹೀನಳಂತೆ ಕಸವೆಂದು ಘೋಷಿಸಿರುವುದಕ್ಕೆ ಅವರೆಲ್ಲ ನನ್ನ ಸ್ನೇಹಿತರಾದರೂ ಕಂಡಾಬಟ್ಟೆ ನೊಂದುಕೊಳ್ಳುತ್ತಾರೆ ಎಂಬುದು ನನಗೆ ಗೊತ್ತು. ಆದರೆ ನನ್ನ ಮೊಬೈಲಿಗೆ ಗೊತ್ತಿರಬೇಕಲ್ಲ? ಅದಕ್ಕೇ 'ತುಂಬಿ ಹೋಗಿದೆ ಕಸ ಮಾಡಲಾರೆ ಕೆಲಸ' ಎಂಬೊಂದು ಮೆಸೇಜ್ ನನಗೆ ಕಳಿಸಿಬಿಟ್ಟಿದೆ. ಕಸ ಕಸ... ಹೊಡೆಯುತ್ತಲೇ ಇದ್ದೇನೆ. ಮುಗಿಯುವ ಲಕ್ಷಣ ಕಾಣುತ್ತಿಲ್ಲ ಯಾಕೆಂದರೆ ಕಸ-ರಸ ವಿಂಗಡಿಸುವುದೇ ಕಷ್ಟವಾಗಿ ಹೋಗಿದೆ!

---

## ಸಾಮಾಜಿಕ ನ್ಯಾಯ!

ದಸರಾ ಮೆರವಣಿಗೆ ನಡೆಯುತ್ತಿದೆ. ಅಲಂಕರಿಸಿದ ಆನೆಗಳು ಮೆರವಣಿಗೆಯಲ್ಲಿ ಸಾಗುತ್ತಿವೆ. ಎರಡು ಸಮಾಜವಾದೀ ಆನೆಗಳು– ತಾತ, ಮೊಮ್ಮಗು– ಮಾತನಾಡಿಕೊಳ್ಳುತ್ತಿದ್ದವು.

"ಏನು ಮನುಷ್ಯರು ಇವರು? ನಮ್ಮ ಮೇಲೆ ಹೊರೆ ಹೊರಿಸಿ ಅದೇನು ಸಂತೋಷಪಟ್ಟುಕೊಳ್ಳುತ್ತಾರೋ? ಪ್ರಾಣಿಗಳಿಗೆ ಹಿಂಸೆ ಕೊಡಬಾರದು ಅಂತ ಭಾರೀ ಭಾಷಣ ಬಿಡುತ್ತಾರೆ. ಹೀಗೆ ಹೊರೆ ಹೊರಿಸಿದರೆ ಹಿಂಸೆಯಾಗುತ್ತೆ ಅಂತ ಅವುಗಳಿಗೆ ಅನಿಸುಲ್ಲವೇ ?"

"ಯೋಚಿಸಬೇಡ ಅಜ್ಜ. ನಮಗೂ ಒಂದು ಕಾಲ ಬರುತ್ತೆ, ಇವರುಗಳಿಗೆ ಬುದ್ಧಿ ಕಲಿಸೋಣಾ..."

"ಹೇಗೆ ಬುದ್ಧಿ ಕಲಿಸ್ತೀ?"

"ಆಗ ನಾವೂ ಮೆರವಣಿಗೆ ಮಾಡೋಣಾ. ಅವರ ಮೇಲೆ ಕೂತು ನಮ್ಮನ್ನು ಹೊತ್ತು ಅವರೂ ನಡೀಬೇಕು ಹಾಗೆ ಮಾಡೋಣಾ. . ."

"ಆ ಕಾಲ ಬರುತ್ತಾ?"

"ಬದಲಾಗುತ್ತಿರುವ ಸಮಾಜ ಇದು. ಮುಂದೆ ನಮ್ಮ ಕಾಲದಲ್ಲಿ ಅವರ ವಂಶದವರು ಯಾರು ಇರ್ತಾರೋ ಅವರಮೇಲೇನೇ ಸವಾರಿ ಮಾಡಿ ಸಾಮಾಜಿಕ ನ್ಯಾಯವನ್ನು ಜಾರಿಗೆ ತರೋಣಾ. . ."

ಹಳ್ಳೀಮುಕ್ಕ - 1

# ನಾಗನ ಮೇಲೆ ನಾಗಸವಾರಿ

• *ನಾಗೇಶ ಹೆಗಡೆ*

ಕೆಟ್ಟು ಪಟ್ಟಣ ಸೇರು ಎಂಬ ಗಾದೆ ಮಾತೇ ಇದೆ. ಆದರೆ ಚಿರಪರಿಚಿತ ಪರಿಸರವಾದಿ **ನಾಗೇಶ ಹೆಗಡೆ** ಕೆಟ್ಟು ಪಟ್ಟಣ ಸೇರಲಿಲ್ಲ. ಪಟ್ಟಣ ಸೇರಿ ಕೆಡಲೂ ಇಲ್ಲ. ಪಟ್ಟಣ ಜೀವನಕ್ಕೆ ವಿದಾಯ ಹೇಳಿ ಹಳ್ಳಿಯ ಬದುಕು ಮತ್ತೆ ಅನುಭವಿಸಲು ಅವರೀಗ ನಗರದಾಚೆಯ ಹಳ್ಳಿಯೊಂದರಲ್ಲಿ ಮನೆ ಕಟ್ಟಿಕೊಂಡಿದ್ದಾರೆ. ಈಗ ಗಿಡ-ಮರ, ಪ್ರಾಣಿ-ಪಕ್ಷಿಗಳ ಒಡನಾಟದೊಂದಿಗೆ ಕೃಷಿಯನ್ನೂ ನಡೆಸುತ್ತಾ ಒಂದು ವಿಶಿಷ್ಟ ಬಾಳನ್ನು ಒಗ್ಗೂಡಿಸಿಕೊಂಡಿದ್ದಾರೆ. ಈ ನಿರ್ಧಾರದ ಹಿಂದೆ ಅವರ ಸವಾಲು ಸ್ವೀಕರಿಸುವ ಮನೋಭಾವ, ಛಲ, ಪ್ರಕೃತಿಪ್ರೇಮ ಮುಂತಾದವು ಇವೆ. ನಗರದಾಚೆಯ ಹಳ್ಳಿಯಲ್ಲಿನ ಅವರ ಈ ಸಾಹಸಮಯ ಜೀವನದ ಸ್ವಾರಸ್ಯಗಳನ್ನು **''ಹಳ್ಳಿಮುಕ್ಕ''** ಎಂಬ ಅಂಕಣದಲ್ಲಿ ಅಪರಂಜಿ ಓದುಗರಿಗೆ ಉಣಬಡಿಸಲಿದ್ದಾರೆ. ಮೊದಲ ಕಂತು ಇಲ್ಲಿದೆ.....

**ನ**ನ್ನ ಹೆಸರಿಗೆ ತಕ್ಕಂತೆ ಒಂದು ನಾಗರ ಹಾವನ್ನು ಹೆಗಲಮೇಲಿಟ್ಟುಕೊಂಡು ಮಣ್ಣಿನ ರಸ್ತೆಯಲ್ಲಿ ಹೋಗುತ್ತಿದ್ದೆ. ಹಾವು ನೇರವಾಗಿ ಹೆಗಲಮೇಲೆ ಕೂತಿರಲಿಲ್ಲ ಅನ್ನಿ. ಮೂರಿಂಚು ವ್ಯಾಸದ, ಹತ್ತಡಿ ಉದ್ದದ ಒಂದು ಪಿವಿಸಿ ಪೈಪಿನಲ್ಲಿ ಅದು ಬಂದಿಯಾಗಿತ್ತು. ಪೈಪಿನ ಎರಡೂ ಕಡೆ ಪ್ಲಾಸ್ಟಿಕ್ ಚೀಲ ಸುತ್ತಿದ್ದರಿಂದ ಅದು ಹೊರಕ್ಕೆ ನೆಗೆಯುವ ಅಪಾಯ ಇರಲಿಲ್ಲ.

ದೊಡ್ಡ, ರಟ್ಟೆಗಾತ್ರದ ಕರಿನಾಗರ ಅದು. ಕಡಿದಿದ್ದರೆ ವಿಷವೇರಿ ನಂತರ ಚಟ್ಟವೇರಿ ನಾಲ್ಕು ಜನರ ಹೆಗಲಮೇಲೆ ನಾನೇ ಸವಾರಿ ಮಾಡಬೇಕಿತ್ತು. ಲೆಕ್ಕಾಚಾರ ಹಿಂದುಮುಂದಾಗಿ ಅದು ಈಗ ನನ್ನ ಹೆಗಲೇರಿತ್ತು, ಸುರಕ್ಷಿತವಾಗಿತ್ತು.

'ಇರಪ್ಪಾ... ಕೊಸರಾಡಬೇಡ' ಎನ್ನುತ್ತ ಹೆಗಲು ಬದಲಾಯಿಸಿದೆ. ಈ ಹಾವುಗಳನ್ನು ಹೊತ್ತು ಸಾಗಿಸುವಾಗಿನ ಫಜೀತಿ ಏನೆಂದರೆ ಅವಕ್ಕೆ ಬ್ಯಾಲೆನ್ಸ್ ಮಾಡಿ ಕೂರಲು ಗೊತ್ತಿಲ್ಲ. ಬೈಕ್ ಸವಾರಿ ಗೊತ್ತಿಲ್ಲದವರು ಪಿಲಿಯನ್ ರೈಡ್ ಮಾಡಿದ ಹಾಗೆ ಒಮ್ಮೆ ಮುಂಭಾಗದ ತೂಕ ಹೆಚ್ಚಾದರೆ ಇನ್ನೊಮ್ಮೆ ಹಿಂಭಾಗದ ತೂಕ ಹೆಚ್ಚು. ಸಂಭಾಳಿಸುವುದು ತುಸು ಕಷ್ಟ ಯಡ್ಯೂರಪ್ಪನವರ ನೆನಪಾಯಿತು. ಒಮ್ಮೆ ಕೋಟಿಗಟ್ಟಲೆ ಕೊಟ್ಟ ಮೈನಿಂಗ್ ಲಾಬಿಯವರ

ಮುಮ್ಮೊಗ ಒತ್ತಡ, ಇನ್ನೊಮ್ಮೆ ಕೋಟಿಗಟ್ಟಲೆ ಬೇಕೆಂದು ಪಕ್ಷೇತರರ ಹಿಮ್ಮೊಗ ಒತ್ತಡ – ಇವೆರಡರ ಮಧ್ಯೆ ಅದು ಹೇಗೆ ಅವರು ಅಧಿಕಾರವನ್ನು ಬ್ಯಾಲೆನ್ಸ್ ಮಾಡುತ್ತಿದ್ದಾರೋ ಗೊತ್ತಿಲ್ಲ. ಅವರು ದಿಲ್ಲಿಗೂ ಇಲ್ಲಿಗೂ ದಿನಕ್ಕೊಮ್ಮೆ ಓಡಾಡಿದ ಹಾಗೆ ಈ ನಾಗರ ಕ್ಷಣಕ್ಕೊಮ್ಮೆ ಮುಂದಕ್ಕೂ ಹಿಂದಕ್ಕೂ ಚಲಿಸುತ್ತಿತ್ತು.

ಮುಂದಿನ ಕೆಲಸ ತುಸು ಗಡಚಾಗಿತ್ತು. ಈ ಸವಾರಿಯನ್ನು ಕೆಳಕ್ಕಿಳಿಸಿ ಬಿಡುಗಡೆಗೊಳಿಸುವುದು ಹೇಗೆ? ಅದು ಭುಸ್ಸೆಂದು ನನ್ನ ಮೇಲೆಯೇ ತಿರುಗಿ ಬಿದ್ದರೆ? ಬಿಜೆಪಿ ಹೈಕಮಾಂಡ್‌ಗೆ ಬಂದ ಸಮಸ್ಯೆಯೇ ನನ್ನ ಹೆಗಲ ಮೇಲಿತ್ತು.

ಮನೆಯಿಂದ ಒಂದು ಫರ್ಲಾಂಗ್ ದೂರದ ಕ್ವಾರಿಯೊಂದರ ಬಳಿಗೆ ಬಂದೆ. ಹತ್ತಡಿ ಆಳದ ತಗ್ಗಿನ ಕಡೆ ಪೈಪನ್ನು ಬಾಗಿಸಿ ಹಿಡಿದು ಹುಷಾರಾಗಿ ಅದರ ಬಾಯಿಗೆ ಕಟ್ಟಿದ್ದನ್ನು ಬಿಚ್ಚಿದೆ. ಹಾವು ತಕ್ಷಣ ಹೊರಕ್ಕೆ ಬರಲಿಲ್ಲ. ಪೈಪಿನ ಮೂತಿಯನ್ನು ಕಂದಕಕ್ಕೆ ಒತ್ತಿ ಜೋರಾಗಿ ಕೊಡವಿದೆ. ಪುಳಕ್ಕನೆ ಜಾರಿ ಸಿಂಬಿಯಾಗಿ ಬೀಳುತ್ತದೆಂದು ಎಣಿಸಿದ್ದೆ. ಅರೆ! ಬರಲೇ ಇಲ್ಲ. ಭುಸ್ಸೆಂಬ ಸದ್ದು ಮಾತ್ರ ಬಂತು. ನಾನು ಟಕ್ ಟಕ್ಕೆಂದು ಪೈಪಿಗೆ ತಟ್ಟುತ್ತಾ ಹತ್ತು ಎಣಿಸಿದರೂ ಅದು ಹೊರಕ್ಕೆ ಬರಲಿಲ್ಲ. ನನ್ನ ಎಣಿಕೆ ತಪ್ಪಾಗಿತ್ತು. ಕಾಲು – ಕೈ ಇಲ್ಲದ ಅದು ಹೇಗೆ ನುಣುಪು ಪೈಪಿನಲ್ಲಿ ಅಂಟಿ ಕೂತಿದೆ? ಪ್ರಾಯಶಃ ಅದು S ಆಕಾರದಲ್ಲಿ ಪೈಪಿನ ಭಿತ್ತಿಗೆ ಅತ್ತಿತ್ತ ಮೈ ಒತ್ತಿ ಸೆಟೆದು ನಿಂತಿರಬೇಕು. ಅಥವಾ ಬಾಲ ಕೆಳಕ್ಕೆ, ತಲೆ ಮೇಲಕ್ಕೆ ಮಾಡಿ ನಿಂತಿದೆಯೆ?

ಪೈಪನ್ನು ಹುಷಾರಾಗಿ ಮೇಲೆತ್ತಿ ತಿರುವಿ ಹಿಡಿದು, ಅದರ ಇನ್ನೊಂದು ತುದಿಯ ಕಟ್ಟನ್ನೂ ಸಡಲಿಸಿ ಕೆಳಕ್ಕೆ ಕೊಡವಿದೆ. ಮತ್ತೆ ಭುಸ್ ಸದ್ದು ಬಂತೇ ವಿನಾ ನಾಗ ಹೊರಕ್ಕೆ ಬರಲಿಲ್ಲ. ಅದನ್ನು ಕೆಳಕ್ಕೆ ಇಳಿಸಲು ನನಗೆ ಎಷ್ಟು ಭಯವೊ, ಕೆಳಕ್ಕೆ ಇಳಿಯಲು ಹಾವಿಗೂ ಅಷ್ಟೇ ಭಯ ಇದ್ದೀತು. ಬಿಜೆಪಿ ಹೈಕಮಾಂಡ್ ವರ್ಸಸ್ ಬಿಎಸ್‌ವೈ ಪರಿಸ್ಥಿತಿ ಮತ್ತೆ! ಪೈಪನ್ನು ಕೆಳಗಡೆ ತಿರುಗಿಸಿದರೆ ಹಾವು ಮೇಲ್ಮುಖ – ಪೈಪನ್ನು ಮೇಲ್ಮುಖ ಮಾಡಿದರೆ ಹಾವು ಕೆಳಮುಖ! ಮೂರ್ತಿರಾಯರನ್ನು ಎದುರಿನಿಂದಲೇ ದಾಳಿ ಮಾಡಲು ಹೊರಟ ಹುಲಿಯ ಪರಿಸ್ಥಿತಿ ನನ್ನದಾಯಿತು. (ಪ್ರತಿ ಬಾರಿ ಅದು ದಾಳಿಗೆ ಸಜ್ಜಾದಾಗಲೂ ರಾಯರು ಬೆನ್ನು ತಿರುಗಿಸಿ ನಿಲ್ಲುತ್ತಿದ್ದರಂತೆ. ಬೆನ್ನಿನ ದಿಕ್ಕಿನಿಂದ ದಾಳಿ ಮಾಡುವುದೆಂದರೆ ಹುಲಿಗೆ ಮರ್ಯಾದೆಯ ಪ್ರಶ್ನೆ. ಅದು ಮೇಲಕ್ಕೆ ಜಿಗಿದು ಎದುರಿಗೆ ನಿಂತಾಗಲೆಲ್ಲ ಇವರು ನಿಂತಲ್ಲೇ ಎಬೌಟ್ ಟರ್ನ್ ಮಾಡಿ ಬೆನ್ನು ತೋರಿಸುವುದು, ಹುಲಿ ಮತ್ತೆ ಇತ್ತ ಜಿಗಿಯುವುದು, ಅವರು ಮತ್ತೆ 180 ಡಿಗ್ರಿ ತಿರುಗುವುದು.... ಕೊನೆಗೆ ಜಿಗಿದು ಜಿಗಿದು ಹುಲಿ ಸುಸ್ತಾಗಿ ಪಲಾಯನ ಮಾಡಿದ್ದು)

ಆರೆಸ್ಸೆಸ್ ಕವಾಯಿತಿನಲ್ಲಿ ಲಾಠಿ ತಿರುಗಿಸಿದ ಹಾಗೆ ನಾನು ಸ್ಲೋ ಮೋಶನ್‌ನಲ್ಲಿ ಪೈಪನ್ನು ಮೇಲಕ್ಕೂ ಕೆಳಕ್ಕೂ ತಿರುಗಿಸಿ ಏದುಸಿರು ಬಿಡುತ್ತಿದ್ದೆ. ಸಮೀಪದ ಇಟ್ಟಿಗೆ ಬಟ್ಟಿಯಲ್ಲಿ ಕೆಲಸ ಮಾಡುತ್ತಿದ್ದ ಆಂಜನಪ್ಪ ಎದುರಿಗೇ ಬಂದ. ಸಂಜೆ ಡ್ಯೂಟಿ ಮುಗಿಸಿ ಎಣ್ಣೆ ಕಾಸಿಗಾಗಿ ಅದೂ ಇದೂ ಸಣ್ಣಪುಟ್ಟ ಕಳ್ಳತನ ಮಾಡುತ್ತ ಓಡಾಡುವ ವ್ಯಕ್ತಿ. 'ಏನ್ ಕೊಡವ್ತಾ ಇದೀರಾ ಪೈಪ್ನಾಗಿಂದ?' ಕೇಳಿದ.



‘ಹಾವೈತೆ ಒಳಗೆ ಎಂದೆ. ಅವನಿಗೆ ಮೊದಲು ಅರ್ಥವಾಗಲಿಲ್ಲ. ಬಿಡಿಸಿ ಹೇಳಿದೆ; ಮನೆಯೊಳಗೆ ನಾಗರ ಹಾವು ನುಗ್ಗಿದ್ದು, ಅದು ಆಚೆ ಈಚೆ ಹೋಗದಂತೆ ಒಂದೇ ಕಡೆ ದಾರಿ ಇಟ್ಟು, ದಾರಿಗೆ ಪೈಪ್ ಇಟ್ಟಿದ್ದು, ಪೈಪಿನ ಇನ್ನೊಂದು ತುದಿಯನ್ನು ಮುಚ್ಚಿದ್ದು; ಹಾವು ಒಳಕ್ಕೆ ನುಗ್ಗಿದ ಮೇಲೆ ಎಂಟ್ರಿ ಬಾಯಿಯನ್ನೂ ಕಟ್ಟಿದ್ದು ಎಲ್ಲ. ಈಗ ಪೈಪ್ ಒಳಕ್ಕೆ ಹಾವಿದೆ ಎಂಬುದನ್ನು ನಂಬದ ಅವನು ತುಸು ದೂರದಿಂದಲೇ ಇಣುಕಿ ನೋಡಿದ. ಏನೂ ಕಂಡಿಲ್ಲವೆಂದು ಪುಟ್ಟ ಹರಳುಗಲ್ಲನ್ನೆತ್ತಿ ಪೈಪಿನೊಳಕ್ಕೆ ಹಾಕಿದ. ‘ಭುಸ್’ ಎಂಬ ಸದ್ದು ಪೈಪ್ ಒಳಗಿಂದ ಬರುತ್ತಲೆ ಬೆದರಿ ಹಿಂದಕ್ಕೆ ಜಿಗಿದ.

‘ಬಡ್ದು ಹಾಕಾಕ್ಕಿಲ್ಲವ್ರಾ, ಇಸದ ಪ್ರಾಣಿ’ ಎಂದ. ಅವನಿಗೆ ಇಕಾಲಜಿಯ ಪುಟ್ಟ ಪಾಠ ಹೇಳಿದೆ. ಅವನಿಗೆ ಅವೆಲ್ಲ ಸರಿ ಎನಿಸಲಿಲ್ಲ. ‘ಆಯ್ತು, ಆಯ್ತು, ಕ್ವಾರಿಗೆ ಪೈಪು ಬಿಸಾಕಿ ಹೊಂಟೋಗಿ, ಅದೂ ಮನೆಗೆ ವೋಯ್ತದೆ, ನೀವೂ ಮನೆಗೆ ವೋಗಿ, ಕತ್ತಲಾಯ್ತು’ ಅಂದ.

ಪೈಪು ನನಗೆ ಅದೆಷ್ಟು ಮಹತ್ವದ್ದೆಂದು ಅವನಿಗೆ ವಿವರಿಸಿ ಹೇಳಿದೆ. ಅವನು ಸುತರಾಂ ಆ ಪೈಪನ್ನು ಮನೆಗೆ ಒಯ್ಯಲೇಬಾರದೆಂದೂ ಅದರ ತುಂಬ ವಿಷ ಇದೆಯೆಂದೂ ಹೇಳಿದ. ಹೇಗೆ ನಾಗರ ಹಾವುಗಳು ನೆಲದಿಂದಲೇ ಮರದ ಕೊಂಬೆಗೆ ವಿಷವನ್ನು ಫೂತ್ಕರಿಸಿ ಹಕ್ಕಿ-ಪಕ್ಷಿಗಳನ್ನು ಬೀಳಿಸಿ ತಿನ್ನುತ್ತವೆ ಎಂದೆಲ್ಲ ಪುರಾಣ ಹೇಳುತ್ತ ಹೋದ. ನಾನು ತಲೆಯನ್ನು ಕೊಡವುತ್ತ ಪೈಪನ್ನೂ ಕೊಡವುತ್ತಲೇ ಹೋದೆ. ಹೀಗೇ ಮಾಡುತ್ತಿದ್ದರೆ ಸುತ್ತೆಲ್ಲ ವಿಷದ ಗಾಳಿ ಹಬ್ಬುತ್ತದೆಂದು ಗೊಣಗುತ್ತ ಆತ ಹೊರಟು ಹೋದ. ಕತ್ತಲಾಗುತ್ತಿತ್ತು. ಸುಸ್ತಾಗಿದ್ದ ನಾನು ಪೈಪ್‌ಗೆ ವಿಶ್ರಾಂತಿ ಕೊಟ್ಟೆ. ಹಾವಿಗೂ ವಿಶ್ರಾಂತಿ ಬೇಕಿತ್ತೇನೊ, ಭುಸ್ ಎನ್ನುವುದನ್ನು ಅದು ನಿಲ್ಲಿಸಿತ್ತು. ಅತ್ತಿತ್ತ ನೋಡಿ ನಾನು ಮೆಲ್ಲನೆ ಪೈಪನ್ನು ಕೊನೆಯ ಬಾರಿ ಕಂದಕಕ್ಕೆ ಬಾಗಿಸಿದೆ. ತೀರಾ ಬಗ್ಗಿ ನೋಡಿದ ವಿನಾ ಅದು ಯಾರಿಗೂ ಕಾಣದಂತೆ, ಕ್ವಾರಿಯ ಗೋಡೆಗೆ ಆತು ನಿಲ್ಲುವಂತೆ ಬೀಳಿಸಿದೆ. ಹಾವು ಕೆಳಕ್ಕೆ ಇಳಿದು ಹೋಗುತ್ತದೆ, ಬೆಳ್ಳಂಬೆಳಿಗ್ಗೆ ಪೈಪನ್ನು ಎತ್ತಿ ತಂದರಾಯಿತು ಎಂದುಕೊಂಡು.

ಮರುದಿನ ನಸುಕಿನಲ್ಲೇ ಕಾಫಿಯ ಜತೆಗೆ ಕ್ವಾರಿಗೆ ಹೋದೆ (‘ಕಾಫಿ’ ನಮ್ಮ ನಾಯಿಯ ಹೆಸರು). ಹಾವೂ ಇರಲಿಲ್ಲ, ಪೈಪೂ ಇರಲಿಲ್ಲ.

# ಸಂತಸದ ಜೋಡಿ

*• ನಂದಿನಿ ಕಾಪಡಿ*

**ಮೊ**ನ್ನೆ ನನ್ನ ಗೆಳತಿ ಗೀತೂಳ ಪತಿ ರಮೇಶ್ ಅವರಿಂದ ಇದ್ದಕ್ಕಿದ್ದ ಹಾಗೆ ಫೋನ್ ಬಂದಿತು. "ನಿನ್ನ ಗೆಳತಿ ಗೀತೂ ಈಗಲೇ ಆತ್ಮಹತ್ಯೆ ಮಾಡಿಕೊಳ್ಳುವೆ ಎಂದು ಹೊರಟಿದ್ದಾಳೆ, ದಯವಿಟ್ಟು ಅರ್ಜೆಂಟಾಗಿ ಬಾ" ಎಂದರು. ಧಾವಿಸಿ ಹೋದೆ ನಾನು. ಮನೆಯೊಳಗೆ ಕಾಲಿಡುತ್ತಲೇ ರಮೇಶ್ ಎದುರುಗೊಂಡು ಪಿಸುಗುಡುತ್ತಾ "ನಂದಿನಿ ಸ್ವಲ್ಪ ಪರಿಸ್ಥಿತಿ ಬಿಗಡಾಯಿಸಿದೆ. ನಮ್ಮ ಏಕೈಕ ಸಂತಾನ ಪುತ್ರ ರತ್ನ ರಘು ಅಮೇರಿಕಾದಿಂದ ಎರಡು ದಿವಸಗಳ ಕೆಳಗೆ ಬಂದಿಳಿದ. ಜೊತೆಯಲ್ಲಿ ತನ್ನ ಜೋಡಿ ಎಂದು ಬಿಳೀ ಹುಡುಗನೊಬ್ಬನನ್ನು ಕರೆದುಕೊಂಡು ಬಂದಿದ್ದಾನೆ. ನಮ್ಮ ಜೋಡಿ ಸ್ವರ್ಗದಲ್ಲಿ ಮಾಡಿದ್ದು ಎಂದು ವಾದಿಸುತ್ತಿದ್ದಾನೆ. ಹಿಂದೂ ಪದ್ಧತಿಯ ಪ್ರಕಾರ ನಮ್ಮ ಮದುವೆ ಮಾಡಿಸಿ ಎಂದು ದುಂಬಾಲು ಬಿದ್ದಿದ್ದಾನೆ. ಗೀತೂ ತುಂಬಾ ಹತಾಶಳಾಗಿಬಿಟ್ಟಿದ್ದಾಳೆ. ಹೇಗಾದರೂ ಪರಿಸ್ಥಿತಿ ಸುಧಾರಿಸಮ್ಮ" ಎಂದು ಎರಡೂ ಕೈಗಳನ್ನು ಜೋಡಿಸಿದರು. ಕಣ್ಣಂಚಿನಲ್ಲಿ ನೀರು ತುಳುಕುತ್ತಿತ್ತು.

ಬೇಗ ಬೇಗ ಗೀತೂಳ ಮಲಗುವ ಕೋಣೆಗೆ ಧಾವಿಸಿದೆ. ಅಂಗಾತ ಮಲಗಿಕೊಂಡು ಬಿಕ್ಕಿ ಬಿಕ್ಕಿ ಅಳುತ್ತಿದ್ದಳು ನನ್ನ ಗೆಳತಿ. ನನ್ನನ್ನು ತಬ್ಬಿಕೊಂಡು ತುಂಬಾ ಕಣ್ಣೀರು ಸುರಿಸಿಬಿಟ್ಟಳು. "ನೋಡೇ ನಂದಿನಿ ಇದೆಂತಹ ವಿಚಿತ್ರ ಒಬ್ಬನೇ ಮಗನೆಂದು ಮುದ್ದಿಸಿ ಬೆಳೆಸಿದ್ದರ ಪ್ರಭಾವ. ಅವನಿಗೆ ಹೆಣ್ಣಿನ ಮೇಲೆ ಆಕರ್ಷಣೆ ಇಲ್ಲವಂತೆ. ಗಂಡೇ ಬೇಕಂತೆ. ಈಗ ಅವನ ಜೊತೆ ಮದುವೆ ಬೇರೆಯಂತೆ. ನನ್ನ ಕನಸು ಪೂರಾ ಒಡೆದು ಹೋಯಿತು. ಇದೆಂತಹ ವಿಪರ್ಯಾಸ" ಎಂದು ಬಿಕ್ಕಿ ಬಿಕ್ಕಿ ಅತ್ತಳು.

ನನ್ನ ಮನಸ್ಸು ಒಂದು ನಿಮಿಷ ವಿಚಲಿತವಾಯಿತು. ಆದರೆ ಈ ಪರಿಸ್ಥಿತಿಯನ್ನು ಒಪ್ಪಿಕೊಳ್ಳುವ ಹೊರತು ಬೇರೆ ಮಾರ್ಗವೇ ಇಲ್ಲ! ನಿಧಾನವಾಗಿ ಸಮಾಧಾನ ಹೇಳಿದೆ. ಇನ್ನೇನು ಮನೆಗೆ ವಾಪಸ್ಸು ಹೊರಡಬೇಕು ಎನ್ನುವ ಹೊತ್ತಿಗೆ ರಘುವಿನ ಆಗಮನವಾಯಿತು. ನನ್ನನ್ನು ನೋಡಿ ಬಹಳ ಸಂತೋಷದಿಂದ "ಆಂಟಿ ಹೇಗಾದರೂ ಅಮ್ಮನನ್ನು ಒಪ್ಪಿಸಿ" ಎಂದು ತುಂಬಾ ಬಲವಂತಿಸಿದ.

ಮುಂದಿನ ಐದಾರು ದಿನಗಳಲ್ಲಿ ಮಹತ್ವವಾದ ಘಟನೆಗಳು ನಡೆದವು.

ಮೊದಲನೆಯದು ಘಟನೆ – ರಘು ಮೆಚ್ಚಿದ್ದ ಹುಡುಗ ಜೋ. ಮೊದಲ ಬಾರಿ ಮನೆಗೆ ಬಂದ. ಹೊಂಬಣ್ಣದ ಗುಂಗುರು ಕೂದಲಿನ ದೊಡ್ಡ ದೊಡ್ಡ ನೀಲಿ ಕಣ್ಣುಗಳ ಹುಡುಗ.

ನೋಡಿದರೆ ಮುದ್ದು ಬರುತ್ತಿತ್ತು. ಅಷ್ಟು ಎಳಸು ಮುಖ! ನಮ್ಮೆಲ್ಲರ ಕಾಲಿಗೂ ಬಿದ್ದು "ನಿಮ್ಮ ಆಶೀರ್ವಾದಕ್ಕೆ ಕಾತರಿಸುತ್ತಿದ್ದೇನೆ" ಎಂದು ಹೇಳಿಬಿಟ್ಟ ಗೀತೂಳ ಕೈ ಹಿಡಿದು "ಮಮ್ಮಿ ನಿಮ್ಮ ಆಶೀರ್ವಾದ ಸಿಕ್ಕದ ಹೊರತು ನಮ್ಮ ಮದುವೆಯಾಗುವುದಿಲ್ಲ" ಎಂದುಬಿಟ್ಟ ಕೈ ಕೊಸರಿಕೊಂಡಳು ಗೀತೂ. ರಮೇಶ್‌ರ ಕೈ ಹಿಡಿದು "ಡ್ಯಾಡ್ ನನಗೆ ಗೊತ್ತು ನೀವಿಬ್ಬರೂ ನಿರಾಶರಾಗಿರುವಿರಿ ಎಂದು. ಆದರೆ ಏನು ಮಾಡುವುದು? ನಾನು ಮತ್ತು ರಘು ಒಬ್ಬರನ್ನೊಬ್ಬರು ಬಿಡಲಾಗದ ಸಂಬಂಧ ಹೊಂದಿದ್ದೇವೆ. ಇನ್ನು ಮೇಲಿನಿಂದ ನಾನೂ ಈ ಮನೆಯ ಸದಸ್ಯ. ನೀವಿಬ್ಬರೂ ನನಗೆ ತಂದೆ ತಾಯಿಗಳು" ಎಂದ. ರಮೇಶ್ ಮುಖ ತಿರುಗಿಸಿಕೊಂಡರು.

ನನ್ನನ್ನು ಕುರಿತು "ನಂದಿನಿ, ನಿಮ್ಮನ್ನು ನೋಡಿದರೆ ನನಗೆ ನನ್ನ ತಾಯಿಯ ನೆನಪು ಬಂದಿತು" ಎನ್ನುತ್ತಾ ಬೇಗ ಬೇಗ ಕಣ್ಣೊರೆಸಿಕೊಂಡ. ಅದೇ ಕ್ಷಣ.... ನನ್ನ ಮಾತೃತ್ವ ಜಾಗೃತಗೊಂಡಿತು. ಪಾಪ ಗಂಡಸಾದರೇನಂತೆ? ಈ ಹುಡುಗ ತುಂಬಾ ಸಜ್ಜನಿ. ಒಳ್ಳೆಯ ಸಂಸ್ಕಾರದವನು. ಇವನ ಆಸೆಯನ್ನು ನೆರವೇರಿಸಲು ನನ್ನ ಕೈಲಾದ ಎಲ್ಲ ಕೆಲಸವನ್ನೂ ಮಾಡುವುದು ಎಂದು ಪ್ರತಿಜ್ಞೆ ತೊಟ್ಟೆ! ಅವನಿಗೆ ಅದರ ಅರಿವಾದಂತೆ ನಿಮ್ಮನ್ನು ಮಮ್ಮೀ ಎಂದು ಕರೆದರೆ ನಿಮಗೆ ಅಭ್ಯಂತರವಿಲ್ಲ ತಾನೆ ಎನ್ನುತ್ತಾ ಮತ್ತೊಮ್ಮೆ ತಬ್ಬಿಕೊಂಡ! ಈಗ ನನ್ನ ಕಣ್ಣಿನಲ್ಲೂ ನೀರು!

ಎರಡನೆಯ ಮಹತ್ವ ಘಟನೆ – ಗೀತೂ ಮತ್ತು ರಮೇಶ್‌ರನ್ನು ಒಪ್ಪಿಸಿದ್ದು. ವಿಜ್ಞಾನಿ ರಮೇಶ್‌ರ ಮುಂದೆ ವಿಜ್ಞಾನದ ಪ್ರಕಾರ ಒಂದೇ ಲಿಂಗದವರು ಒಬ್ಬರನ್ನೊಬ್ಬರು ಪ್ರೇಮಿಸುವುದು ಏಕೆ ಎಂಬ ವಿವರಣೆ ಕೊಟ್ಟೆ. ಅದಕ್ಕಾಗಿ ಅಂತರ್ಜಾಲವನ್ನು ಒಳಹೊಕ್ಕು ಮೂಲೆ ಮೂಲೆಗಳಲ್ಲೂ ಹುಡುಕಬೇಕಾಗಿತ್ತು. ನನ್ನ ಇಬ್ಬರು ವೈದ್ಯ ಗೆಳೆಯರು ಕೂಡಾ ಸಹಾಯ ಮಾಡಿದರು. ನನ್ನ ಗೆಳತಿ ರಂಜನಾಳನ್ನು ಒಪ್ಪಿಸಿ ಗೀತೂಗೆ ಇತಿಹಾಸದಲ್ಲಿ ಆಸಕ್ತಿ ಇದ್ದಿದ್ದರಿಂದ ಇತಿಹಾಸದ ಪ್ರಕಾರ ಯಾರು ಯಾರಿಗೆ ಈ ತರಹದ ಸಂಬಂಧವಿತ್ತು ಎಂಬ ವಿವರಣೆ ಕೊಡಿಸಿದೆ.

ಮೂರನೆಯ ಘಟನೆ – ಮುದ್ದಿನ ಸೊಸೆಗಾಗಿ ಎಷ್ಟೆಲ್ಲಾ ಒಡವೆಗಳನ್ನು ಮಾಡಿಸಿದ್ದೆ! ಈ ಆಭರಣಗಳನ್ನು ಈಗ ಏನು ಮಾಡುವುದು ಎಂಬ ಪ್ರಶ್ನೆ ಗೀತೂವಿಗೆ ಕಾಡುತ್ತಿತ್ತು. ಜೋನನ್ನು ಜೊತೆ ಮಾಡಿಕೊಂಡು ಒಮ್ಮೆ ಎಲ್ಲಾ ಆಭರಣಗಳ ಪ್ರದರ್ಶನ ಮಾಡಿಸಿದೆ. ವಜ್ರದ ಪದಕ ತೆಗೆಯುತ್ತಾ ಗೀತೂ "ನೋಡೇ ಇದನ್ನ ಹಾಕಿಕೊಳ್ಳಲು ಯಾವ ಹುಡುಗಿಗೂ ಪುಣ್ಯವಿರಲಿಲ್ಲವೆ?" ಎಂದು ನಲುಗಿದಳು. ತಕ್ಷಣ ಜೋ ಅದನ್ನು ತೆಗೆದುಕೊಂಡು ಮೆಲ್ಲನೆ ಸವರುತ್ತಾ "ಮಮ್ಮಿ ನನಗೆ ವಜ್ರದ ಪದಕ ತುಂಬಾ ಇಷ್ಟ ನ್ಯೂಯಾರ್ಕಿನಿಂದ ನಾವು ಬರುತ್ತಿದ್ದಾಗ ಏರ್ ಇಂಡಿಯಾದ ಮ್ಯಾಗಜೀನ್‌ನಲ್ಲಿ ಇದೇ ತರಹದ ಪದಕದ ಜಾಹೀರಾತು ನೋಡಿ ಮೋಹಗೊಂಡಿದ್ದೆ. ಥ್ಯಾಂಕ್‌ಯೂ ಫಾರ್ ಯುವರ್ ಗಿಫ್ಟ್" ಎನ್ನುತ್ತಾ ಬೇಗ ಬೇಗ ಅದನ್ನು ತನ್ನ ಪಕ್ಕದಲ್ಲಿರಿಸಿಕೊಂಡ! ರಘು ನೋಡಿದರೂ ನೋಡದ ಹಾಗೆ ನಟಿಸಿದ. ಎಂತಹ ಚುಪಾ ರುಸ್ತುಂ ಎಂದುಕೊಂಡೆ.

ಈಗ ಹೊರಬಂದದ್ದು ಕೆಂಪಿನ ನೆಕ್‌ಲೇಸ್ ''ಹೌ ಬ್ಯೂಟಿಫುಲ್! ಆದರೆ ರಘುವಿಗೆ ಕೆಂಪುಕಲ್ಲು ಇಷ್ಟವಿಲ್ಲ!'' ಎನ್ನುತ್ತಾ ಅದನ್ನು ದೂರಸರಿಸಿದ ಜೋ. ರಘುವಿನ ಅಜ್ಜಿಯ ಅವಲಕ್ಕಿ ಸರ ಜೋಗೆ ತುಂಬಾ ಹಿಡಿಸಿಬಿಟ್ಟು ಅದನ್ನು ಧರಿಸಿಯೂ ಬಿಟ್ಟ. ಗೀತೂಗೆ ಒಂದು ಕಡೆ ಕೋಪ ಹಾಗೇ ಆಶ್ಚರ್ಯ ಕೂಡಾ! ''ನೋಡೇ ನಂದಿನಿ ನಮ್ಮ ಅತ್ತೆ ಇದನ್ನು ನೋಡಿಬಿಟ್ಟಿದ್ದರೆ ಏನನ್ನುತ್ತಿದ್ದರೋ ಏನೋ ಎಂದು ಉದ್ಗರಿಸಿದಳು.''

ಜೋ ತನಗಾಗಿ ಎರಡು ಉಂಗುರಗಳನ್ನು ಕಾದಿರಿಸಿದೊಂದು ಒಂದನ್ನು ರಘುವಿಗೆ ತೋರಿಸುತ್ತಾ ''ಹನಿ ಈ ಉಂಗುರವನ್ನೇ ನನಗೆ ಮದುವೆಯಲ್ಲಿ ತೊಡಿಸಿಬಿಡು'' ಎಂದು ಮುದ್ದುಗರೆದ. ಅದಲ್ಲದೇ ಜೋ ತನಗಾಗಿ ಒಂದು ವೆಂಕಟೇಶ ಪದ್ಮಾವತಿಯ ಚಿನ್ನದ ಪದಕವನ್ನೂ ತೆಗೆದಿರಿಸಿಕೊಂಡ. ''ದಿಸ್ ಈಸ್ ಯುವರ್ ಫ್ಯಾಮಿಲಿ ಗಾಡ್'' ಎನ್ನುತ್ತಾ ಕಣ್ಣಿಗೊತ್ತಿಕೊಂಡು ''ಮಮ್ಮೀ, ಮಂಗಳ ಸೂತ್ರದ ಬದಲಾಗಿ ಇದನ್ನೇ ರಘು ನನ್ನ ಕೊರಳಿಗೆ ಕಟ್ಟಿದರೆ ಹೇಗೆ?'' ಎಂದು ಸೂಚಿಸಿಯೂ ಬಿಟ್ಟ.

ನವಿರಾಗಿ ತಲೆ ಚಚ್ಚಿಕೊಂಡಳು ಗೀತೂ. ಮಿಕ್ಕೆಲ್ಲಾ ಆಭರಣಗಳನ್ನು ಜೋಪಾನವಾಗಿ ಒಳಗಿಟ್ಟಳು.

''ಸಧ್ಯ ಸೀರೆಗಳ ಮೇಲೆ ಕಣ್ಣು ಬೀಳಲಿಲ್ಲವಲ್ಲಾ'' ಎಂದು ಉದ್ಗರಿಸಿದಳು!

ನಾಲ್ಕನೆಯ ಘಟನೆ – ಜೋ ದುಂಬಾಲು ಬಿದ್ದು ನಮ್ಮ ಮನೆಗೆ ಬಂದದ್ದು. ಈ ''ಸಂತಸದ ಜೋಡಿ''ಯ ಬಗ್ಗೆ ನನ್ನ ಮನೆಯವರಿಗೆ ಈಗಾಗಲೇ ಸಮಾಚಾರ ತಿಳಿಸಿದ್ದೆ. ನನ್ನ ಪತಿದೇವರನ್ನು ನೋಡಿ ಜೋ ''ನೋಡಿ ನಾನು ನಂದಿನಿಯನ್ನು ಮಮ್ಮೀ ಎಂದು ಕರೆಯುತ್ತೇನೆ. ನಿಮ್ಮನ್ನು ಪಾಪಾ ಎನ್ನಲೇ ಅಥವಾ ಡ್ಯಾಡಿ'' ಎಂದುಬಿಟ್ಟ. ಯಜಮಾನರು ಮುಖ ಸಿಂಡರಿಸಿಕೊಂಡು ''ಜೋ, ಕಾಲ್ ಮಿ ಅಂಕಲ್'' ಎಂದು ಗಡುಸಾಗಿ ಹೇಳಿಬಿಟ್ಟರು. ನ್ಯೂಯಾರ್ಕಿನಲ್ಲಿ ಜೋ ಒಬ್ಬ ಬ್ಯಾಂಕರ್ ಆಗಿ ಕೆಲಸ ಮಾಡುತ್ತಿದ್ದಾನೆ ಎಂದು ತಿಳಿದ ಮೇಲೆ ಸ್ವತಃ ಬ್ಯಾಂಕರ್ ಆಗಿದ್ದ ನಮ್ಮವರ ಚರ್ಯೆ ಸ್ವಲ್ಪ ಬದಲಾಯಿತು. ''ನನಗೆ ಪರಿಚಯವಿರುವ ಬ್ಯಾಂಕರ್‌ಗಳೆಲ್ಲಾ ನೀರವಾದವರೇ, ನೀನೊಬ್ಬನೇ ಬೇರೆ'' ಎಂದು ಹೇಳಿಯೂ ಬಿಟ್ಟರು. ನಮ್ಮ ಕಿಲಾಡಿ ಜೋ ''ಅಂಕಲ್, ನಾನು ತುಂಬಾ ಸ್ಪೆಷಲ್! ಅಲ್ಲವೇ ಮಮ್ಮೀ'' ಎಂದು ನನ್ನ ಅಂಗೈ ಒತ್ತಿ ಹಿಡಿದ. ನನ್ನ ಪತಿ ಮುಖ ಸಿಂಡರಿಸಿಕೊಂಡರು.

ನನ್ನ ದೊಡ್ಡ ಮಗಳು ಜೋ ತಾನು ನ್ಯೂಯಾರ್ಕಿನಲ್ಲಿ ಓದಿದ ಕಾಲೇಜಿನಲ್ಲೇ ಅವನೂ ವಿದ್ಯಾಭ್ಯಾಸ ಮಾಡಿದ್ದ ಎಂದು ತಿಳಿದ ತಕ್ಷಣ ಅವನೊಂದಿಗೆ ಬಲುಬೇಗ ಸ್ನೇಹ ಮಾಡಿದಳು. ಎರಡನೆಯ ಮಗಳನ್ನೂ ಜೋ ಬಲುಬೇಗ ಗೆದ್ದುಬಿಟ್ಟ. ''ಸ್ವೀಟೀ, ನನ್ನ ಮದುವೆಯ ಪೋಷಾಕನ್ನು ಆರಿಸಲು ಸಹಾಯ ಮಾಡುವೆ ತಾನೆ?'' ಎಂದಾಗ ಇವಳಿಗೆ ಸ್ವರ್ಗ ಎರಡೇ ಗೇಣು! ''ಖಂಡಿತಾ ಜೋ, ಈಗಲೇ ನಾವು ಷಾಪಿಂಗಿಗೆ ಹೋಗೋಣ. ಅಂದಹಾಗೆ ರಘು ಯಾವ ಡ್ರೆಸ್ ಹಾಕುತ್ತಾನೆ ಎಂದು ನಿರ್ಧಾರವಾದ ಮೇಲೆ ನಾವು ಅದೇ ಮಾದರಿ ನಿನ್ನ ಪೋಷಾಕನ್ನು ಡಿಸೈನ್ ಮಾಡಿಬಿಡೋಣ'' ಎಂದಳು. ಜೋ ನಮ್ಮ ಮನೆಯಲ್ಲೇ ಊಟ ಮಾಡಿಕೊಂಡು ಹೋದ. ನನ್ನ ಮಕ್ಕಳು ಅಂದೆಲ್ಲಾ ಜೋನ ಗುಣಗಾನ ಮಾಡಿದ್ದೂ ಮಾಡಿದ್ದೇ.

ಐದನೇ ಘಟನೆ – ರಘು ಮತ್ತು ಜೋರ ಮದುವೆ ಹಿಂದೂ ವೈದಿಕ ಪದ್ಧತಿಯಲ್ಲಿ ನಡೆಸಲು ವ್ಯವಸ್ಥೆ ನನ್ನ ಜೊತೆಯೇ ಶಾಲೆಯಲ್ಲಿ ಕಲಿಯುತ್ತಿದ್ದ ಸುಬ್ಬಾ ಭಟ್ಟರನ್ನು ಹೇಗಾದರೂ ಮಾಡಿ ಒಪ್ಪಿಸುವುದು. ಸುಬ್ಬಾ ಭಟ್ಟರಾಗುವ ಮೊದಲು ಆಗಿದ್ದ ಸುಬ್ರಮಣ್ಯ ನನ್ನ ಕ್ಲಾಸಿನಲ್ಲೇ ಓದುತ್ತಿದ್ದ. ಎಷ್ಟೋ ಸಲ ವಿಜ್ಞಾನ, ಸಮಾಜ ಶಾಸ್ತ್ರ ಹಾಗೂ ಗಣಿತದ ಟೆಸ್ಟ್‌ಗಳಲ್ಲಿ ನನ್ನ ಪೇಪರ್ ನೋಡಿ, ಕಾಪಿ ಮಾಡಿ, ಪಾಸು ಮಾಡಿಯೂ ಇದ್ದ! ಈ ಹಳೆಯ ಋಣವನ್ನು ನೆನೆಸಿಕೊಂಡು ನನಗೆ ಸಹಾಯ ಮಾಡಬಹುದೇನೋ ಎಂದು ಯೋಚಿಸಿ, ಗೀತೂ ಮತ್ತು ರಮೇಶ್‌ರನ್ನು ಕರೆದುಕೊಂಡು ಅವರ ಮನೆಗೆ ಹೋದೆ. ಮನಸ್ಸಿನಲ್ಲಿ ದುಗುಡ ತುಂಬಿತ್ತು!

ಸುಬ್ಬಾ ಭಟ್ಟರು ಮೊದಲೆಲ್ಲಾ ಚೆನ್ನಾಗಿ ಮಾತನಾಡಿದವರು ಮದುವೆಯಾಗುತ್ತಿರುವವರು ಹೆಣ್ಣು – ಗಂಡಲ್ಲ ಆದರೆ ಗಂಡು – ಗಂಡು ಎಂದು ಹೇಳಿದ ತಕ್ಷಣ ಕಣ್ಣೆಲ್ಲಾ ಕೆಂಪಾಗಿ, ಕುರ್ಚಿ ಬಿಟ್ಟೆದ್ದು "ಅಪಚಾರ, ಅಪಚಾರ, ಶಾಂತಂ.. ಪಾಪಂ.." ಎಂದು ಹೇಳಿ "ನಂದಿನಿಯವರೇ, ಇದೆಂತಹ ಪ್ರಸ್ತಾವನೆ ತಂದಿದ್ದೀರಿ? ದಯವಿಟ್ಟು ಮರೆತುಬಿಡಿ. ನಾನ್ಯಾಕೆ ಯಾರೇ ವೈದಿಕ ಭಟ್ಟರೂ ಈ ಕೆಲಸ ಮಾಡುವುದಿಲ್ಲ" ಎಂದು ಖಡಾಖಂಡಿತವಾಗಿ ಉರಿದು ಬಿಟ್ಟರು.

ನನಗೆ ತುಂಬಾ ಬೇಸರವಾಯಿತು. "ಸುಬ್ಬೂ ನಾನು ನೀನು ಅಕ್ಕ ತಮ್ಮಂದಿರ ತರಹ ಬೆಳೆದಿದ್ದಲ್ಲವೇನೋ ನಮ್ಮದೇ ಮಕ್ಕಳು ಹೀಗೆ ಮಾಡಿದ್ದರೆ? ಅರ್ಜುನ ಬೃಹನ್ನಳೆಯಾದ ಪಾತ್ರವನ್ನು ನಮ್ಮ ಶಾಲೆಯ ನಾಟಕದಲ್ಲಿ ನೋಡಿದ್ದನ್ನು ಮರೆತು ಬಿಟ್ಟೆಯಾ? ಸಾಕ್ಷಾತ್ ಮಹಾವಿಷ್ಣುವೇ ಮೋಹಿನಿಯಾಗಿಬಿಟ್ಟಿಲ್ಲವೆ? ಅಂತಹ ಪುರುಷೋತ್ತಮನೇ ಸ್ತ್ರೀಯಾದ ಮೇಲೆ ಇನ್ನು ಹುಲು ಮಾನವರ ಕಥೆ ಏನು? ನೋಡಪ್ಪಾ ಸುಬ್ಬು ನನ್ನ ಗೆಳತಿ ಗೀತೂ ಮತ್ತು ರಮೇಶ್ ಅಷ್ಟೇ ಇಲ್ಲ, ರಘು ಮತ್ತು ಜೋ ಕೂಡಾ ತುಂಬಾ ನಿರಾಶರಾಗಿಬಿಡುತ್ತಾರೆ. ವೈದಿಕ ವಿದ್ವಾಂಸ ಸುಬ್ಬಾ ಭಟ್ಟರು ತಮ್ಮ ಲಗ್ನ ನಡೆಸಿದರು ಎಂಬ ಆಶೆಯಿಂದ ನನ್ನನ್ನು ಇಲ್ಲಿ ಕಳಿಸಿದ್ದಾರೆ. ನಿನ್ನಂತಹ ಸುಸಂಸ್ಕೃತ ಪಂಡಿತ ಬೇಡವೆಂದರೆ ಹ್ಯಾಗೆ' ಎಂದೆಲ್ಲಾ ಪುಸಲಾಯಿಸಿದೆ. ಡಿಪ್ಲೊಮೆಸಿ ನನ್ನ ಎರಡನೆಯ ಗುಣ ಎಂದು ಯಜಮಾನರು ಯಾವಾಗಲೂ ಹೇಳುತ್ತಿದ್ದರಲ್ಲ!!

ಸ್ವಲ್ಪ ಮೆತ್ತಗಾದ ಸುಬ್ಬಾ ಭಟ್ಟ ರಮೇಶ್ "ನೋಡಿ ಭಟ್ಟರೇ, ದಕ್ಷಿಣೆಗೇನೂ ಕಡಿಮೆಯಿಲ್ಲ. ಒಂದರ್ಧ ಗಂಟೆ ವಿಧಿ ನಡೆಸಿಕೊಟ್ಟು ಬಿಡಿ. ಅಂದ ಹಾಗೆ ನಂದಿನಿಯ ಪರಿವಾರ ಬಿಟ್ಟರೆ ನಾವು ಬೇರೆ ಯಾರಿಗೂ ಆಮಂತ್ರಿಸುವುದಿಲ್ಲ. ಗುಟ್ಟಲ್ಲೇ ಮದುವೆ ನಡೆಸಿದರೂ ಸಾಕು. ಹೇಗಿದ್ದರೂ ರಘು ಮತ್ತು ಜೋ ಸ್ವೀಡನ್ನಿಗೆ ಹೋಗಿ ಅಲ್ಲಿ ಕಾಯ್ದೆಯ ಪ್ರಕಾರ ಮದುವೆಯಾಗುತ್ತಾರೆ" ಎಂದು ವಿವರಣೆ ನೀಡಿದರು. ಇಷ್ಟರ ಮಟ್ಟಿಗೆ ಬದಲಾದದ್ದಿಲ್ಲ ರಮೇಶ್!

ಭಟ್ಟರು ಒಳಗೆ ಹೋಗಿ ಕಾಫಿಗೆ ಹೇಳಿ ಬಂದರು. ಕಾಫಿ ಸೇವಿಸುತ್ತಾ ಬರೀ ಮೂವತ್ತೈದು ಸಾವಿರ ರೂ ಸಂಭಾವನೆ ಕೊಟ್ಟರೆ ಸಾಕೆಂದರು! ರಮೇಶ್ ಏನೋ ಹೇಳುವ ಮೊದಲೇ ಗೀತೂ "ಸರಿ ಸರಿ ಭಟ್ಟರೆ.. ನೀವು ಹೇಳಿದ ಹಾಗೆ" ಎಂದು ಬಿಟ್ಟಳು. ಮೂರುಲಕ್ಷ ಕೊಡಲೂ ಸಿದ್ಧವಾಗಿದ್ದಳು ಗೆಳತಿ!

ಆರನೆಯ ಘಟನೆ – ಶುಭ ದಿನದಂದು ಗೀತೂ – ರಮೇಶ್ ಮನೆಯಲ್ಲಿಯೇ ರಘು ಮತ್ತು ಜೋ ಮದುವೆಯಾದರು. ''ಕನ್ಯಾದಾನ'ವನ್ನು ಮಮ್ಮಾ ಮತ್ತು ಅಂಕಲ್ ಎನಿಸಿಕೊಳ್ಳುತ್ತಿದ್ದ ನಾವೇ ಮಾಡಿದೆವು. ನನ್ನ ಪತಿ ಮುಖ ಸಿಂಡರಿಸಿಕೊಂಡೇ ಧಾರೆ ಎರೆದರು. ನನ್ನ ದೊಡ್ಡ ಮಗಳು ರಘುವಿನ ತಂಗಿಯಾಗಿ ಕಲಶ ಹಿಡಿದರೆ, ನನ್ನ ಎರಡನೆಯ ಮಗಳು ಜೋನ ತಂಗಿಯಾಗಿ ಕಲಶ ಹಿಡಿದಳು. ಸುಬ್ಬಾ ಭಟ್ಟರು ಚಾಚೂ ತಪ್ಪದೆ ಮಂತ್ರ ಹೇಳಿ ಒಂದು ಗಂಟೆಯಲ್ಲಿ ಮದುವೆಯ ಶಾಸ್ತ್ರ ಮುಗಿಸಿದರು. ರಘು ಮತ್ತು ಜೋ ಕೈ ಕೈ ಹಿಡಿದು, ಲೊಚ ಲೊಚ ಮುತ್ತುಕೊಡುತ್ತಲೇ ಉಂಗುರಗಳನ್ನು ಒಬ್ಬರಿಗೊಬ್ಬರು ಹಾಕಿ, ಹಾರಗಳನ್ನು ಹಾಕಿ ಸತಿ–ಪತಿ ಅಲ್ಲ... ''ಸಂತಸದ ಜೋಡಿ''ಗಳಾದರು.

ನಂತರ ಇಬ್ಬರೂ ಮನೆದೇವರಾದ ತಿರುಪತಿಗೆ ಹೋಗಿ ಬಂದರು. ಮಾರನೆಯ ದಿನ ಅವರ ವಾಪಸ್ಸು ಪ್ರಯಾಣ. ನನ್ನನ್ನು ತಬ್ಬಿಕೊಂಡು ಗೊಳೋ ಎಂದು ಅತ್ತ ಜೋ, ''ಮಮ್ಮಾ, ನಿನ್ನಂತಹ ತಾಯಿ ಸಿಕ್ಕಿದ್ದು ನನ್ನ ಭಾಗ್ಯ'' ಎನ್ನುತ್ತಾ ಇನ್ನೂ ಜೋರಾಗಿ ಅತ್ತ. ಗೀತೂಳನ್ನು ತಬ್ಬಿಕೊಂಡು ''ಮಮ್ಮಿ ನನಗೆ ಇ–ಮೈಲ್‌ನಲ್ಲಿ ರಘುವಿಗೆ ಇಷ್ಟವಾಗುವ ಅಡಿಗೆಗಳೆಲ್ಲವನ್ನೂ ಹೇಳಿಕೊಡಿ. ರಘುವನ್ನು ತುಂಬಾ ಚೆನ್ನಾಗಿ ನೋಡಿಕೊಳ್ಳುತ್ತೇನೆ. ನೀವು ಮತ್ತು ಡ್ಯಾಡಿ ನಮ್ಮ ಮನೆಗೆ ಶೀಘ್ರದಲ್ಲೇ ಬನ್ನಿ. ಅಂದ ಹಾಗೆ ಎರಡು ವರ್ಷಗಳಲ್ಲಿ ನಿಮ್ಮ ಮೊಮ್ಮಗು ಸಿದ್ಧವಾಗುತ್ತದೆ. ಭಾರತದಿಂದಲೇ ಒಂದು ಮಗುವನ್ನು ದತ್ತು ತೆಗೆದುಕೊಳ್ಳಲು ನಾವಿಬ್ಬರೂ ಇಚ್ಛಿಸಿದ್ದೇವೆ' ಎಂದ!

ಗೀತೂ – ರಮೇಶ್ ಮುಖ ಮುಖ ನೋಡಿಕೊಂಡರು. ತಿರುಪತಿ ಪ್ರಸಾದದ ಲಾಡು ಮೆಲ್ಲುತ್ತಾ ರಘು ನನ್ನತ್ತ ನೋಡಿ ''ನೀವು ನನಗೆ ಮಾಡಿದ ಉಪಚಾರಕ್ಕೆ ಹೇಗೆ ಧನ್ಯವಾದ ಹೇಳಬೇಕೋ ತಿಳಿಯುತ್ತಿಲ್ಲ'' ಎನ್ನುತ್ತಾ ಒಂದು ಕಾಂಜೀವರಂ ಸೀರೆ ಉಡುಗೊರೆಸಿದ! ಜೋ ನನ್ನ ಕೆನ್ನೆಗೆ ಮುತ್ತು ಕೊಡುತ್ತಾ ಗುಲಾಬಿ ಬಣ್ಣದ ಕಾಗದದಲ್ಲಿ ಸುತ್ತಿದ್ದ ಹ್ಯಾಂಡ್ ಬ್ಯಾಗನ್ನು ಉಡುಗೊರೆಸಿದ! ರಘು ಮತ್ತು ಜೋ ಊರಿಗೆ ಹೊರಟರು. ನಾವು ಏರ್‌ಪೋರ್ಟ್‌ನವರೆಗೆ ಹೋಗಿ ಬೀಳ್ಕೊಟ್ಟೆವು. ಇಲ್ಲಿಯವರೆಗೆ ಯಾವುದೇ ತಪ್ಪಾಗಿರಲಿಲ್ಲ! 'ಭೇಷ್ ನಂದಿನಿ' ಎಂದು ನನಗೆ ನಾನೇ ಬೆನ್ನು ತಟ್ಟಿಕೊಂಡೆ.

ಇದೆಲ್ಲಾ ಆದ ಒಂದು ವರ್ಷದ ನಂತರ –

ಏಳನೆಯ ಘಟನೆ ನಡೆಯಿತು! ಅದೇನೆಂದರೆ.... ಆತ್ಮಹತ್ಯೆ ಮಾಡಿಕೊಳ್ಳಲು ಹೊರಟಿದ್ದ ಗೀತೂ ಈಗ ತನ್ನ ಪ್ರಾಧ್ಯಾಪಕ ವೃತ್ತಿಗೆ ಟಾಟಾ ಹೇಳಿ ಒಂದು ''ಮ್ಯಾರೇಜ್ ಬ್ಯೂರೋ'' ತೆಗೆದಿದ್ದಾಳೆ. ವಿಶೇಷವೇನು ಗೊತ್ತೆ? ಈ ಮದುವೆ ಬ್ಯೂರೋ ಗಂಡು–ಹೆಣ್ಣಿಗೆ, ಗಂಡು–ಗಂಡಿಗೆ ಮತ್ತು ಹೆಣ್ಣು–ಹೆಣ್ಣಿಗೆ! ಮದುವೆ ಬ್ಯೂರೋ ಹೆಸರು ಏನು ಗೊತ್ತೆ? ''ಸಂತಸದ ಜೋಡಿ'' ಎಂತಹ ಕಿಲಾಡಿ ನೋಡಿ!

# ಹಾರಾಡುವ ಶಾಲುಗಳು

• ಕೃಷ್ಣ ಸುಬ್ಬರಾವ್

**ಕೆ**ಲವರಿಗೆ ಯಾವುದಾದರೂ ವಿಷಯದ ಮೇಲೆ ಸಂಶೋಧನೆ ಮಾಡುವ ಅಥವಾ ಸರ್ವೆ ಮಾಡುವ ಹುಚ್ಚಿರುತ್ತದೆ. ನಮ್ಮ ರಾಮಣ್ಣನಿಗೆ ಇತ್ತೀಚೆಗೆ ಒಂದು ಬಲವಾದ (ವೀಕ್‌ನೆಸ್ ಅನ್ನಿ) ಹುಚ್ಚು ಹಿಡಿಯಿತು. ಮನೆಮನೆಗೆ ಹೋಗಿ ''ನಿಮಗೆ ಯಾರಾದರೂ ಇತ್ತೀಚೆಗೆ ಸನ್ಮಾನ ಮಾಡಿದ್ದಾರಾ? ಶಾಲು ಹೊದಿಸಿದ್ದಾರಾ?'' ಎಂದು ಕೇಳುವುದಕ್ಕೆ ಪಾದಯಾತ್ರೆ ಹೊರಟ. ಸನ್ಮಾನ ಮಾಡಿಸಿಕೊಂಡವರ ಮನೆಯಲ್ಲಿ ವಾಸ್ತವ್ಯ ಮಾಡೊಕ್ಕೆ ಅವನೇನು ರಾಜ್ಯದ ಮುಖ್ಯಮಂತ್ರಿಯೆ? - ಕೇವಲ ಮಾಹಿತಿ ಸಂಗ್ರಹ ಮಾಡುವದಷ್ಟೇ ಅವನ ಉದ್ದೇಶವಾಗಿತ್ತು. ಆದರೆ ಬಹಳ ಜನ, ಸುತ್ತಮುತ್ತಲಿನವರು ರಾಮಣ್ಣನಿಗೆ ಏನೋ ಆಗಿದೆ. ''ಪಾಪ ಚೆನ್ನಾಗಿದ್ದ, ರಿಟೈರ್ ಆದಮೇಲೆ ಹೀಗೆ ಆಗಿದ್ದಾನೆ? ಯಾರಾದರೂ ಒಳ್ಳೆ ಡಾಕ್ಟರಿಗೆ ತೋರಿಸಬಾರದಾ? ಹೇಗಿದ್ದರೂ ನೀವು ಈಗ ಸೈಕಾಲಜಿ ಎಂ.ಎಸ್ಸಿ. ಮಾಡೋದಕ್ಕೆ ಹೊರಟಿದ್ದೀರಾ? ಕೌನ್ಸಿಲಿಂಗ್ ಕ್ಲಾಸಿಗೂ ಸೇರಿದ್ದೀರಿ'' ಎಂದು ನನ್ನನ್ನೇ ಕೇಳಲು ಶುರುಮಾಡಿದರು. ಇನ್ನೂ ಕೆಲವರು ನಾನು ಸೈಕಾಲಜಿ ಓದಲಿಕ್ಕೆ ಶುರುಮಾಡಿದ್ದೆ ರಾಮಣ್ಣನ ಸಲುವಾಗಿ ಎಂಬಂತೆ ಮಾತನಾಡುತ್ತಿದ್ದಾರೆ.

ಚಿಕ್ಕಂದಿನಿಂದಲೂ ಬಲ್ಲ ನನಗೆ ರಾಮಣ್ಣನಲ್ಲಿ ಯಾವ ದೋಷವಾಗಲಿ ನ್ಯೂನತೆಯಾಗಲಿ ಕಾಣಲಿಲ್ಲವೆನ್ನಿ. ಇತರರ ಮಾತುಗಳಿಗೆ ಯಾವತ್ತೂ ತಲೆ ಕೆಡಿಸಿಕೊಂಡವನಲ್ಲ ನಮ್ಮ ರಾಮಣ್ಣ. ಏನಾದರೂ ಸಾಧಿಸಬೇಕಾದರೆ ಈ ರೀತಿಯ ನಡವಳಿಕೆ ಅನಿವಾರ್ಯ. ಹತ್ತು ಜನ ನೂರು ಮಾತು. ರಾಮಣ್ಣ ತನ್ನ ಶಾಲಿನ ಸರ್ವೆ ಮುಂದುವರಿಸಿದ. ಬೆಂಗಳೂರಿನಂತಹ ರಾಕ್ಷಸಿ ನಗರದಲ್ಲಿ ಸಾಧಕರೆನಿಸಿಕೊಂಡ ಸಣ್ಣಪುಟ್ಟ ಸಾಹಿತಿಗಳನ್ನು ಕಲಾವಿದರನ್ನು, ಹೋರಾಟಗಾರರನ್ನು, ಕ್ರೀಡಾಪಟುಗಳನ್ನು, ಉಪಾಧ್ಯಾಯರುಗಳನ್ನು, ಸಮಾಜಸೇವಕರನ್ನು ಭೇಟಿ ಮಾಡಿ ಮಾಹಿತಿಯನ್ನು ಕಲೆಹಾಕಿದ. ಒಂದು ಕೆಲಸ ಮಾಡುವಾಗ ನೂರಾರು ಯೋಜನೆ/ಯೋಚನೆಗಳನ್ನು ಹೊತ್ತುಕೊಂಡೆ ಮನೆಯಿಂದ ಹೊರಡುತ್ತಿದ್ದ. ತಾನು ಮಾಡುವ ಸರ್ವೆ ಜತೆಜತೆಗೆ ಮಿಕ್ಕ ಮಾಹಿತಿಗಳನ್ನು ಕಲೆಹಾಕುತ್ತಾ, ಕೆಲವರ ಕಿರುಪರಿಚಯವನ್ನು ಮಾಡಿಕೊಳ್ಳುತ್ತಾ ಇದ್ದಕ್ಕಿದ್ದ ಹಾಗೆ ಒಂದು ಕಿರುಹೊತ್ತಿಗೆಯ ಪುಸ್ತಕವನ್ನು ಹೊರತಂದ. ಆ ಪುಸ್ತಕವನ್ನು ತನಗಾಗಿ, ತನ್ನವರಿಗಾಗಿ ಖರೀದಿಸಿದರು. ಲೋಕಾರ್ಪಣೆ ಮಾಡಿದ ದಿನವೇ ಮುದ್ರಿತ ಪ್ರತಿಗಳೆಲ್ಲಾ ಮಾರಾಟವಾಗಿ ದಾಖಲೆಯಾಯಿತು. ಹೀಗೆ

ರಾಮಣ್ಣ ಕೈಗೆ ತೆಗೆದುಕೊಳ್ಳುವ ಯಾವ ಲೋಕಕಲ್ಯಾಣದ ಕಾರ್ಯದ ಹಿಂದೆ ಒಂದು ಬೃಹತ್ ಯೋಜನೆ ಇರುತ್ತೆ. ಇಂತಹವನಿಗೆ ತಲೆ ಸರಿಯಿಲ್ಲ ಎಂಬ ಹಣೆಪಟ್ಟಿ ಕಟ್ಟುವವರಿಗೆ ತಲೆ ಸರಿಯಿದೆಯೆ? ಎಂದು ಪ್ರಶ್ನಿಸಬೇಕಾಗುತ್ತದೆ.

ನನ್ನ ಹತ್ತಿರ ದೂರು ತಂದವರಿಗೆ ನಾನು ಸಮಾಧಾನ ಮಾಡಿಕಳುಹಿಸಿದೆ. ''ಇಲ್ಲಾ, ಅವನು ಬಹಳ ಬುದ್ಧಿವಂತ ಹಾಗೂ ಕ್ರಿಯಾಶೀಲ. ಚಿಕ್ಕವಯಸ್ಸಿನಿಂದಲೂ ಹೀಗೆ ಏನಾದರೂ ಒಂದು ಸರ್ವೆ ಮಾಡುತ್ತಿರುತ್ತಾನೆ. 'ಸರ್ವೆಜನ ಸುಖಿನೋಭವಂತು' ಎಂಬ ಮಾತಿನಲ್ಲಿ ನಂಬಿಕೆ ಇಟ್ಟಿಕೊಂಡಿದ್ದಾನೆ, ಸುಖದ ಅನುಭವದ ನಿರೀಕ್ಷೆಯಲ್ಲಿದ್ದಾನೆ. ಅವನಿಗೆ ಯಾವ ಸೈಕೊಥೆರಪಿ ಅಗತ್ಯವಿಲ್ಲ, ಕೌನ್ಸಿಲಿಂಗ್ ಬೇಕಿಲ್ಲ. ಒಂದು ವೇಳೆ ಅವನನ್ನು ಹಾಗೆ ಕರೆದುಕೊಂಡು ಹೋದರೆ ಮನೋವೈದ್ಯರ ಬಗ್ಗೆಯೇ ಮತ್ತೊಂದು ಸಂಶೋಧನೆಗೆ ಇಳಿಯುತ್ತಾನೆ. ಅವನಿಗಿಷ್ಟವಾಗಿದ್ದನ್ನು ಅವನೇ ಮಾಡಲಿ ಬಿಟ್ಟುಬಿಡಿ, ನೀವು ತಲೆಕೆಡಿಸಿಕೊಳ್ಳಬೇಡಿ'' ಎಂದು ಹೇಳಿಕಳುಹಿಸಿದೆ.

ಸನ್ಮಾನ ಸ್ವೀಕರಿಸಿದ, ಭುಜಕ್ಕೆ ಶಾಲು ಹೊದಿಸಿಕೊಂಡವರ ಸಂಖ್ಯೆ ಕಲೆ ಹಾಕುತ್ತಿದ್ದ ಹಾಗೆ, ಬೆಂಗಳೂರಿನಲ್ಲಿ ಶಾಲು ಮಾರಾಟದ ಬಗ್ಗೆ ಅಂಗಡಿಗಳಲ್ಲಿ ಅಂಕಿಸಂಖ್ಯೆಗಳನ್ನು ಸಂಗ್ರಹಿಸತೊಡಗಿದ. ಸಂಖ್ಯಾಶಾಸ್ತ್ರದ ಬೆನ್ನೆಲುಬಾದ 'ಸ್ಯಾಂಪಲ್' ವಿಧಾನವನ್ನು ಅನುಸರಿಸಿ ನವೆಂಬರ್ ಹಾಗು ಅದರ ಆಸುಪಾಸಿನ ಮಾಸದ (ಅಂದರೆ ಅಕ್ಟೋಬರ್ ಹಾಗು ಡಿಸೆಂಬರ್ ತಿಂಗಳ) ಶಾಲಿನ ಮಾರಾಟದ ಬಗ್ಗೆ ಮಾಹಿತಿ ಪಡೆದ. ಒಂದು ಆಶ್ಚರ್ಯಕರವಾದ ಮಾಹಿತಿ ದೊರೆಯಿತು. ಶಾಲು ಹೊದಿಸಿಕೊಂಡವರ ಸಂಖ್ಯೆ, ಊರಲ್ಲಿ ಮಾರಾಟವಾದ ಶಾಲುಗಳ ಸಂಖ್ಯೆಗಿಂತ ಹತ್ತರಷ್ಟಿತ್ತು. 'ಬೇಡಿಕೆ ಹಾಗೂ ಸರಬರಾಜು' ಬಗ್ಗೆ ಎಂ.ಎ. ಎಕನಾಮಿಕ್ಸ್‌ನಲ್ಲಿ ಓದಿದ್ದ ರಾಮಣ್ಣನಿಗೆ ಅರ್ಥವೇ ಆಗಲಿಲ್ಲ. ಅಲ್ಲ ಸ್ವಲ್ಪ ವ್ಯತ್ಯಾಸವಿದ್ದರೆ ತನ್ನದೇ ಆದ ವ್ಯಾಖ್ಯಾನಕೊಟ್ಟು ನೆಮ್ಮದಿಯಿಂದ ಇರಬಹುದಿತ್ತು. ಆದರೆ ಹತ್ತುಪಟ್ಟು ಜಾಸ್ತಿ ಅನ್ನುವ ಅಂಶ ರಾಮಣ್ಣನ ಕುತೂಹಲವನ್ನು ಕೆರಳಿಸಿತು. ಯಾವಾಗಲೂ ಚಡಪಡಿಸುವವನಿಗೆ ಚೇಳು ಕುಟಕಿದಂತಾಯಿತು. ಹೆಚ್ಚು ಕ್ರಿಯಾಶೀಲನಾದ 'ಶಾಲಿಗೆ' ಸಂಬಂಧಿಸಿದಂತೆ ಇನ್ನೊಂದು ಸರ್ವೆಗೆ ಕೈ ಹಾಕಿದ. ಊರಿನಲ್ಲಿರುವ ಸುಪ್ರಸಿದ್ಧ ಸಾಧಕರ ಮನೆಗೆ ಹೋಗಿ ಅವರಿಗೆ ಇದುವರೆಗೂ ಆದ ಸನ್ಮಾನ ಸಂಖ್ಯೆಗಳ ಬಗ್ಗೆ ಬಂದ ಶಾಲುಗಳ ಸಂಖ್ಯೆಯನ್ನು ಪಡೆದ. ಹಾಗೆ ಜ್ಞಾಪಕಾರ್ಥವಾಗಿ ಅದನ್ನು ಯಾರ್‍ಯಾರು ಎಷ್ಟೆಷ್ಟು ಇಟ್ಟುಕೊಂಡಿದ್ದಾರೆ, ಎಷ್ಟು ಉಪಯೋಗಿಸಿ ಹರಿದು ಹಾಳುಮಾಡಿದ್ದಾರೆ ಎಂಬ ಗುರುತು ಹಾಕಿಕೊಂಡ. ಬಹಳಷ್ಟು ಪ್ರಸಿದ್ಧರು ಹೇಳಿದ್ದು ''ಅಷ್ಟೊಂದು ಶಾಲುಗಳನ್ನು ಇಟ್ಟುಕೊಳ್ಳುವುದಕ್ಕೆ ಆಗುತ್ತದೆಯೆ? ಉಪಯೋಗಿಸುವುದಕ್ಕೆ ಆಗುತ್ತದೆಯೆ?''

''ಹಾಗಾದರೆ ಅದನ್ನು ಏನು ಮಾಡಿದಿರಿ?''

''ಮನೆಗೆ ಬರುವ ಹಿರಿಯರಿಗೆ ಕೊಟ್ಟಿದ್ದೇವೆ. ಆದರೆ ಈ ಕಾಲದಲ್ಲಿ ಹಿರಿಯರು ಮನೆಗೆ ಬರಲಿಕ್ಕೆ ಎಷ್ಟು ಜನಕ್ಕೆ ಸಾಧ್ಯ? ಕೆಲವನ್ನು ಮದುವೆ ಮನೆಗೆ ತೆಗೆದುಕೊಂಡು ಧಾರೆಗೆ ವರ ವಧುವಿನ ಮಧ್ಯೆ ಗೋಡೆಯಾಗುವ ಅಂತರಪಟಕ್ಕೆ ಉಪಯೋಗಿಸಲು ಕೊಟ್ಟಿದ್ದೇವೆ.

ಮದುವೆ ಮಾಡಿಸುವ ಪುರೋಹಿತರು ತಮ್ಮ ಹಿತಾಸಕ್ತಿಗಾಗಿ ಮೆಲ್ಲಗೆ ತಮ್ಮ ಗಂಟಿನ ಪಕ್ಕ ಇಟ್ಟುಕೊಂಡರೂ, ನೋಡಿದರೂ ನೋಡದಂತೆ ನಟಿಸಿ ವಾಪಸ್ಸು ಬಂದುಬಿಟ್ಟಿದ್ದೇವೆ, ಇಷ್ಟೆಲ್ಲಾ ಮಾಡಿದರೂ ಇನ್ನೂ ಅನೇಕ ಶಾಲುಗಳು ನಮ್ಮಲ್ಲೇ ಉಳಿದುಬಿಡುತ್ತವೆ. ಸನ್ಮಾನ ಮಾಡಲೆಂದೇ ಕೆಲವು ಸಂಘಸಂಸ್ಥೆಗಳು ಹುಟ್ಟಿಕೊಂಡಿವೆ. ಇನ್ನೂ ಕೆಲವು ರಾರಾಜಿಸುತ್ತಿವೆ. ಅಂತಹ ಸಂಸ್ಥೆಗಳ ಕಾರ್ಯನಿರ್ವಾಹಕರಿಗೆ ಫೋನ್ ಮಾಡಿ ಕರೆಸಿಕೊಂಡು ಕೆಲವು ಶಾಲುಗಳನ್ನು ಕೊಡುತ್ತೇವೆ. ಹಾಗೆ ತೆಗೆದುಕೊಂಡು ಹೋಗಲು ಒಪ್ಪಿದ ಕನ್ನಡದ ಕಟ್ಟಾಳುಗಳಿಗೆ ಗಂಧದ ಹಾರವನ್ನು ಜೊತೆಯಲ್ಲಿ ಇನ್‌ಸೆಂಟಿವ್ ಆಗ ಕೊಟ್ಟಿದ್ದೇವೆ.

ರಾಮಣ್ಣನಿಗೆ ಈಗ ಅರ್ಥವಾಯಿತು. ಸನ್ಮಾನ ಮಾಡುವುದಕ್ಕೂ ಶಾಲುಗಳು ಹಾಗು ಗಂಧದ ಹಾರದ ಮಾರಾಟಕ್ಕೂ ಯಾವ ಸಂಬಂಧವೂ ಇಲ್ಲ. ಏಕೆಂದರೆ ಶಾಲುಗಳಿಗೆ ಕಾಲುಗಳಿವೆ ಅಲ್ಲ – ರೆಕ್ಕೆಗಳಿವೆ. ಅವು ಹಾರಾಡುತ್ತವೆ. ಶಾಲುಗಳೇ ಹಾರಾಡುತ್ತವೆ ಎಂದ್ಮೇಲೆ ಹಾರಗಳು ಹಾರುವುದರಲ್ಲಿ ಏನಾಶ್ಚರ್ಯ?

ಶಾಲಾಯ ತಸ್ಮೈನಮಃ

## ಸೊಗದ ಮರೆವು

– ಎನ್. ಪ್ರಕಾಶ್

ಇದು ಎಂಥ ಸೊಗದ ಮರೆವೊ
ಇದು ಎಂಥಾ ಸೊಗದ ಮರೆವು

ಮೋಡವಿಲ್ಲ ಮನದ ಬಾನಲ್ಲಿ
ರವಿಚಂದ್ರ ತಾರೆ ಇಲ್ಲ ಅಲ್ಲಿ
ಸುಮ್ಮನೆ ಹರಡಿದಾ ಹಾಂಗ
ತಿಂಗಾಳ ಬೆಳಕ ಚಂದ

ಕಾಣದಾ ಹೂವಿನಾ ಗಂಧಾ
ತೇಲಿ ಬಂತು ಬನದ ತುಂಬಾ
ಮಡಿಲಾಗ ಮಲಗಿದಾ ಕಂದಾ
ನಗಿ ಅವನ ಬಾಯಿ ತುಂಬಾ

ಕೇಳಿ ಬಂತ ಒಂದು ಹಾಡಾ
ಪದ ಒಂದು ಇಲ್ಲ ನೋಡಾ
ರಾಗದಂಚಿನಾಗ ವಿರಾಗ
ನಡುಗೆರೀ ಅಳಿಸಿದ ಹಾಂಗ

ನನ್ನ ಮಾತ ನೀನು ನಂಬಾ
ಇಂಥ ಮರೆವು ಎಂಥ ಹುಂಬಾ
ಬಿಡುಬಿಡು ಅರಿವಿನಾ ಸದನ
ಮೂಢ ಹೋಗೋ ಮರೆವಿನಾ ಶರಣ

# ಬೆಂಬಲ ಬೆಲೆ

• ವೈ.ಎನ್. ಗುಂಡೂರಾವ್

**ಪ**ರಮೇಶಿ ಬಂದಾಗಲೆಲ್ಲಾ ಏನಾದರೊಂದು ಸಮಸ್ಯೆಯನ್ನು ಹೊತ್ತು ತರುತ್ತಿದ್ದದ್ದರಿಂದ ಈ ಸಾರೆ ಏನು ಅನಾಹುತ ಮಾಡಿಕೊಂಡಿದ್ದಾನೋ ಎನಿಸಿತು ಅವನ ಮುಖ ನೋಡಿ.

ಬಂದವನನ್ನು ಸತ್ಕರಿಸಿ ನೀರು ಕೊಟ್ಟು ''ಬೆಲ್ಲ ಬೇಕಾ?'' ಎಂದೆ.

ದುರುಗುಟ್ಟಿ ನೋಡಿದ.

ನೀರು ಕುಡಿದು ಲೋಟವನ್ನು ಟೀಪಾಯ್ ಮೇಲಿಟ್ಟು ನಿಟ್ಟುಸಿರುಬಿಟ್ಟ.

''ಏನಾಯ್ತಯ್ಯಾ, ಯಾಕೆ ಹೀಗೆ ದುಸುಮುಸ ಅಂತಾ ಉಸಿರಾಡ್ತಾಯಿದ್ದೀಯಾ?'' ಎಂದೆ.

''ಬೆಂಬಲ ಬೆಲೆ ಕೇಳೋಕೆ ಜಾಥಾ ತೆಗೀತಿದ್ದೀನಿ'' ಅಂದ.

ಬೆಂಬಲ ಬೆಲೆ... ಅರೆ ಇವನ್ಯಾವಾಗ ರೈತನಾದ. ಬೆಳೆದದ್ದಾದರೂ ಏನು? ಎನ್ನಿಸಿತು. ಕೆಲವು ದಿವಸಗಳ ಹಿಂದೆ ಅದ್ಯಾಕೊ ಆಂಧ್ರದ ಕಡೆಯವರು ಬಿಳಿಗಿರಿರಂಗನ ಬೆಟ್ಟದ ತಪ್ಪಲಿನ ಹಳ್ಳಿ ಹಳ್ಳಿಯನ್ನೇ ಕೊಡು ಕೊಂಡ್ರಂತೆ ಅಂತಾ ಹೇಳಿದಾಗ, ಅವರು ಕೊಂಡ್ಕೊಂಡ್ರೆ ನಿಂಗೇನು? ಬೇಕಾದ್ರೆ ನೀನೂ ಕೊಂಡ್ಕೊ ಅಂತಾ ಹೇಳಿದ್ದೆ. ಅದಕ್ಕೂ ನಾಲ್ಕಾರು ದಿವಸ ಓಡಾಡಿದ್ದ. ಅದೂ ಕೈಲಾಗದೆ ಊರಿಗೆ ಬಂದಿದ್ದ.

''ಅದ್ಸರಿ ಬೆಂಬಲ ಬೆಲೆ ಅಂದ್ಯಲ್ಲ, ನೀನೇನು ತೊಗರಿ ಬೇಳೆ ತೆಗೆದಿದ್ಯಾ ಇಲ್ಲಾ ಶುಂಠಿಬೆಲೆ ಕುಸಿದಿತ್ತಾ?'' ಎಂದೆ.

ಅಯ್ ನೀನು ಸರಿ, ಬೆಂಬಲ ಬೆಲೆ ಅಂದ್ರೆ ಬರೇ ಉತ್ತುಬಿತ್ತು ಭೂಮಿಯ ಮೇಲೆ ಬೆಳೆಯೋ ಬೆಲೆ ಮಾತ್ರ ಅಂತಾ ತಿಳ್ಕೊಂಡಿದ್ದೀಯಲ್ಲ, ನಿನ್ನ ಬುದ್ಧಿಗೆ ಏನ್ ಹೇಳ್ಲಿ ಎಂದ.

''ಏನೂ ಹೇಳಬೇಡ. ಬೆಂಬಲ ಬೆಲೆ ಯಾತಕ್ಕೆ ಅಂತಾ ಹೇಳು?'' ಎಂದೆ.

''ನೋಡು ಈಗ್ಗೆ ಹತ್ತು ವರ್ಷದ ಹಿಂದೆ ಎಂಥ ಹುಲುಸಾದ ಬೆಲೆ ಬರ್ತಿತ್ತು?''

''ಯಾವುದು?''

ಅದೇ ನೋಡು ಮಧ್ಯೆ ಬಾಯಿ ಹಾಕೋದನ್ನ ಬಿಡು ಎಂದು ತಾಗೀತು ಮಾಡಿ ಪುನಃ ಪ್ರಾರಂಭಿಸಿದ. ನೋಡು ಈಗ್ಗೆ ಹತ್ತು ವರ್ಷದ ಹಿಂದೆ ಎಂಥ ಹುಲುಸಾದ ಬೆಳೆ ಬರ್ತಿತ್ತು...

ಹಾಸ್ಯದ ಬೆಳೆ... ಎಲ್ಲಿ ನೋಡಿದ್ರೂ ಒಂದೇ ರಂಗು... ಹಾಸ್ಯೋತ್ಸವ ಅದೂ ಇದೂ ನಡೀತಿತ್ತು.

ಈಗ ನೋಡು ಹಾಸ್ಯ ಬರೆಯೋವ್ರು ಕಡಿಮೆಯಾಗೋದ್ರು, ಹಾಸ್ಯೋತ್ಸವಗಳ ಭರಾಟೇನೂ ಕಡಿಮೆಯಾಗೋಯ್ತು.....

''ಅದಕ್ಕೆ, ನೀವೇನು ಮಾಡ್ಬೇಕು ಅಂತಿದ್ದೀಯಾ?''

ಅದೇ ನೋಡು ಮು.ಮಂ.ಗಳ ಹತ್ತಿರ ಜಾಥಾ ತಗೊಂಡ್ಹೋಗಿ, ಇತರ ಸಾಹಿತ್ಯದಂತೆ ಹಾಸ್ಯ ಸಾಹಿತ್ಯಕ್ಕೂ ಬೆಂಬಲ ಬೆಲೆ ಘೋಷಿಸಿ ಅಂತಾ ಚಳವಳಿ ಮಾಡ್ಬೇಕು ಅಂತಿದ್ದೀನಿ.

ಚಳವಳಿನಾ? ಅವರಿಗೇ ಬೆಂಬಲ ಬೆಲೆ ಕುಸಿದಿದೆ. ಇನ್ನು ಸಾಹಿತ್ಯ ಅದರಲ್ಲೂ ಹಾಸ್ಯ ಸಾಹಿತ್ಯಕ್ಕೆ ಬೆಂಬಲ ಬೆಲೆ ಅಂತಾ ಹೇಗೆ ಘೋಷಿಸ್ತಾರೆ?

ಅದ್ಸರಿ ಬೆಂಬಲ ಬೆಲೆ ಅಂದ್ರೆ ಅದ್ಹೇಗೆ ಕೇಳ್ತೀರಾ?

ನೋಡು ಈಗ ಪದ್ಯ ಬರೀಲಿ, ಗದ್ಯ ಬರೀಲಿ, ಎಲ್ರೂ ಕೊಂಡ್ಕೊಂಡು ಓದ್ತಾರೆ. ಹಾಸ್ಯ ಎಲ್ರಿಗೂ ಬೇಕು. ಆದ್ರೆ ಯಾರೂ ಕೊಂಡ್ಕೊಳ್ಳಲ್ಲಾ. ಕೊಳ್ಳದಿದ್ರೆ ಬೇಡ, ನಿಕೃಷ್ಟವಾಗಿ ಯಾಕೆ ಕಾಣ್ಬೇಕು? ಅದಕ್ಕೋಸ್ಕರ ಮು.ಮಂ.ಗಳ ಭೇಟಿಮಾಡಿ ಹಾಸ್ಯ ಸಾಹಿತ್ಯಕ್ಕೆ ಬೆಂಬಲ ಬೆಲೆ ಸೂಚಿಸಿ ಅಂತಾ ಒತ್ತಾಯಿಸಲು ಹೋಗ್ತಿದ್ದೀವಿ

ಅದ್ಸರಿ ಏನೇನು ನಿಮ್ಮ ಬೇಡಿಕೆ? ಹೇಗೆ ಬೆಂಬಲ ಬೆಲೆ ಸೂಚಿಸ್ತಾರೆ ಹೇಳು!

- ನೋಡು ಈಗಿರೋ ಹಾಸ್ಯ ಸಾಹಿತಿಗಳೆಲ್ಲರೂ ತಿಂಗಳಿಗೆ ಐದೈದು ಹಾಸ್ಯ ಲೇಖನಗಳನ್ನು ಬರೀಲೇ ಬೇಕು.
- ಬರ್ದದನ್ನು ಪ್ರಿಂಟ್‌ಮಾಡುವಂತೆ ಪತ್ರಿಕೆಗಳಿಗೆ ಆದೇಶ ನೀಡೋದು.
- ಪ್ರಿಂಟ್ ಆಗಿದ್ದಕ್ಕೆ ಸರಕಾರದಿಂದ್ಲೆ ಸಂಭಾವನೆ ಕೊಡೋದು.
- ಹೀಗೆ ಇಪ್ಪತ್ತೈದು ಲೇಖನ ಪ್ರಿಂಟಾದ ಕೂಡ್ಲೆ ಪುಸ್ತಕ ರೂಪದಲ್ಲಿ ಸರ್ಕಾರವೇ ಮುದ್ರಿಸಿ ಲೇಖಕರಿಗೆ ರಾಯಲ್ಟಿ ಅಂತಾ ಮುಖಬೆಲೆಯ ಶೇ.20ರಷ್ಟು ಹಣ ಕೊಡೋದು.
- ಹೀಗೆ ಪ್ರಿಂಟ್ ಆದ ಹತ್ತು ಟೈಟಲ್ ದಾಟಿದ ಕೂಡಲೇ ಅಕಾಡಮಿ ಪ್ರಶಸ್ತಿ ಕೊಡೋದು. ಹೀಗೆ ಕೂಡಿದ್ರೆ ಹಾಸ್ಯ ಸಾಹಿತ್ಯಕ್ಕೆ ಬೆಂಬಲ ಬೆಲೆ ಬಂದಂತೆ ಅಲ್ವಾ?

ಹೌದಪ್ಪ, ನೀನು ಹೇಳಿದ್ದೆಲ್ಲ ಸರಿ. ಈಗ ನೀನು ಹೇಳಿದ ಪಾಯಿಂಟ್‌ಗಳಿಗೆ ಬರ್ತೀನಿ. ಸರಕಾರದ ಆದೇಶನ ದಿಕ್ಕರಿಸಿದರೆ...?

ಖಂಡಿತ ಹಾಗಾಗೊಲ್ಲ. ಅವರ ಲೈಸೆನ್ಸ್ ಕಿತ್ತು ಹಾಕ್ತೀವಿ ಅಂತಾ ಕ್ಲಾಸ್ ಸೇರಿಸಿದ್ರಾಯ್ತು. ಇನ್ನೊಂದು ವಿಷ್ಯ, ಸಾಹಿತಿಗಳು ಬರ್ದದ್ದೆಲ್ಲ ಗಟ್ಟಿ ಸಾಹಿತ್ಯವೇ ಅಂತಾ ಹೇಗೆ ನಿರ್ಧಾರ ಮಾಡ್ತಾರೆ?

ಒಳ್ಳೆ ಪ್ರಶ್ನೆ, ಇದಕ್ಕೊಂದು ಕಮಿಟಿ ಇರುತ್ತೆ. ಅವರು ಆಯ್ಕೆಮಾಡಿ ಪತ್ರಿಕೆಗಳಿಗೆ ಕಳಿಸ್ತಾರೆ.

ಸರಿ ಬಿಡು, ಈ ಕಮಿಟಿಗಿಮಿಟಿ ಎಲ್ಲಾ ನಡೆಯದ ಕೆಲ್ಸ. ಇದರಲ್ಲೂ ವಕೀಲಿಬಾಜಿ ಮಾಡೋ ಹಾಸ್ಯ ಸಾಹಿತಿಗಳು ನಾಯಕೊಡೆ ರೀತಿ ಹುಟ್ಕೋತಾರೆ.

ಮೊದಲೇ ನಮ್ಮ ಸರಕಾರದೋರು ಯಾವುದರಲ್ಲೂ ಬಿಡದೆ ಹಣ ಮಾಡ್ತಾ ಇರೋವಾಗ ಇದರಲ್ಲೂ ಹಣ ಮಾಡೋಕ್ಕೆ ಒಂದು ದಾರಿ ತೋರಿದ್ದಾಗೆ ಆಗುತ್ತೆ ಅಷ್ಟೇ.

ಅದರಲ್ಲೂ ಕೆಲ ಸಾಹಿತಿಗಳು ಬರೆಯೋಕ್ಕಿಂತ ಕಮಿಟಿ ಕಚೇರಿಯಲ್ಲೆ ಕುಳಿತು ಹಾಸ್ಯ ಹೊಸೆಯೋಕೆ ಪ್ರಾರಂಭಿಸಿದರೂ ಹೆಚ್ಚೇನಿಲ್ಲ.

ಏನಯ್ಯ, ಯಾವುದಾದರೊಂದು ಕೆಲ್ಸ ಮಾಡೋಣ ಅಂದ್ರೆ ಬರೇ ಅಡ್ಡಗಾಲು ಹಾಕೋದೇ ನಿನ್ನ ಕೆಲ್ಸ ಆಗೋಯ್ತುಲ್ಲ. ಈಗೇನು ಹೇಳು ನೀನು ಬರ್ತೀಯೋ ಇಲ್ವೋ?

ಹ್ಞಾಂ! ಇನ್ನೊಂದು ವಿಷ್ಯ, ಹೀಗೆ ಹೋರಾಡಲು ಸಂಸ್ಥೆ ಅಂತಾ ಒಂದಿರಬೇಡ್ವಾ, ಅದಕ್ಕೆ ಮೊದಲ ಹಂತದಲ್ಲಿ ಸದಸ್ಯರನ್ನು ಕೂಡಿಹಾಕಬೇಕಲ್ವಾ. ಸದಸ್ಯತ್ವದ ಹಣ ಕೇವಲ ಐನೂರು ರೂಗಳು ಮಾತ್ರ ಎಂದ ಪರಮೇಶಿ.

ಹ್ಞಾಂ! ಐನೂರಾ?

ಸರಿ ಹಾಗಾದ್ರೆ ಸದಸ್ಯರನ್ನು ಕೂಡಿಹಾಕಿಕೊಂಡು ಬಾ, ನಂತರ ಕೊಡ್ತೇನೆ ಎಂದು ಸಾಗಹಾಕಿದೆ.

ಮೂರು ತಿಂಗಳ ಕಳೆದು ಹೋಗಿದೆ. ಪರಮೇಸಿ ಬಂದಿಲ್ಲ, ಅವನಿಗೆ 'ಬೆಂಬಲ ಬೆಲೆ' ಇನ್ನೂ ಬಂದಿಲ್ಲ, ಕಾಯ್ತಿಬಿಡಿ.

ಯಾರೋ ಹೇಳಿದ್ರು, ಕಡ್ಲೆಕಾಯಿ ಪರಿಷೇಲಿ ಕಡ್ಲೆಕಾಯಿ ಮಾರೋವ್ನ ಇಂಟರ್‌ವ್ಯೂ ಮಾಡ್ತಿದ್ನಂತೆ.

ಬಹುಶಃ ಕಡ್ಲೆಕಾಯಿಗೆ ಬೆಂಬಲಬೆಲೆ ಸಿಕ್ಕಿದೆಯಾ ಅಂತಾ ವಿಚಾರಿಸ್ತಾ ಇರಬೇಕು.

---

**ಪ್ರಾರ್ಥನೆ**

**ಜನ್ಮ ಜನ್ಮಾಂತರದ**
**ಈ ದೋಣಿಗೆ**
**ಎಷ್ಟೊಂದು ಹುಟ್ಟು!**
**ತಿಳಿಸಿಕೊಡು ತಂದೆ**
**ದಡಮುಟ್ಟುವ ಗುಟ್ಟು**

*– ಎನ್. ಪ್ರಕಾಶ್*

# ಹುಲು ಮಾನವನಿಗೆ ದೇವರಿತ್ತ ವರ!

• *ಬಿಂಡಿಗನವಿಲೆ ಎಸ್. ಶ್ರೀನಿವಾಸನ್*

**ಸ್ವಾ**ಮಿ ಶ್ರೀ ಶ್ರೀ XYZ ಆನಂದಜೀಯವರ ಮಠ (ಹಾಂ! ಅಂದ್ಹಾಗೆ ಈಗಿನ ದಿನಗಳಲ್ಲಿ ದಿನಕೊಬ್ಬರಂತೆ ಹೊಸ ಹೊಸ "ಸ್ವಾಮಿ"ಗಳು ಬೀದಿ ಬೀದಿಗಳಲ್ಲಿ ಎಲ್ಲೆಡೆ - ಅದರಲ್ಲೂ ನಮ್ಮ ಕರುನಾಡಿನಲ್ಲಿ ಹುಟ್ಟುತ್ತಿದ್ದಾರಾದ್ದರಿಂದ ಎಲ್ಲಾ ಗೊತ್ತಿರೋ Prefixes to ಆನಂದ - ನಿತ್ಯ, ಮಾಸಾ, ವಾರಾ etc... ಎಲ್ಲಾ exhaust ಆಗಿ ಅಕ್ಷರಮಾಲೆಯ ಅಕ್ಷರಗಳಿಗೆ ಮೊರೆ ಹೋಗುತ್ತಿದ್ದಾರೆ. ನೂತನ ಸ್ವಾಮಿಗಳೆಲ್ಲಾ ಆಕಾಶದಲ್ಲಿ ತಾರೆಗಳ ಶೋಧನೆಯಲ್ಲಿ ಅವುಗಳನ್ನು ಗುರುತಿಸುವುದಕ್ಕೆ ಎಲ್ಲಾ ಪೌರಾಣಿಕ, ವಿಜ್ಞಾನಿಗಳು, ಹೆಸರುಗಳು exhaust ಆಗಿ ಅವುಗಳಿಗೆ ಈಗ star etc... ಅಂತ ಹೆಸರಿಡುತ್ತಿಲ್ಲವೇ? ಹಾಗೆಯೇ ಈ mushrooming ... ಸ್ವಾಮಿಗಳ ಬಾಬ್ತೂನು!)

ಮಠದ Hallನಲ್ಲಿ ಸ್ವಾಮಿಗಳು ವಿರಾಜಮಾನರಾಗಿದ್ದಾರೆ ಮತ್ತು ಅವರ ಬಾಯಿಂದ ಬರುವ ನುಡಿಮುತ್ತುಗಳನ್ನು ಕೇಳಲು ಭಕ್ತಾದಿಗಳು ಕಾತುರರಾಗಿ ಕುಳಿತಿದ್ದಾರೆ.

ಶ್ರೀ ಶ್ರೀಗಳು ಕಣ್ಣು ಮುಚ್ಚಿ ಗಂಟಲು ಸರಿಮಾಡಿಕೊಳ್ಳಲು ಕುದುರೆಯಂತೆ ಒಮ್ಮೆ ಕೆನೆದು ತಮ್ಮ ಎರಡೂ ಬಗಲಲ್ಲಿ ಕುಳಿತಿರುವ ಯಾವ Modelನೂ, ಯಾವ Cinema ತಾರೆಯರನ್ನೂ ನಾಚಿಸುವ ಸುಂದರ ಮೈಕಟ್ಟುಳ್ಳ ಲಲನೆಯರು ಅವರಿಗೆ ಪಂಖದಿಂದ ಗಾಳಿ ಬೀಸುತ್ತಿರುವುದನ್ನು ನೋಡಿ ಸಂತೃಪ್ತರಾಗಿ ಭಕ್ತಾದಿಗಳನ್ನು ಉದ್ದೇಶಿಸಿ ತಮ್ಮ ಆ ದಿನದ ಪ್ರವಚನ ಶುರು ಮಾಡಿದರು.

ಸ್ವಾಮಿ ಉವಾಚ "ನೋಡಿ ನನ್ನ ಭಕ್ತರೇ (ಅಂದ್ಹಾಗೆ ಸ್ವಾಮಿಗಳ ಭಕ್ತರಲ್ಲಿ ರಾಜಕಾರಣಿಗಳು ಪುಡಾರಿಗಳೇ ಜಾಸ್ತಿ ಇದ್ದರು. ಬೇಗ ಸ್ವರ್ಗದಲ್ಲಿ seat ಮಾಡಿಸಿಕೊಳ್ಳುವ ಸುಲಭೋಪಾಯವನ್ನು ಸ್ವಾಮಿಗಳಿಂದ ತಿಳಿಯಲು ಆತುರ ಅವರುಗಳಿಗೆ!) ಇಲ್ಲಿಗೆ ಬರುವ ಮುನ್ನ ನಾನು ದೇವರ ಧ್ಯಾನದಲ್ಲಿದ್ದಾಗ ಒಂದು ವಿಶೇಷ ಅನುಭವ ಆಗಿ ನಿಮಗೆಲ್ಲಾ ಉಪಯೋಗವಾಗುವ ಹಾಗೂ ಇಷ್ಟವಾಗುವ ಮಾಹಿತಿ ಸಿಕ್ಕಿತು. ಅದನ್ನ ನಿಮಗೆ ಹೇಳುತ್ತೇನೆ, ಕೇಳುವಂತವರಾಗಿ" ಎಂದು ಪೀಠಿಕೆ ಹಾಕಿ ಮುಂದುವರಿಸಿದರು. ನಾನು ಸ್ವರ್ಗದಲ್ಲಿ ಶ್ರೀ ಮಹಾವಿಷ್ಣುವು ಕರೆದಿದ್ದ ಒಂದು ತುರ್ತು ಸಭೆಗೆ ಹೋಗಿದ್ದೆ. ತಾನು ಸೃಷ್ಟಿಸಿರುವ ಈ ಭೂಲೋಕದಲ್ಲಿ ಆಗುಹೋಗುಗಳು ಹೇಗಿವೆ ಎಂದು ತಿಳಿಯಲು ಕರೆದ ಸಭೆ ಅದು. ಎಲ್ಲಾ

ದೇವತೆಗಳೂ ಅವರವರ departmentನ ಸಮಸ್ಯೆಗಳನ್ನು ಶ್ರೀ ಹರಿಯ ಮುಂದಿರಿಸಿದರು. ಮಹಾವಿಷ್ಣು ಸೂಕ್ತ ಸಲಹೆಗಳನ್ನು ಕೊಡುತ್ತಿದ್ದ.

ಕಡೆಯಲ್ಲಿ ನರಕಾಧಿಪತಿ ಯಮರಾಯನು ಎದ್ದುನಿಂತು ''ಸ್ವಾಮಿ! ನನ್ನ ಗೋಳನ್ನು ಏನು ಹೇಳಲಿ, ಭೂಲೋಕದಲ್ಲಿ ಜನಸಂಖ್ಯೆ ಅತಿಯಾಗಿದೆ ಮತ್ತು ಪಾಪಿಗಳ ಸಂಖ್ಯೆ ಬಹಳ ಹೆಚ್ಚಾಗುತ್ತಿದೆ. ನಮ್ಮ office superintendent ಚಿತ್ರಗುಪ್ತರು ನನ್ನಲ್ಲಿ ಹೀಗೆಂದು ಅಹವಾಲಿಸಿಕೊಂಡಿದ್ದಾರೆ. 'ಯಮಧರ್ಮನೇ! ನಮ್ಮ ನರಕದ office ಲೆಕ್ಕಾ ಎಲ್ಲಾ ಏರುಪೇರಾಗುತ್ತಿದೆ, ಮನುವು ಕೊಟ್ಟ ಧರ್ಮಶಾಸ್ತ್ರವನ್ನು ಅದರ ಬಗ್ಗೆ ಯಾವ ಮಾನವನೂ 'ಕ್ಯಾರೆ' ಅಂತಿಲ್ಲ. ಹಾಗಾಗಿ ನಮ್ಮ ಬಳಿ ಇರುವ ಪಾಪದ ledgerಗಳೆಲ್ಲಾ ತುಂಬಿಹೋಗಿದೆ. Entry in ಪುಣ್ಯದ ledger ಹಾಗೇ ಶತಮಾನದ ಹಿಂದೆ ಇದ್ದಷ್ಟೆ ಇದೆ. ಇನ್ನುಮೇಲೆ ಭೂ ಜನರ ಪಾಪಗಳನ್ನು ಇಲ್ಲಿ ದಾಖಲಿಸುವ ledgers ಇಲ್ಲ. ಹೊಸ ledgerಗೆ order ಮಾಡಿದರೆ ಕಾಗದ ಅಭಾವ ಇದೆ, ಇನ್ನೂ ಒಂದೆರಡು ತಿಂಗಳಾಗಬಹುದು ಅಂತ Information ಕಳುಹಿಸಿದ್ದಾರೆ ಆದ್ದರಿಂದ ಈ ಒಂದೆರಡು ತಿಂಗಳ ಮಟ್ಟಿಗೆ ಪಾಪ, ಪುಣ್ಯಗಳ ಲೆಕ್ಕ ಹೇಗೆ ಬರೆಯಲಿ?' – ಅಂತ ಚಿತ್ರಗುಪ್ತರು memo ಕೊಟ್ಟಿದ್ದಾರೆ. ಆದ್ದರಿಂದ ನರಕದ office ಹೇಗೆ ನಡೆಸಬೇಕೆಂದು ತಾವು ತಿಳಿಸಬೇಕು ಶ್ರೀಹರಿ ಎಂದು ಕೈ ಮುಗಿದರು.

ಮಹಾವಿಷ್ಣು ''ಹೂಂ! ಸಮಸ್ಯೆ ಗಂಭೀರವೇ ಇದೆ'' ಎಂದು ಒಂದು ಕ್ಷಣ ಕಣ್ಣುಮುಚ್ಚಿ ಆಲೋಚಿಸಿದ. ನಂತರ ಆ ಶ್ರೀ ಹರಿ ''ಯಮಧರ್ಮರಾಯರೇ ಹೊಸ ledgerಗಳು ಬರುವವರೆಗೂ ನೀವು ಭೂಜನರ ಪಾಪಕೃತ್ಯಗಳನ್ನೆಲ್ಲಾ ಪುಣ್ಯದ ledgerನಲ್ಲೇ entry ಮಾಡಲು ಚಿತ್ರಗುಪ್ತನಿಗೆ ಹೇಳಿ. ಆಗ ಸಮಸ್ಯೆ ಸದ್ಯಕ್ಕೆ solve ಆಗುತ್ತೆ. ನಮ್ಮ printing departmentನ ಕೆಲಸದ ದಕ್ಷತೆ improve ಮಾಡಲು ಒಂದು Committteeನ ರಚಿಸಲು ಆದೇಶ ನೀಡುತ್ತಿದ್ದೇನೆ'' ಎಂದು ಹೇಳಿ. ಇನ್ನು ಸಭೆ ಮುಗಿಯಿತೆಂಬಂತೆ ಎದ್ದು ವೈಕುಂಠ ಸೇರಿಕೊಂಡ ಶ್ರೀ ಹರಿ. ಯಮನು 'ಧನ್ಯನಾದೆ' ಎಂದು ಕೋಣ ಏರಿದ.

ಆದ್ದರಿಂದ ನನ್ನ ರಾಜಕಾರಿಣಿ ಮತ್ತು ಪುಡಾರಿ ಭಕ್ತರೆ ನೀವುಗಳು ಈಗ ಪುಣ್ಯದ ಹೆಸರಲ್ಲಿ ಮಾಡುತ್ತಿರುವ ಯಾವ ಕೆಲಸವೂ ಪಾಪದ Registerಗೆ ಹೋಗುವ ಭಯಬೇಡ. ನಿರಾತಂಕವಾಗಿ ನಿಮ್ಮ ಈಗಿನ ಕಾರ್ಯ ವೈಖರಿನ ಮುಂದುವರೆಸಿ. ಅದೆಲ್ಲವೂ ಪುಣ್ಯದ ledgerಗೇ ಹೋಗುವುದರಿಂದ ನೀವು 'ಪಾಪ' ಅಂತ ಇಲ್ಲಿನವರು ಭಾವಿಸುವಂತೆ ಕೆಲಸವನ್ನು ಇನ್ನೂ ಹೆಚ್ಚಾಗಿಯೇ ಮಾಡಿ. ನಿಮಗೆ ಪುಣ್ಯದ ಲಾಭವೇ ಪರಲೋಕದಲ್ಲೂ ಸಿಗುತ್ತೆ.

ದೇವಲೋಕದ ಒಂದು ತಿಂಗಳೆಂದರೆ ಗೊತ್ತುತಾನೆ? ಭೂಮಿಯಲ್ಲಿ ಒಂದು ಯುಗವೇ ಆಗುತ್ತೆ. ಆದ್ದರಿಂದ ನಿಮಗೆ ಯಾವ ಚಿಂತೆಯೂ ಬೇಡ. ನಿಮ್ಮ ಪುತ್ರ ಪೌತ್ರಾದಿಗಳೂ ಸಹ ನಿರಾತಂಕವಾಗಿ ನೀವುಗಳು ಈಗ ಮಾಡುತ್ತಿರುವ ಪುಣ್ಯ ಕೆಲಸಗಳನ್ನೇ ಮಾಡಲು ಸಮಯವಿದೆ.

ಅಂತ ಶ್ರೀ ಶ್ರೀ XYZ ಜೀಗಳು ಅಂದಿನ ಪ್ರವಚನ ಮುಕ್ತಾಯವಾಯಿತೆಂಬಂತೆ, ತಮ್ಮ ಬಗಲಲ್ಲಿ ಪಂಖ ಬೀಸುತ್ತಿದ್ದ ಲಲನಾಮಣಿಗಳ ಸಹಾಯದಿಂದ ಮೇಲೆದ್ದು ಅವರ ಸೊಂಟ ಬಳಸಿ – support ಗೋಸ್ಕರ (?) – ತಮ್ಮ ಕೋಣೆಗೆ ಬಿಜಯಂಗೈದರು.

ನಮ್ಮ ರಾಜಕಾರಣಿ ಮತ್ತು ಅವರ ಚೇಲಾ ಪುಡಾರಿಗಳು ತಮ್ಮ ಮನಸ್ಸಿನ ಎಲ್ಲೋ ಒಂದು ಮೂಲೆಯಲ್ಲಿ ಇಣುಕುತ್ತಿದ್ದ ಅಲ್ಪಸ್ವಲ್ಪ ಪಾಪ ಪ್ರಜ್ಞೆಯನ್ನು ಅಲ್ಲೆ ಬಿಟ್ಟು ಸಂತೋಷ ಚಿತ್ತರಾಗಿ ತಮ್ಮ 'ಜನಹಿತ' ಕೆಲಸಗಳನ್ನು ಇನ್ನೂ ಜೋರಾಗಿ ಮಾಡಬಹುದೆಂದುಕೊಂಡು ತಮ್ಮ ತಮ್ಮ ಕಾರಿನ ಕಡೆ ಹೆಜ್ಜೆ ಹಾಕಿದರು.

---

## ನಾನು ಯಾರು?

ಇದು ಪೆನ್ನು, ಆದರೆ ಪೆನ್ನಲ್ಲ. ಇದು ಬರೆಯುತ್ತೆ, ಆದರೂ ಪೆನ್ನಲ್ಲ. ರೀಫಿಲ್ ಇದೆ, ಉಹುಂ ಪೆನ್ನಲ್ಲ. ನೋಡಲು ಆಕಾರ ಅದೇ, ಜೋಬಲ್ಲಿ ಸಿಕ್ಕಿಸಿಕೊಳ್ಳಬಹುದು ಉಹುಂ, ಉಹುಂ ಖಂಡಿತಾ ಇದು ಪೆನ್ನಲ್ಲ. ಹಾಗಾದರೆ ನಾನು ಯಾರು?

ಇದು ಟೋಪಿ, ಆದರೆ ಟೋಪಿಯಲ್ಲ. ಜೀನ್ಸ್ ಬಟ್ಟೆಯಿಂದ ಮಾಡಿದೆ, ಆದರೂ ಟೋಪಿಯಲ್ಲ. ತಲೆಯ ಮೇಲೆ ಏರಿಸಿಕೊಳ್ಳಬಹುದು, ಉಹುಂ ಟೋಪಿಯಲ್ಲ. ಬಿಸಿಲಿನಿಂದ ರಕ್ಷಿಸಿಕೊಳ್ಳಬಹುದು, ಆದರೂ ಟೋಪಿಯಲ್ಲ. ಹಾಗಾದರೆ ನಾನು ಯಾರು?

ಇದು ಶರ್ಟಿನ ಗುಂಡಿ, ಆದರೆ ಗುಂಡಿಯಲ್ಲ. ಹೋಲಿಗೆ ಹಾಕಬಹುದು, ಆದರೂ ಗುಂಡಿಯಲ್ಲ. ಹಾಗಾದರೆ ನಾನು ಯಾರು?

ಇದು ಬೆಲ್ಟ್, ಆದರೆ ಬೆಲ್ಟ್ ಅಲ್ಲ. ಖಂಡಿತಾ ಪ್ಯಾಂಟಿಗೇರಿಸಬಹುದು ಆದರೂ ಬೆಲ್ಟ್ ಅಲ್ಲ. ಹಾಗಾದರೆ ನಾನು ಯಾರು?

ಇದು ಟೈ, ಆದರೆ ಟೈ ಅಲ್ಲ. ಠಾಕುಠೀಕಾಗಿ ಕುತ್ತಿಗೆಗೆ ಬಿಗಿದುಕೊಳ್ಳಬಹುದು, ಆದರೂ ಟೈ ಅಲ್ಲ. ಹಾಗಾದರೆ ನಾನು ಯಾರು?

ಇದು ವಾಚ್, ಉಹುಂ ವಾಚಲ್ಲ. ಸಮಯ ತೋರಿಸುತ್ತದೆ, ಆದರೂ ವಾಚಲ್ಲ. ಕೈಗೆ ಕಟ್ಟಿಕೊಳ್ಳಬಹುದು, ಆದರೂ ವಾಚಲ್ಲ. ಹಾಗಾದರೆ ನಾನು ಯಾರು?

*(ಸೌಜನ್ಯ : ಅವಧಿ)*

[illegible]

# ಬೇರೆ ಯಾವುದೋ ಒಂದು ದೇಶದಲ್ಲಿ....

• ಸೂರಿ ಹಾರ್ದಳ್ಳಿ

**ಮುಂ**ದೆ ಬರುವ ಚಳಿಗಾಲದಲ್ಲಿ ಬೇಕಾಗುವ ರಕ್ಷಣೆ, ಆಹಾರ ಎಂದೆಲ್ಲಾ ಕಷ್ಟಪಟ್ಟು ಸೂಕ್ತ ಭದ್ರತೆ ಮಾಡಿಕೊಂಡ ಶ್ರಮ ಜೀವಿ ಇರುವೆಯನ್ನು ಕಂಡು ಮಿಡತೆ ಕುಲ ನಕ್ಕಿತು. 'ಇದೊಂದು ಮೂರ್ಖ ಪ್ರಾಣಿ. ಹಾಡಿ, ಕುಣಿದು, ತಿಂದು ಖುಷಿ ಪಡುವ ಬದಲು ಎಂದೋ ಏನೋ ಆಗುತ್ತದೆ ಎಂದು ಬೆವರಿಳಿಸುತ್ತದೆ,' ಎಂದು ಲೇವಡಿ ಮಾಡುತ್ತಾ ನರ್ತಿಸತೊಡಗಿದವು.

**ಮುಂದಿನ ಚಳಿಗಾಲದಲ್ಲಿ ಆಹಾರ, ಬೆಚ್ಚನೆಯ ವಾಸಸ್ಥಳ ಇಲ್ಲದ ಮಿಡತೆಗಳು ಸತ್ತುಹೋದವು.**

**ಭಾರತದಲ್ಲಿ.....**

ಬೇಸಗೆಯಲ್ಲಿ ಶ್ರಮವಹಿಸಿ ದುಡಿದು ಬೆಚ್ಚನೆಯ ಮನೆ, ಸಾಕಾಗುವಷ್ಟು ಆಹಾರಗಳನ್ನು ಇರುವೆ ಸಂಗ್ರಹಿಸಿತು.

ಇದೊಂದು ಮೂರ್ಖ ಪ್ರಾಣಿ ಎಂದು ನಕ್ಕ ಮಿಡತೆ ಹಾಡಿತು, ಕುಣಿಯಿತು ಮತ್ತು ಮಜಾ ಮಾಡಿತು.

ಚಳಿಗಾಲ ಸಮೀಪಿಸಿತು. ಚಳಿ ತಡೆಯಲಾಗದ ಮಿಡತೆ ಪತ್ರಿಕಾ ವರದಿಗಾರರನ್ನು ಕರೆಯಿತು. ಇತರರು ಚಳಿಯಲ್ಲಿ ನಡುಗಿ ಸಾಯುತ್ತಿರುವಾಗ ಹೇಗೆ ಇರುವೆಗಳು ಮಾತ್ರ ಬೆಚ್ಚಗಿನ ಮನೆಯ ಸೌಲಭ್ಯ ಪಡೆಯುತ್ತಿವೆ ಎಂದು ಆಪಾದಿಸಿತು. ಇತರರು ಆಹಾರವಿಲ್ಲದೆ ಸಾಯುತ್ತಿರುವಾಗ ಇರುವೆಗಳು ಹೊಟ್ಟೆ ತುಂಬಾ ತಿನ್ನುವುದು ಸಮಾಜವಾದಕ್ಕೆ ವಿರುದ್ಧವಾದುದು ಎಂದು ಕೂಗಿತು. ಎನ್‌ಡಿಟಿವಿ, ಬಿಬಿಸಿ, ಸಿಎನ್‌ಎನ್‌ಗಳು ನಡುಗುತ್ತಿರುವ ಮಿಡತೆಯ ಕರುಣಾಜನಕ ಸ್ಥಿತಿಯನ್ನು ವಾರಗಟ್ಟಲೆ ಧಾರಾವಾಹಿಯಾಗಿ ತೋರಿಸಿದವು. ಅದರ ಜೊತೆಗೇ ಆರಾಮವಾಗಿ ದಿನ ಕಳೆಯುತ್ತಿರುವ ಇರುವೆಯನ್ನೂ ಪ್ರೇಕ್ಷಕರ ಕಣ್ಣಿನೊಳಗೆ ತುಂಬಿದವು.

ಈ ವೈರುಧ್ಯಗಳ ಬಗ್ಗೆ ಇಡೀ ದೇಶವೇ ಚಿಂತಿಸುವಂತಾಯಿತು. ಇನ್ನೊಬ್ಬರು

ಕಷ್ಟದಲ್ಲಿರುವಾಗ ಕೆಲವರು ಮಾತ್ರ ಸಂತೋಷವಾಗಿರುವುದು ನಮ್ಮ ದೇಶದಲ್ಲಿ ಅಸಮಂಜಸ ಎಂದು ವಾದಿಸುವಂತಾಯಿತು.

ಅರುಂಧತಿ ರಾಯ್ ಇರುವೆಗಳ ಗೂಡಿನ ಮುಂದೆ ಪ್ರದರ್ಶನ ಏರ್ಪಡಿಸಿದರು.

ಮೇಧಾ ಪಾಟ್ಕರ್ ಮಿಡತೆಗಳಿಗೆ ಆಹಾರ ಕೊಡಬೇಕು, ಅವುಗಳನ್ನು ಬೆಚ್ಚನೆಯ ಜಾಗಕ್ಕೆ ವರ್ಗಾಯಿಸಬೇಕು ಎಂಬ ಬೇಡಿಕೆಗಳೊಂದಿಗೆ ಆಹಾರ ನಿರಶನ ಮುಷ್ಕರ ಕೈಗೊಂಡರು. ಮಾಯಾವತಿ ಇದು ಅಲ್ಪಸಂಖ್ಯಾತರ ಮೇಲಿನ ದೌರ್ಜನ್ಯ ಎಂದು ಅಭಿಪ್ರಾಯಪಟ್ಟರು.

ಪತ್ರಿಕೆಗಳಲ್ಲಿ ಪರ ಮತ್ತು ವಿರೋಧಗಳ ಹಲವಾರು ಪತ್ರಗಳು ಪ್ರಕಟಗೊಂಡವು. ವಿರೋಧಿ ಪಕ್ಷಗಳು ವಾಕ್‌ಔಟ್ ಮಾಡಿದವು. ಎಡಪಕ್ಷಗಳು ಪಶ್ಚಿಮ ಬಂಗಾಳ ಮತ್ತು ಕೇರಳಗಳಲ್ಲಿ ಬಂದ್‌ಗೆ ಕರೆ ಕೊಟ್ಟವು. ಇರುವೆಗಳು ಬಿಸಿಲಿನಲ್ಲಿ ಶ್ರಮಪಟ್ಟು ಕೆಲಸ ಮಾಡಬಾರದು, ಹೀಗೆ ಮಿಡತೆ ಮತ್ತು ಇರುವೆಗಳಲ್ಲಿ ಸಮಾನತೆ ಇರಬೇಕು ಎಂದು ಕೇರಳದ ಸಿ.ಪಿ.ಎಂ. ಪಕ್ಷದ ಧುರೀಣರು ಹೇಳಿದರು.

ಲಾಲೂ ಪ್ರಸಾದ್‌ರವರು ಮಿಡತೆಗಳಿಗಾಗಿಯೆಂದೇ ಒಂದು ಉಚಿತ ರೈಲ್ವೆ ಕೋಚ್ ಅನ್ನು ಮೀಸಲಿಟ್ಟರು. ಅಂತೆಯೇ ಆ ರೈಲಿಗೆ ಮಿಡತೆ ರಥ ಎಂದು ನಾಮಕರಣ ಮಾಡಿದರು.

ಕೊನೆಗೆ ಸರಕಾರವು ಈ ಸಂಬಂಧ ತನಿಖೆ ನಡೆಸಲು 'ಪ್ರಿವೆಂನ್ಷನ್ ಆಫ್ ಟೆರರಿಸಂ ಅಗೈನ್‌ಸ್ಟ್ ಗ್ರಾಸ್‌ಹೋಪರ್ (POTAGA)' ಎಂಬ ಒಂದು ತಂಡವನ್ನೇ ರಚಿಸಿತು. ವಿದ್ಯಾ ಸಂಸ್ಥೆಗಳಲ್ಲಿ ಮತ್ತು ಸರಕಾರಿ ಉದ್ಯೋಗಗಳಲ್ಲಿ ಮಿಡತೆಗಳಿಗಾಗಿಯೇ ವಿಶೇಷ ರಿಸರ್ವೇಶನ್ ಕೊಡುತ್ತೇನೆ ಅರ್ಜುನ್ ಸಿಂಗ್ ಘೋಷಿಸಿದರು.

ಇರುವೆಗಳ ಮೇಲೆ ವಿಶೇಷ ತೆರಿಗೆ ಹೇರಲಾಯಿತು ಮತ್ತು ಅದರ ಸಂಗ್ರಹದ ಬಹುಭಾಗ POTAGAರ ಆಡಳಿತಕ್ಕೆ ವೆಚ್ಚವಾಯಿತು. ಅರುಂಧತಿ ರಾಯ್ ಇದನ್ನು 'ನ್ಯಾಯಕ್ಕೆ ಸಂದ ಜಯ' ಎಂದು ಕರೆದರು, ಲಾಲು 'ಸಾಮಾಜಿಕ ನ್ಯಾಯ' ಎಂದು ಹೇಳಿದರು, ಕೋಫಿ ಅನ್ನನ್ ಮಿಡತೆಗಳನ್ನು ಅಮೆರಿಕದ ಜನರಲ್ ಅಸೆಂಬ್ಲಿಯಲ್ಲಿ ಭಾಷಣ ಮಾಡಲು ಕರೆದರು ಮತ್ತು ಸಿ.ಪಿ.ಎಂ. ಇದನ್ನು 'ಕೆಳವರ್ಗದ ಜನರಿಗೆ ದೊರಕಿದ ಕ್ರಾಂತಿಕಾರಿ ನ್ಯಾಯ' ಎಂದರು.

ಎಷ್ಟೋ ವರ್ಷಗಳ ನಂತರ....

ಇರುವೆಗಳೆಲ್ಲಾ ಭಾರತ ಬಿಟ್ಟು ಅಮೆರಿಕಕ್ಕೆ ಹೋದವು ಮತ್ತು ಅಲ್ಲಿ ಕೋಟ್ಯಂತರ ಡಾಲರ್ ಕಂಪನಿಗಳನ್ನು ತೆರೆದವು. ದೇಶದ ಶ್ರಮಜೀವಿಗಳು, ಬುದ್ಧಿವಂತರು ಅಮೆರಿಕಕ್ಕೆ ಹಾರಿದರು. ಅಲ್ಲಿನ ದೇಶ ಇನ್ನಷ್ಟು ಸಮೃದ್ಧವಾಯಿತು.

ಸಾವಿರಾರು ಮಿಡತೆಗಳು ಭಾರತದಲ್ಲಿ ಆಹಾರವಿಲ್ಲದೇ ಸಾಯತೊಡಗಿದವು.

ಇದರಿಂದಾಗಿಯೇ ಭಾರತ ಇನ್ನೂ ವಿಕಸನ ಶೀಲ ದೇಶವಾಗಿಯೇ ಉಳಿದಿದೆ.

# ರವಿಕೆ ಕಣ

• ಪಾಲಚಂದ್ರ

**ಯಾ**ವುದಾದರೂ ಬಟ್ಟೆಅಂಗಡಿಗೆ ಹೋಗಿ "ನನಗೊಂದು ಹಳದಿ ಬಣ್ಣದ ರವಿಕೆ ಕಣ ಕೊಡಿ" ಅಂದರೆ ಅವರು ಹ್ಯಾಪು ಮೋರೆ ಹಾಕಿಕೊಂಡು ಮೇಲೆ ಕೆಳಗೆ ನೋಡಬಹುದು. ಅದೇ "ನನಗೊಂದು ಎಲ್ಲೋ ಕಲರಿನ ಬ್ಲೌಸ್‌ಪೀಸ್ ಕೊಡಿ" ಎಂದಿದ್ದಾದರೆ, ಕೊಂಚವೂ ವಿಳಂಬಿಸದೆ ಹಳದಿ ಬಣ್ಣದ ಹಲವು ವಿಧದ ಬ್ಲೌಸ್ ಪೀಸ್ಗಳನ್ನು ನಿಮ್ಮೆದುರು ರಾಶಿ ಹಾಕಬಹುದು. ನೀವು ಅವರಂತೆ ಸಂಪ್ರದಾಯವಾದಿಗಳಾಗಿಲ್ಲದಿದ್ದಲ್ಲಿ ನಿಮಗೂ ಈ 'ರವಿಕೆ ಕಣದ' ಹೆಸರು ಹೊಸದಾಗಿ ಕಾಣಿಸಬಹುದು. "ಸಂಪ್ರದಾಯವಾದಿಗಳಿಗೂ ಈ ರವಿಕೆ ಕಣಕ್ಕೂ ಎತ್ತಣದ ಸಂಬಂಧವಯ್ಯಾ?" ಎಂದು ನೀವು ಕೇಳಿದರೆ, ಮನೆ, ಮದುವೆ ಇನ್ನಿತರ ಶುಭ ಸಮಾರಂಭಗಳಲ್ಲಿ ಬರುವ ಮುತ್ತೈದೆಯರಿಗೆ ಈ ರವಿಕೆ ಕಣವನ್ನು ಎಲೆ ಅಡಿಕೆಯೊಂದಿಗೆ ಕೊಡುವುದು ಸಂಪ್ರದಾಯ. ಇಲ್ಲಿ ರವಿಕೆ ಕಣದ ಪ್ರಸ್ತಾಪ ಬರುವುದರಿಂದ, ಈ ಸಂಪ್ರದಾಯ ತಿಳಿದಿಲ್ಲದ ನಿಮ್ಮನ್ನು ಸಂಪ್ರದಾಯವಾದಿಗಳೆಂದು ಕರೆಯುವ ಪಾಪ ನಾನು ಮಾಡುವುದಿಲ್ಲ.

ಈಗ ನಾನು ಹೇಳ ಹೊರಟಿರುವುದು ಇದೇ ರೀತಿಯ ಸಂಪ್ರದಾಯದಿಂದ ನಮ್ಮ ಮನೆ ಪ್ರವೇಶಿಸಿದ ರವಿಕೆ ಕಣದ ಒಂದು ಗೋಳಿನ ಕತೆ. ಅಂದು ಸಂಕ್ರಾಂತಿಯ ರಜಾ ದಿನ, ಮಧ್ಯಾಹ್ನದ ಊಟದಲ್ಲಿ ಸಿಹಿ ಹುಗ್ಗಿ ಸ್ವಲ್ಪ ಜಾಸ್ತಿಯೇ ಉದರ ಪ್ರವೇಶಿಸಿದ್ದರಿಂದ, ಚಾಪೆಯನ್ನೆಳೆದುಕೊಂಡು ದಿನಪತ್ರಿಕೆ ಹಿಡಿದ ಕೆಲವೇ ಕ್ಷಣಗಳಲ್ಲಿ ಯೋಗ ನಿದ್ರೆ ಪ್ರಾಪ್ತವಾಗಿತ್ತು. ಅಂದರೆ ತೀರಾ ನಿದ್ರೆಯೂ ಅಲ್ಲದ, ಎಚ್ಚರವೂ ಅಲ್ಲದ, ಒಂದು ರೀತಿಯ ಸಮತೋಲನದ ಸ್ಥಿತಿ. ಹೊರಗಡೆ ಹಾಡಿಯಲ್ಲಿನ ಹಕ್ಕಿಗಳ ಚಿಲಿಪಿಲಿ ಬಿಟ್ಟರೆ ಉಳಿದಂತೆ ಮೌನ. ಎಷ್ಟು ಹೊತ್ತು ಈ ಸ್ಥಿತಿಯಲ್ಲಿದ್ದೆನೋ; ನನ್ನ ನಿದ್ರೆಗೆ ಭಂಗ ಬರುವಂತೆ ಕೋಣೆಯ ಮೂಲೆಯಲ್ಲಿ ಕಿಚಿ, ಕಿಚಿ ಸದ್ದಿನೊಂದಿಗೆ ಕರುಳು ಹಿಂಡುವಂತಹ ಆಕ್ರಂದನ. ನಿದ್ರಾ ಭಂಗದಿಂದ ಕೋಪಗೊಂಡು ಕಣ್ಣು ತೆರೆದು, ಸದ್ದು ಬರುತ್ತಿದ್ದ ಕಡೆ ಹೆಜ್ಜೆ ಇಟ್ಟೆ. ಒಂದು ಕರೀ ಬಣ್ಣದ ಇಲಿ ನನ್ನ ಕಾಲು ಬುಡದಿಂದಲೇ ಓಡಿ ಹೋಗಿ ನನ್ನ ಗಾಬರಿ ಹೆಚ್ಚಿಸಿತ್ತು ಮತ್ತು ಮೂಲೆಯಲ್ಲಿ ಒಂದು ರವಿಕೆ ಕಣ ಅನಾಥವಾಗಿ ಬಿದ್ದುಕೊಂಡು ರೋಧಿಸುತ್ತಿತ್ತು. ಅಳುತ್ತಿರುವ ಮಗುವನ್ನು ಸಂತೈಸಲು ಹೊರಟ ತಾಯಿಯ ಮುಖದಲ್ಲಿ ಸೂಸುವ ವಾತ್ಸಲ್ಯ ಭಾವದಿಂದ, ರವಿಕೆ ಕಣವನ್ನು ಕೈಗೆತ್ತಿಕೊಂಡು ನೋಡಿದರೆ, ಅದರಲ್ಲಿ ಚಿತ್ರ ವಿಚಿತ್ರ ಛೇದಗಳು!

ನಿದ್ರೆಯಿಂದೆಚ್ಚೆತ್ತ ನನ್ನ ಭೀಷಣ ದೃಷ್ಟಿಯ ತಾಪಮಾನಕ್ಕೆ ಹೆದರಿಯಲ್ಲವಾದರೂ, ನನ್ನ ಕಾಲಿನ ಸದ್ದಿಗೆ ಹೆದರಿ ಓಡಿ ಹೋದ ಇಲಿಗೂ, ಅಸಹಾಯಕವಾಗಿ ಬಿದ್ದು ಗೋಳಿಡುತ್ತಿರುವ ಈ ರವಿಕೆ ಕಣಕ್ಕೂ ಸಂಬಂಧ ಕಲ್ಪಿಸಿ, ನನ್ನ ನಿದ್ರಾಭಂಗಕ್ಕೆ ಕಾರಣವನ್ನು ಕಂಡು ಹಿಡಿಯಲು ಹೆಚ್ಚು ಸಮಯ ಹಿಡಿಯಲಿಲ್ಲ. ಆದರೂ ಆ ರವಿಕೆ ಕಣದ ಬಾಯಿಂದ ಅದರ ಕಷ್ಟವನ್ನು ತಿಳಿದು, ಸಂತೈಸುವ ನೆಪದಿಂದ ಅದರೊಂದಿಗೆ ಮಾತಿಗಿಳಿದೆ.

''ಯಾಕೆ ಕರುಳು ಹಿಂಡುವಂತೆ ಈ ರೀತಿ ಕೂಗಿಕೊಳ್ಳುತ್ತಿರುವೆ, ನಿನ್ನ ಸಂಕಟವೇನೆಂದು ಹೇಳಬಾರದೇ? ಸಂಕಟ ಇನ್ನೊಬ್ಬರ ಬಳಿ ತೋಡಿಕೊಳ್ಳುವುದರಿಂದ ಮನಸ್ಸಿನ ದುಗುಡ ಕಡಿಮೆಯಾಗುತ್ತದೆ.''

''ಸಂಕಟ ಹೇಳಿಕೊಳ್ಳಲು ನನ್ನವರು ಅಂತ ಯಾರೂ ಇಲ್ಲ. ಸುಮ್ಮನೆ ಸಿಕ್ಕ ಸಿಕ್ಕವರ ಬಳಿಯೆಲ್ಲಾ ಹೇಳಿ ಕನಿಕರದ ವಸ್ತುವಾಗಲು ನನಗೆ ಮನಸ್ಸೂ ಇಲ್ಲ.''

''ನನ್ನನ್ನು ಸಿಕ್ಕ ಸಿಕ್ಕವರು ಅಂತ ಯಾಕೆ ತಿಳಿದುಕೊಳ್ಳುತ್ತೀಯ? ನಾನು ಈ ಮನೆಯವನೇ, ನಿನ್ನ ಸಂಕಟ ಏನಿದೆಯೋ ಹೇಳು ನನ್ನ ಕೈಲಾದ ಸಹಾಯ ನಾನು ಮಾಡುತ್ತೇನೆ. ಒಂದು ವೇಳೆ ಏನೂ ಮಾಡುವ ಹಾಗಿಲ್ಲದಿದ್ದಲ್ಲಿ, ನಿನ್ನ ಈ ಮನಸ್ಥಿತಿಗೆ ಕಾರಣ ತಿಳಿಸು, ಇದರಿಂದ ನಿನ್ನ ಮನಸ್ಸಿಗೆ ಸಮಾಧಾನವಾದರೂ ಆಗಬಹುದು.''

ರವಿಕೆ ಕಣ ಅನುಮಾನದಿಂದ ''ಮನೆಯ ಹೆಂಗಸರೇ ನನ್ನನ್ನು ತುಚ್ಛಭಾವದಿಂದ ನೋಡುತ್ತಿರಬೇಕಾದರೆ, ನಿನ್ನಂತಹ ಪುರುಷನಲ್ಲಿ ನನ್ನ ದುಗುಡ ತೋಡಿಕೊಳ್ಳಬಹುದೇ, ಅಲ್ಲದೇ ನೀನು ನನ್ನ ಮನಸ್ಥಿತಿಯನ್ನು ಅರ್ಥ ಮಾಡಿಕೊಳ್ಳುವುದು ತುಂಬಾ ಕಠಿಣ.''

ನಾನು ಭರವಸೆಯ ದನಿಯಲ್ಲಿ ''ಕಷ್ಟ ಕಷ್ಟವೇ, ಅದನ್ನು ಗಂಡು ಕಷ್ಟ ಹೆಣ್ಣು ಕಷ್ಟ ಅಂತ ಭೇದ ಮಾಡುವುದು ಸರಿಯಲ್ಲ. ನಿನ್ನ ಮನಸ್ಥಿತಿ ಪುರುಷನಾದ ನಾನು ತಿಳಿದುಕೊಳ್ಳುವುದು ಕಠಿಣವಾದರೂ, ಸಮಾಧಾನ ಚಿತ್ತದಿಂದ ನಿನ್ನ ಮಾತನ್ನು ಕೇಳುವೆ.''

''ನನ್ನ ಮಾತು ಕೇಳುವವರೂ ಒಬ್ಬರಿದ್ದಾರೆಂದು ತಿಳಿದು ಸಂತೋಷವಾಯಿತು. ಇದರಿಂದ ನನಗೆ ಲಾಭವಾದೀತೆಂದು ನನಗನಿಸದಿದ್ದರೂ, ಕೇಳುವ ಕುತೂಹಲ ತೋರಿಸಿದ್ದರಿಂದ ನಿನ್ನಲ್ಲಿ ಹೇಳಿಕೊಳ್ಳುತ್ತಿದ್ದೇನೆ.''

''ಹೇಳು, ಕೇಳುತ್ತಾ ಇದ್ದೇನೆ.''

''ನಾನು ಹುಟ್ಟಿದ್ದು ಚೆನ್ನೈನ ಒಂದು ಪಾಲಿಸ್ಟರ್ ಕಾರ್ಖಾನೆಯಲ್ಲಿ. ಪೆಟ್ರೋಲಿಯಂನ ಕಚ್ಚಾವಸ್ತುವನ್ನು, ಹಲವು ಬಗೆಯ ಯಂತ್ರಗಳ ಸಹಾಯದಿಂದ ಬಟ್ಟೆ ಮಾಡಿ, ರಂಗನ್ನು ಬಳಿದು, ಸುಂದರವಾಗಿ ಪ್ಯಾಕ್ ಮಾಡಿ, ಕೆಲವು ವ್ಯಾಪಾರಿಗಳ ಮೂಲಕ ಈ ನಿಮ್ಮ ಊರು ತಲುಪಿದೆ.''

''ತುಂಬಾ ಕುತೂಹಲಕಾರಿಯಾಗಿದೆ, ಮುಂದುವರೆಸು.''

''ಯಾವುದಾದರೂ ಸುಂದರ ತರುಣಿ ನನ್ನನ್ನು ಕೊಂಡು, ಆಕೆಯ ಕುಪ್ಪಸವಾಗಿ

ಮಾಡಿಕೊಳ್ಳಬಹುದೆಂದು ಅಂಗಡಿಗೆ ಬಂದು ಹೋಗುವವರನ್ನೆಲ್ಲಾ ಆಸೆಯ ಕಂಗಳಿಂದ ನೋಡುತ್ತಿದ್ದೆ.''

''ಹೂಕುಸುಮದೆಳೆಯ ಹಳದಿ ಬಣ್ಣದ ನಿನ್ನ ಆಸೆ ಸಹಜವಾದದ್ದೇ.''

''ಅಂಗಡಿಗೆ ಬಂದವರೆಲ್ಲಾ ಸೀರೆ ಕೊಂಡು ಹೋಗುತ್ತಿದ್ದರಾದರೂ ಒಬ್ಬರೂ ಅದಕ್ಕೆ ಹೊಂದುವ ಕಣವನ್ನು ಕೇಳಿಯೂ ನೋಡಲಿಲ್ಲ.''

''ಯಾಕೆ ಈಗ ಹೆಂಗಸರು ಸೀರೆಯೊಂದಿಗೆ ಕುಪ್ಪಸ ತೊಡುವುದಿಲ್ಲವೇ?''

''ಛೇ ಹಾಗೇನಿಲ್ಲ. ಇತ್ತೀಚಿನ ದಿನಗಳಲ್ಲಿ ಸೀರೆಯೊಂದಿಗೇ ಈ ರವಿಕೆ ಕಣ 'ವಿತ್‌ಬ್ಲೌಸ್' ಎಂಬ ಹಣೆಪಟ್ಟಿ ಹಚ್ಚಿಕೊಂಡು ಬರುವುದಾದ್ದರಿಂದ, ಮಹಿಳೆಯರು ಸೀರೆಗೊಪ್ಪುವ ರವಿಕೆ ಕಣ ಹುಡುಕಿಕೊಂಡು ಹೋಗುವ ಪ್ರಮೇಯವಿಲ್ಲ.''

''ಹೋ ಹಾಗೆ, ಅಂದರೆ ಸೀರೆ ಮಾಡುವವರೇ ಈ ಸೀರೆಗೆ ಈ ಬಣ್ಣದ ಕುಪ್ಪಸ ಹೊಂದುತ್ತದೆ ಎಂದು ನಿರ್ಧರಿಸಿ, ಸೀರೆಯೊಂದಿಗೆ ಸ್ವಲ್ಪ ಹೆಚ್ಚಿನ ಬಟ್ಟೆ ಇರಿಸಿರುತ್ತಾರಲ್ಲವೇ? ಆದ್ರೆ ಈ 'ವಿತ್‌ಬ್ಲೌಸ್' ಅಧಿಕ ಬೆಲೆಯ ಸೀರೆಗಳೊಂದಿಗೆ ಮಾತ್ರ ಬರುವುದಲ್ಲವೇ? ಸಾಧಾರಣ ಬೆಲೆಯ ಅಥವಾ ಕಡಿಮೆ ಬೆಲೆಯ ಸೀರೆ ತೆಗೆದುಕೊಳ್ಳುವವರು ನಿನ್ನನ್ನು ಕೊಂಡೊಯ್ಯಬಹುದಿತ್ತಲ್ಲವೇ?''

''ಸಾಧಾರಣ ಅಥವಾ ಕಡಿಮೆ ಬೆಲೆಯ ಸೀರೆ ಕೊಂಡುಕೊಳ್ಳುವವರು ಸಾಮಾನ್ಯವಾಗಿ ಬಡವರು. ಸೀರೆಗೆ 200, 250 ಕೊಟ್ಟು ಒಂದೊಂದು ರವಿಕೆಗೂ, ಹೊಲಿಸುವ ಕೂಲಿ ಸೇರಿ, 70 ರೂಪಾಯಿಗಳಷ್ಟು ಖರ್ಚು ಮಾಡುವ ಬದಲು, ಹೆಚ್ಚಿನ ಸೀರೆಗಳಿಗೆ ಹೊಂದುವಂತಹ ಕಪ್ಪು, ಕಡು ನೀಲಿ, ಬಿಳಿ ಮುಂತಾದ ಬಣ್ಣದ ಕುಪ್ಪಸ ಹೊಲಿಸಿಟ್ಟುಕೊಂಡು ಹೆಚ್ಚಿನ ಸೀರೆಗಳಿಗೆ ಇವನ್ನೇ ತೊಡುತ್ತಾರೆ.''

''ಆಯಿತು, ಮತ್ತೆ ಅಂಗಡಿಯಿಂದ ಇಲ್ಲಿಗೆ ಹೇಗೆ ಬಂದೆ?''

''ಜೂನಿನಲ್ಲಿಯೇ ಅಂಗಡಿಯ ಮಳಿಗೆಯಲ್ಲಿ ಬಂದು ಬಿದ್ದಿದ್ದ ನನ್ನನ್ನು, ಜನವರಿಯಾದರೂ ಯಾರೂ ಕೊಂಡೊಯ್ದಿರಲಿಲ್ಲ. ಸುಂದರ ತರುಣಿ ಅಲ್ಲದಿದ್ದರೂ ಸರಿ, ಯಾರೋ ಒಬ್ಬರ ಉಡುಗೆಯಾಗಿ ನನ್ನ ಜೀವನ ಸಾರ್ಥಕಗೊಳಿಸಿಕೊಳ್ಳೋಣ ಎಂದಿದ್ದರೂ, ನನ್ನ ಕೇಳಿದವರೊಬ್ಬರಿಲ್ಲ. ಕೊನೆಗೆ ಫೆಬ್ರವರಿಯಲ್ಲಿ ಮಗಳ ಮದುವೆಗೆಂದು ಬಂದ ಯಜಮಾನರೊಬ್ಬರು ನನ್ನನ್ನು ಕೊಂಡೊಯ್ದರು.'''

''ಎಂತಹ ಸುಯೋಗ ನಿನ್ನದು, ಅಂತೂ ಮಧುಮಗಳ ಉಡುಗೆಯಾಗುವ ಭಾಗ್ಯ ಲಭಿಸಿತು ಅನ್ನು.''

''ಅದಕ್ಕೆ ನಾನು ಪುರುಷನಾದ ನಿನ್ನ ಬಳಿ ನನ್ನ ದುಗುಡ ಹೇಳಿಕೊಳ್ಳುವುದಿಲ್ಲ ಎಂದು ಹೇಳಿದ್ದು. ಮಗಳಿಗೆ ಮದುವೆಯ ಸಂದರ್ಭದಲ್ಲಿ ಯಜಮಾನರು ರೇಷ್ಮೆ ಬಟ್ಟೆ ಅಲ್ಲದೇ, ನನ್ನಂತಹ ಪಾಲಿಸ್ಟರ್ ಬಟ್ಟೆ ಕೊಳ್ಳುವರೇ?''

''ಕ್ಷಮಿಸು, ನನಗೆ ಅಷ್ಟೊಂದು ತಿಳಿದಿಲ್ಲ. ಮತ್ತೆ ನಿನ್ನನ್ನು ಅವರು ಕೊಂಡ ಪ್ರಮೇಯ?''

''ಕೇವಲ ನಾನಷ್ಟೇ ಅಲ್ಲ, ನನ್ನಂತೆಯೇ ಹಲವು ತಿಂಗಳಿಂದ ಮಳಿಗೆಯಲ್ಲೇ ಬಿದ್ದಿದ್ದ ಇತರ ಪಾಲಿಸ್ಟರ್ ಕಣಗಳನ್ನೂ ಕೂಡ, ಮದುವೆಗೆ ಬಂದು ಹರಸಲಿರುವ ಮುತ್ತೈದೆಯರಿಗೆ ಕಾಣಿಕೆಯಾಗಿ ನೀಡಲು ಕೊಂಡೊಯ್ದರು.''

''ಹಾಗೆ, ಅಂತೂ ಯಾರೋ ಮುತ್ತೈದೆ ಮನೆ ಸೇರೋ ಭಾಗ್ಯ ನಿನಗೆ ಸಿಕ್ಕಿತು''

''ಒಬ್ಬರ ಮನೆಗೆ ಸೇರಿದ್ದೇನೋ ನಿಜ, ಆದರೆ ಆಕೆ ಕುಪ್ಪಸ ಹೊಲಿಸಿಕೊಳ್ಳುವ ಬದಲು ನನ್ನನ್ನು ಬೀರುವಿನಲ್ಲಿ ಕೆಲ ಕಾಲ ಇರಿಸಿಕೊಂಡು, ಆಕೆಯ ಮನೆಗೆ ಅಪೂರ್ವಕ್ಕೆ ಬಂದ ಮಹಿಳೆಯರೊಬ್ಬರಿಗೆ ನನ್ನನ್ನು ಎಲೆ ಅಡಿಕೆ, ಅರಶಿನ ಕುಂಕುಮದೊಂದಿಗೆ ಸೇರಿಸಿ ಕೊಟ್ಟು, ಬೀಳ್ಕೊಟ್ಟರು.''

''ತುಂಬಾ ಒಳ್ಳೆಯವರು ಅವರು, ಕಲಿಯುಗದಲ್ಲಿ ದಾನ ಮಾಡುವವರು ಎಲ್ಲಿ ಸಿಗುತ್ತಾರೆ''

''ದಾನವೂ ಅಲ್ಲ ಧರ್ಮವೂ ಅಲ್ಲ, ಉಚಿತವಾಗಿ ಬಂದ ಬೇಡದ ವಸ್ತುವನ್ನು ಇನ್ನೊಬ್ಬರಿಗೆ ದಾಟಿಸುವುದಷ್ಟೆ. ಆ ಮತ್ತೊಬ್ಬ ಮಹಿಳೆ ಮಾಡಿದ್ದೂ ಅದನ್ನೇ, ನನ್ನನ್ನು ಮಗದೊಬ್ಬರಿಗೆ ದಾಟಿಸಿದ್ದು.''

''ಹೋ, ಹಾಗಾದರೆ ನೀನು ತುಂಬಾ ಮನೆ ಸುತ್ತಿ ಬಂದು ಈಗ ನಮ್ಮ ಮನೆಗೆ ಬಂದಿರುವುದೇ? ಒಟ್ಟಿನಲ್ಲಿ ಇದುವರೆಗೆ ನೀನು ಎಷ್ಟು ಮನೆ ಸುತ್ತಿ ಬಂದಿರಬಹುದು?''

''ನನಗೂ ಸರಿಯಾಗಿ ನೆನಪಿಲ್ಲ. ನನ್ನ ಮೈ ಮೇಲಿರುವ ಅರಶಿನ ಕುಂಕುಮದ ಕಲೆಗಳನ್ನು ನೋಡಿ ನೀನೇ ಊಹಿಸು.''

''ನಿನ್ನ ಬಣ್ಣ ಅರಶಿನ ಕುಂಕುಮ ಸೇರಿ, ನಾನು ಮೇಲೆ ಹೊಗಳಿದ್ದ ಹೂಕುಸುಮದೆಳೆಯ ಹಳದಿಯಾದದ್ದೋ? ನಾನು ನಿನ್ನ ಬಣ್ಣಾನೇ ಅದು ಅಂತ ತಪ್ಪು ತಿಳಿದುಕೊಂಡಿದ್ದೆ.''

''ಹೂಂ, ನನ್ನದು ಮೊದಲು ಹಾಲಿನ ಕೆನೆ ಬಣ್ಣ ಇತ್ತು''

''ಮುಂದಿನದ್ದು ನಾನು ಊಹಿಸುವುದಾದರೆ, ಹೀಗೆ ನನ್ನಮ್ಮನಿಗೆ ಬಳುವಳಿಯಾಗಿ ಬಂದ ನೀನು ಆಕೆಯ ಕಣ್ತಪ್ಪಿನಿಂದ ಯಾವುದೋ ಮೂಲೆ ಹಿಡಿದಿರಬೇಕು. ಕೊರೆದು ಹಾಕಲು ಏನೂ ಸಿಗದೇ ಇರುವ ಇಲಿಯೊಂದು ನಿನ್ನ ಹರಿದಾಡುತ್ತಿರಬೇಕಾದರೆ, ನಿನ್ನ ಕೂಗಿಗೆ ನಾನು ಎಚ್ಚೆತ್ತದ್ದಲ್ಲವೇ?''

''ಸರಿಯಾಗಿ ಊಹಿಸಿದಿ''

''ಅಂತೂ ಕುಪ್ಪಸವಾಗಿ ಮೆರೆಯಬೇಕಿದ್ದ ನೀನು, ಈಗ ಹೀಗೆ ಹರಿದು ಮುದ್ದೆಯಾಗಿ ಬಿದ್ದಿದ್ದಿ. ನಿನ್ನ ಅವಸ್ಥೆಗೆ ನಾನು ಮರುಕ ಸೂಚಿಸುವುದಕ್ಕಿಂತ ಹೆಚ್ಚಿನದೇನೂ ಮಾಡಲಾರೆ. ಹರಿದ ನಿನ್ನನ್ನು ಭಿಕ್ಷುಕರಿಗೆ ಕೊಡುವುದೂ ಸಮನಲ್ಲ. ಅಡುಗೆ ಮನೆಯಲ್ಲಿ ಬಿಸಿ ಪಾತ್ರೆ

ಹಿಡಿಯಲು ಬಳಸುವ ಕೈ ಅರಿವೆಯಾಗಿಯೂ ಬಳಸಲಾಗದು. ಇನ್ನು ನಿನ್ನ ಜಾತಿ ಪಾಲಿಸ್ಟರ್ ಆದ್ದರಿಂದ ನೆಲ ಒರೆಸಲಿಕ್ಕೂ ಬರುವುದಿಲ್ಲ. ಅಂತೂ ಒಬ್ಬರ ಕೈಯಿಂದೊಬ್ಬರಿಗೆ ಸಾಗಿಯೇ, ಅವರಿಗೊಂದಷ್ಟು ಪುಣ್ಯ ಸಂಪಾದನೆ ಮಾಡಿಕೊಟ್ಟು ಈ ಅಧೋಗತಿಗಿಳಿದ ನಿನ್ನದು ನಿಜಕ್ಕೂ ಆದರ್ಶ ವ್ಯಕ್ತಿತ್ವ. ನಿನ್ನ ವ್ಯಕ್ತಿತ್ವವನ್ನು ಬರಹದ ಮೂಲಕ ಪ್ರಪಂಚದ ಮೂಲೆ ಮೂಲೆಗೂ ಹರಡುವಂತೆ ಮಾಡುತ್ತೇನೆ.''

''ನೀನು ನನ್ನ ಮಾತು ಕೇಳಿದ್ದೇ ನನಗೆ ಸಂತೋಷ. ಅದರಲ್ಲೂ ನನ್ನ ಬಾಳ ಕಥೆಯನ್ನು ಬರಹದ ಮೂಲಕ ಇತರರಿಗೆ ತಲುಪಿಸುವ ಪುಣ್ಯದ ಕೆಲಸ ಮಾಡುತ್ತಿದ್ದೀಯ. ಇದರಿಂದ ನಮ್ಮ ಮುಂದಿನ ಪೀಳಿಗೆಯವರಿಗಾದರೂ ಒಳ್ಳೆಯ ಜೀವನ ಸಿಗಬಹುದು.''

''ಅದೆಲ್ಲಾ ಇರಲಿ ಬಿಡು, ನಿನ್ನನ್ನು ಸುಮ್ಮನೆ ಬಿಸಾಡೋಕೆ ಮನಸ್ಸು ಬರುತ್ತಿಲ್ಲ, ನಿನ್ನ ಅನುಮತಿ ಇದ್ದರೆ ನಮ್ಮನೆ ದೇವರ ಫೋಟೋ ಒರೆಸುವುದಕ್ಕೆ ಹಾಕುತ್ತೇನೆ.''




ಸೇರೋದು ಅನಿವಾರ್ಯ ಆಯ್ತು...ಇಲ್ಲದಿದ್ರೆ
ನಮ್ಮ ಅಭಿವೃದ್ಧಿಗೆ 'ಅಡ್ಡಗಾಲು' ಹಾಕ್ತಿನಂದ್ರು..

# ಮಾತು ನಿಂತಾಗ

• ಬೇಲೂರು ರಾಮಮೂರ್ತಿ

**ಮಂ**ಜು ಪೇಪರ್ ಓದ್ತಾ ಕೂತಿದ್ದಾಗ ಸುಮ ಬೇಗ ಬೇಗ ಬಂದು ತನಗೆ ಮಾತಾಡಲು ಆಗ್ತಿಲ್ಲ ಅಂತ ಸನ್ನೆ ಮಾಡ್ತಾಳೆ. ಮಂಜು ಅವಳ ಕಡೆ ವಿಚಿತ್ರವಾಗಿ ನೋಡ್ತಾನೆ. ಸುಮ ರಂಗದ ಮೇಲೆಲ್ಲಾ ಪರದಾಡುತ್ತಾ ತನಗೆ ನಾಲಿಗೆ ಬಿದ್ದು ಹೋಗಿದೆ ಅನ್ನುವಂತೆ ನಟನೆ ಮಾಡುತ್ತಾಳೆ.

ಮಂಜು : ಅಯ್ಯೋ ನಿನ್ನ ಏನಾಯ್ತೋ ನಿಂಗೆ. ಸ್ವಲ್ಪ ಹೊತ್ತಿಗೆ ಮುಂಚೆ ನನ್ನನ್ನ ಬಾಯಿಗೆ ಬಂದ ಹಾಗೆ ಬೈದ್ಯಲ್ಲೇ. ಈಗ ಬಂದು ಬೆಬ್ಬೆಬ್ಬೆ ಅಂತಿದೀಯ. ಆಗ್ಲೇ ನಿಂಗೆ ಬಾಯಿ ಬಿದ್ದು ಹೋಯ್ತಾ?

ಸುಮ : ಗಂಡನ ಕೈಗೆ ಮೊಬೈಲ್ ಕೊಟ್ಟು ಡಾಕ್ಟರಿಗೆ ಫೋನ್ ಮಾಡಿ ಅಂತ ಸನ್ನೆ ಮಾಡ್ತಾಳೆ.

ಮಂಜು : ಡಾಕ್ಟರಿಗೆ ಫೋನ್ ಮಾಡ್ಬೇಕಾ. ಯಾಕೆ ನಿನಗೆ ಮಾತಾಡೋಕೆ ಆಗ್ತಿಲ್ಲ ಅಂತಾನಾ. ಇದು ನಿಜವೇ ಆಗಿದ್ರೆ ಇಂಥಾ ಸಂತೋಷದ ಸಮಾಚಾರನ ನಾನು ಖುಷಿಯಿಂದ ಅನುಭವಿಸೋದು ಬೇಡ್ವಾ?

ಹೆಂಡತಿ : ತನಗೆ ನಾಲಿಗೆ ಹೋಯ್ತು ಅಂತ ಗೋಳಾಡ್ತಾ ಮತ್ತೆ ಮತ್ತೆ ಗಂಡನ ಕೈಗೆ ಮೊಬೈಲ್ ತಂದು ಕೊಡ್ತಾಳೆ.

ಮಂಜು : (ಪ್ರೇಕ್ಷಕರತ್ತ ನೋಡಿ) ಅಲ್ಲಾ ಸ್ವಾಮಿ, ಇವಳು ಇಲ್ಲಿ ನಾಲಿಗೆ ಚಾಚಿಕೊಂಡು ನಿಂತಿದಾಳಲ್ಲ ಇವಳು, ನನ್ನ ಹೆಂಡ್ತಿ, ಇವಳೇನು ಸಾಮಾನ್ಯ ಅಂದ್ಕೊಬೇಡಿ, ಆ ದೇವರು ತನಗೆ ಮಾತ್ರ ನಾಲಿಗೆ ಕೊಟ್ಟಿದಾನೆ ಅಂತ ನನ್ನನ್ನ ಬಾಯಿಗೆ ಬಂದ ಹಾಗೆ ಬೈತಾಳೆ. ಈ ಗೋಳು ಇವತ್ತಿಂದಲ್ಲ, ಮದುವೆಯಾದ ದಿನದಿಂದಲೇ. ಅಲ್ಲ, ಫಸ್ಟ್ ನೈಟು ರೂಮಿಗೆ ಲೇಟಾಗಿ ಹೋದೆ ಅಂತ ಅವತ್ತೇ ನನ್ನ ಬೈಯೋಕೆ ಷುರು ಮಾಡ್ಕೊಂಡ್ಳು ಅಂತೀನಿ. ಏನಂತ ಬೈದ್ಲು ಗೊತ್ತಾ. ನಿಮ್ಮನ್ನ ಕಟ್ಕೊಳೋ ಬದ್ಲು ಆ ಸುಬ್ಬಣ್ಣನ್ನ ಕಟ್ಕೊಂಡಿದ್ರೆ, ಇಷ್ಟೊತ್ಗೆ ರೂಮೊಳಗೆ ಬಂದು ದೀಪ ಆರಿಸ್ತಿದ್ರು, ನೀವೂ ಇದೀರ ದಂಡಕ್ಕೆ ಅಂತ ಬೈದ್ಲು. ಅವತ್ತಿಂದ ಇವತ್ತಿನವರೆಗೂ ಬೈದಿದ್ದೇ ಬೈದಿದ್ದು. ಇವಳಿಗೆ ಹೀಗೇ ಆಗಬೇಕು, ಏನಂತೀರ? ನನಗಂತೂ ಇವತ್ತು ಎಲ್ಲಿಲ್ಲದ ಸಮಾಧಾನ ಆಗಿದೆ.

ಸುಮ : ಮತ್ತೆ ಮತ್ತೆ ಬಂದು ಗಂಡನಿಗೆ ಫೋನ್ ಮಾಡಿ ಅಂತ ದುಂಬಾಲು ಬೀಳ್ತಾಳೆ ಪ್ರೇಕ್ಷಕರತ್ತ ಕೈ ತೋರಿ ನನಗೆ ನಾಲಿಗೆ ಬಿದ್ದು ಹೋಗಿದೆ ನನ್ನ ಗಂಡ ಡಾಕ್ಟರಿಗೆ ಫೋನ್ ಮಾಡಿ ಅಂದ್ರೆ ಮಾಡ್ತಿಲ್ಲ ಅಂತ ಸನ್ನೆ ಮಾಡ್ತಾಳೆ.

ಮಂಜು : ಅಲ್ಲ ಸ್ವಾಮಿ ಇವಳಿಗೆ ನಾಲಿಗೆ ಇದ್ದಿದ್ದರೆ ಹೀಗೆ ನನ್ನನ್ನ ಸುಮ್ನೆ ಕೂರೋಕೆ ಬಿಡ್ತಿದ್ಲಾ, ಕೂತಿದ್ರೆ ಯಾಕೆ ಕೂತಿದೀರ, ನಿಂತಿದ್ರೆ ಯಾಕೆ ನಿಂತಿದೀರ, ಮಲಗಿದ್ರೆ ಯಾಕೆ ಮಲಗಿದೀರಾ ಅಂತ ಕೊಂಕು ಮಾತಾಡ್ತಿದ್ಲು. ರಸ್ತೇಲಿ ಹೋಗುವಾಗ ಯಾಕ್ರೀ ಆ ಹುಡುಗಿ ಕಡೆ ಹಾಗೆ ಕಣ್ಣು ಬಿಟ್ಕೊಂಡು ನೋಡ್ತಿದ್ರಿ ಅಂತ ರೇಗೋಳು. ಮನೆಗೆ ಯಾರೇ ಬಂದ್ರೂ ನಾನು ಬಾಯಿ ಬಿಡೋ ಹಾಗಿಲ್ಲ. ನಿಮಗೇನು ಗೊತ್ತಾಗುತ್ತೆ ಸುಮ್ನೆ ಕೂತ್ಕೊಳ್ರೀ ಅಂತಿದ್ಲು. ಒಂದೊಂದಲ್ಲ ಸ್ವಾಮಿ ಇವಳು ನನ್ನ ಗೋಳಾಡಿಸಿರೋದು. ಇವಳಿಗೆ ನಿಜವಾಗಿ ನಾಲಿಗೆ ಬಿದ್ದು ಹೋಗಿದ್ರೆ ನನ್ನಂಥ ಪುಣ್ಯವಂತ ಈ ಪ್ರಪಂಚದಲ್ಲಿ ಇನ್ನೊಬ್ಬ ಇಲ್ಲ.

ಸುಮ : ತಲೆ ತಲೆ ಚಚ್ಚಿಕೊಂಡು ನಾಲಿಗೆ ಹೋಯ್ತಲ್ಲ ಅಂತ ಗಂಡನ ಮೇಲೆ ಸಿಕ್ಕ ಸಿಕ್ಕ ಪದಾರ್ಥಗಳನ್ನು ಎಸೆಯೋಕೆ ಷುರು ಮಾಡ್ತಾಳೆ.

ಮಂಜು : ನೋಡಿ ಸ್ವಾಮಿ ಇಷ್ಟು ದಿನ ಇವಳ ನಾಲಿಗೆ ಮಾತ್ರ ಮಾತಾಡ್ತಿತ್ತು ಇನ್ನು ಮೇಲೆ ಇವಳ ಕೈಯಿ ಕಾಲು ಎಲ್ಲ ಮಾತಾಡುತ್ವೆ.

ಸುಮ : ಗಂಡನಿಗೆ ಕೈ ಮುಗಿದು ಡಾಕ್ಟರಿಗೆ ಫೋನ್ ಮಾಡ್ರೀ ಅಂತ ಸನ್ನೆ ಮಾಡ್ತಾಳೆ. ಬೇಕಾದ್ರೆ ಕಾಲಿಗೆ ಬೀಳ್ತೀನಿ ಅಂತ ಸನ್ನೆ ಮಾಡ್ತಾಳೆ.

ಗಂಡ : ನೋಡಿ, ಇವಳನ್ನು ಮದುವೆಯಾದ ಇಷ್ಟು ವರ್ಷಕ್ಕೆ ಇವತ್ತೇ, ಇವತ್ತೇ ಇವಳು ನನಗೆ ಕೈ ಮುಗಿದಿರೋದು. ಕಾಲಿಗೆ ಬೀಳ್ತೀನಿ ಅಂತ ನಾಟಕ ಆಡ್ತಿರೋದು. ಇಷ್ಟು ವರ್ಷ ನಾನೇ ಇವಳಿಗೆ ಕೈ ಮುಗೀತಾ ಇದ್ದೆ, ಇಲ್ಲ ಮುಗಿಸ್ಕೋತಾ ಇದ್ಲು, ಇವಳು ಇನ್ನು ಮುಂದೆ ನನಗೆ ಬರೀ ಕೈ ಮುಗಿಯೋದೇನು, ಕಾಲಿಗೂ ಬೀಳಬೇಕು ಹಾಗೆ ಮಾಡ್ತಿನಿ ನೋಡ್ತಿರಿ.

ಸುಮ : ಮೊಬೈಲ್‌ನಲ್ಲಿ ನಂಬರ್ ನೋಡಿ ಡಾಕ್ಟರ ನಂಬರ್ ಸಿಕ್ತು ಅನ್ನೋ ಹಾಗೆ ಎಸ್.ಎಂ.ಎಸ್. ಮಾಡ್ತಾಳೆ.

ಮಂಜು : (ಹೆಂಡ್ತಿ ಕಡೆ ನೋಡಿ) ಡಾಕ್ಟರಿಗೆ ಫೋನ್ ಮಾಡ್ತೀನಿ ಅಂತ ಸನ್ನೆ ಮಾಡ್ತಾನೆ. (ಇನ್ನೊಂದು ಫೋನಿಂದ ನಂಬರ್ ಡಯಲ್ ಮಾಡಿ ಮಾತಾಡ್ತಾನೆ)

(ತುಂಬಾ ಖುಷಿಯಿಂದ) ಲೋ ನರಹರಿ, ನಿಂಗೊಂದು ಒಳ್ಳೆ ಸುದ್ದಿ ಕಣೋ, ನನ್ನ ಹೆಂಡ್ತಿ ನಾಲಿಗೆ ಬಿದ್ದು ಹೋಗಿದೆ. ಅವಳಿಗೆ ಮಾತಾಡೋಕೇ

ಆಗ್ತಿಲ್ಲ, ಒದ್ದಾಡ್ತಾ ಇದಾಳೆ. ಏನಾಯ್ತು ಅಂತ ಕೇಳ್ದ್ಯಾ, ಬೆಳಗ್ಗೆ ನನಗೂ ಅವಳಿಗೂ ಜಗಳ ಆಯ್ತು, ನನಗೆ ಯಾಕೋ ಸಿಟ್ಟು ಬಂತು ಯಾವತ್ತೂ ಇಲ್ಲದ ಆವೇಶ ಬಂದು ತೆಗೆದು ಒಂದು ಕೆನ್ನೆಗೆ ಕೊಟ್ಟೆ, ನನಗೆ ಇಷ್ಟೊಂದು ಧೈರ್ಯ ಹೇಗೆ ಬಂತು ಅಂತ ನನಗೇ ಆಶ್ಚರ್ಯ ಆಯ್ತು. ಇವಳು ಕೆನ್ನೆ ಹಿಡ್ಕೊಂಡು ಅಳ್ತಾ ಕೂರ್ತಾಳೆ ಅಂದ್ಕೊಂಡ್ರೆ ತೆಗೆದು ನನಗೊಂದು ಬಿಟ್ಳು ನೋಡು. ಅಲ್ಲಾಡ್ತಾ ಇದ್ದ ಹಲ್ಲು ಉದುರೇ ಹೋಯ್ತು. ಆ ಡೆಂಟಿಸ್ಟ್‌ಗೆ ಕೊಡೋ ದುಡ್ಡು ಉಳೀತು ಅನ್ನು.

(ಲೈನ್ ಕಟ್ ಮಾಡಿ ಇನ್ನೊಂದು ಸಾರಿ ಡಯಲ್ ಮಾಡಿ)

ಲೋ ಚಿದಂಬರ ನನ್ನ ಹೆಂಡ್ತಿಗೆ ನಾಲಿಗೆ ಬಿದ್ದು ಹೋಗಿದೆ ಕಣೋ, ಅವಳು ಇನ್ನು ಮೇಲೆ ಮಾತೇ ಆಡಲ್ಲ ಕಣೋ.

(ಲೈನ್ ಕಟ್ ಮಾಡಿ ಇನ್ನೊಂದು ಸಾರಿ ಡಯಲ್ ಮಾಡಿ)

ಲೋ ನಾಗೇಶ, ಇವತ್ತು ಬೆಳಗ್ಗೆಯಿಂದ ನನ್ನ ಹೆಂಡ್ತಿಗೆ ನಾಲಿಗೆ ಬಿದ್ದು ಹೋಗಿದೆ ಕಣೋ ಅವಳ ಮಾತು ಇನ್ನು ಮೇಲಿಂದ ಬಂದ್, ಏನಂದೇ ಸೆಲಬ್ರೇಟ್ ಮಾಡಬೇಕು ಅಂದ್ಯಾ, ಖಂಡಿತಾ ನಮ್ಮನೇಲೇ ಮಾಡೋಣ, ಅವಳು ಹೇಗೂ ರೇಗೋ ಹಾಗಿಲ್ವಲ್ಲ. ಕಂಗ್ರಾಜುಲೇಷನ್ಸ್ ಅಂದ್ಯಾ, ಥ್ಯಾಂಕ್ಸ್ ಅಮ್ಮಾ.

(ಲೈನ್ ಕಟ್ ಮಾಡಿ ಇನ್ನೊಂದು ಸಾರಿ ಡಯಲ್ ಮಾಡಿ)

ಶ್ರೀಪತಿ ನಿನಗೊಂದು ಗುಡ್ ನ್ಯೂಸ್, ನನ್ನ ಹೆಂಡ್ತಿಗೆ ನಾಲಿಗೆ ಬಿದ್ದುಹೋಗಿದೆ. ನೀನು ಯಾವಾಗ ಬೇಕಾದ್ರೂ ನನ್ನ ಮನೆಗೆ ಬರಬಹುದು. ನನ್ನ ಹೆಂಡ್ತಿ ನಿನಗೆ ಬೈಯೋ ಸಂದರ್ಭವೇ ಬರಲ್ಲ, ಬರ್ತೀಯಾ, ಬೇಕಾದ್ರೆ ಈಗ್ಲೇ ಬಾ.

(ಹೀಗೆ ಮಾತಾಡುವಾಗ ರಂಗದ ಮೇಲೆ ಒಂದು ಕಡೆ ಆ ಕೊನೆಗೆ ಒಂದು ಕಡೆ ಇನ್ನೊಂದು ಕೊನೆಗೆ ಮತ್ತೆ ಮಧ್ಯದಲ್ಲಿ ನಿಂತು ಮಾತಾಡಬೇಕು)

(ಕಾಲಿಂಗ್ ಬೆಲ್ ಸದ್ದಾಗುತ್ತದೆ – ಹೆಂಡ್ತಿ ಅಲರ್ಟ್ ಆಗ್ತಾಳೆ)

ಇರೋ, ಯಾವುದೋ ಪ್ರಾಣಿ ಬಂದು ವಕ್ರಿಸಿಕೊಂಡಿದೆ. ನಾನು ನಿನಗೆ ಆಮೇಲೆ ಫೋನ್ ಮಾಡ್ತೀನಿ.

ಸುಮ : (ಹೋಗಿ ಬಾಗಿಲು ತೆಗೀತಾಳೆ. ಡಾಕ್ಟರು ಒಳಗೆ ಬರ್ತಾರೆ ಮಂಜು ಅವರ ಕಡೆ ಆಶ್ಚರ್ಯದಿಂದ ನೋಡ್ತಾನೆ)

ಸುಮ : ಸಂತೋಷದಿಂದ ಬನ್ನಿ ಬನ್ನಿ ಅಂತ ಸನ್ನೆ ಮಾಡಿ ಕುರ್ಚಿ ತೋರಿಸ್ತಾಳೆ.

ಮಂಜು : ಏನ್ ಡಾಕ್ಟ್ರೆ, ಬೀದೀಲಿ ಹೋಗೋ ಮಾರಿ ಮನೆ ಹೊಕ್ತು ಅನ್ನೋ ಹಾಗೆ ಸೀದಾ ನಮ್ಮನೆಗೆ ಬಂದ್ಬಿಟ್ರಿ, ಏನು ದಾರಿ ತಪ್ಪಿ ಬಂದ್ರಾ?

ಡಾಕ್ಟರು : ರೀ, ನಾನ್ಯಾಕೆ ಮಾರಿ ಆಗ್ಲಿ, ನಾನು ಔಷಧ ಮಾರ್ತೀನಿ ಅಷ್ಟೆ. ನನಗೆ ನಿಮ್ಮ ಹೆಂಡ್ತಿಯಿಂದ ಎಸ್.ಎಂ.ಎಸ್. ಬಂತು ಅದಕ್ಕೆ ಬಂದೆ.

ಮಂಜು : ಎಸ್.ಎಂ.ಎಸ್ಸಾ! ನನ್ನ ಹೆಂಡ್ತಿ ಎಸ್.ಎಂ.ಎಸ್ಸಾ, ಏನಂತಾ ಬಂತು?

ಡಾಕ್ಟರು : (ಅಣಕಿಸುತ್ತಾ) ಆ ಏನಂತಾನಾ. ಬನ್ನಿ ಮಾರ್ನಿಂಗ್ ಷೋಗೆ ಹೋಗೋಣ ಅಂತ ಕೇಳೋದು ನೋಡು.

ಸುಮ : ಎಸ್.ಎಂ.ಎಸ್. ನಾನೇ ಕಳಿಸಿದ್ದು ಅಂತ ಸನ್ನೆ ಮಾಡ್ತಾಳೆ.

ಡಾಕ್ಟರು : ಹೌದ್ರೀ ನೋಡಿ ಇಲ್ಲಿ (ಮೊಬೈಲ್ ತೋರಿಸ್ತಾರೆ) ಈ ಮನೇಲಿ ಯಾರಿಗೆ ಏನಾಗಿದೆ?

ಮಂಜು : ಅದೂ ನನ್ನ ಹೆಂಡ್ತಿ ಯಾರಿಗೋ ಕಳಿಸೋ ಮೆಸೇಜು ಅಪ್ಪಿ ತಪ್ಪಿ ನಿಮಗೆ ಬಂದಿದೆ. ನೀವು ಹೊರಡಿ ಪರವಾಗಿಲ್ಲ

(ಅವರನ್ನು ಭುಜ ಹಿಡಿದು ಮನೆಯಿಂದ ಆಚೆಗೆ ಕಳಿಸೋಕೆ ಟ್ರೈ ಮಾಡ್ತಾನೆ – ಹೆಂಡತಿ ಅಡ್ಡ ಬಂದು ಡಾಕ್ಟರ ಮುಂದೆ ನಿಂತು ನಾಲಿಗೆ ತೋರಿಸಿ ನನಗೆ ನಾಲಿಗೆ ಬಿದ್ದು ಹೋಗಿದೆ, ಚೆಕಪ್ ಮಾಡಿ ಅಂತ ಸನ್ನೆ ಮಾಡ್ತಾಳೆ)

ಡಾಕ್ಟರು : ಏನಮ್ಮಾ, ನಾಲಿಗೆ ಪ್ರಾಬ್ಲಮ್ಮಾ, ರೀ ಇವರ ನಾಲಿಗೆಗೆ ಏನ್ರೀ ಮಾಡಿದ್ರಿ?

ಮಂಜು : ಈ ವಯಸ್ನಲ್ಲಿ ಆ ನಾಲಿಗೆಗೆ ಏನು ಮಾಡೋಕೆ ಆಗುತ್ತೆ ಡಾಕ್ಟ್ರೆ. ಇವತ್ತು ಅವಳು ಮೌನ ವ್ರತ, ನೀವು ಎಷ್ಟೇ ಕೇಳಿದ್ರೂ ಅವಳು ಮಾತಾಡೋಲ್ಲ. ನೀವು ಹೋಗಿ ಬನ್ನಿ.

ಸುಮ : ಮತ್ತೆ ಡಾಕ್ಟರ ಮುಂದೆ ಬಂದು ಅವಳ ನಾಲಿಗೆ ತೋರಿಸಿ ನನಗೆ ಮಾತಾಡೋಕೇ ಆಗ್ತಿಲ್ಲ ಅಂತ ಸನ್ನೆ ಮಾಡ್ತಾಳೆ.

ಡಾಕ್ಟರು : ಏನ್ರೀ ನಿಮ್ಮ ಹೆಂಡ್ತಿ ನಾಲಿಗೆ ಒಳ್ಳೆ ತೆಳ್ಳಗೆ ಪೀಸ್ ಮಾಡಿರೋ ಕಲ್ಲಂಗಡಿ ಹಣ್ಣಿನ ಹಾಗಿದೆ, ನೋಡಿದೋರಿಗೆ ಆಸೆ ಆಗುತ್ತಲ್ರೀ.

ಮಂಜು : ಡಾಕ್ಟ್ರೆ, ನೀವು ನನ್ನ ಹೆಂಡ್ತಿ ನಾಲಿಗೆ ನೋಡಿ ನಿಮ್ಮ ನಾಲಿಗೆ ಉದ್ದ ಬೆಳೆಸ್ತಾ ಇದೀರ. ಇದು ಚನ್ನಾಗಿರಲ್ಲ.

ಡಾಕ್ಟರು : ಏನ್ರೀ ಇದು ನಿಮ್ಮ ಹೆಂಡ್ತಿ ಮಾತಾಡೋಕೇ ಆಗ್ತಿಲ್ಲ ಅಂತ ಸನ್ನೆ ಮಾಡ್ತಿದಾರೆ ನೀವು ನೋಡಿದ್ರೆ ಹೀಗೆ ಮಾತಾಡ್ತಿದೀರ. ಏನಾಯ್ತ್ರೀ ಅವರಿಗೆ?

ಮಂಜು : ನನಗೇನೂ ಗೊತ್ತಿಲ್ಲ ಡಾಕ್ಟ್ರೆ, ಅವಳು ಯಾವಾಗಲೂ ಮಾತಾಡೋದು ಜಾಸ್ತಿ ಈಗ ಸ್ವಲ್ಪ ರೆಸ್ಟ್ ತಗೋತಾ ಇರಬಹುದು. ನೀವು ಹೋಗಿ ಬನ್ನಿ.

ಸುಮ : ಡಾಕ್ಟರ ಸ್ಟೆಥಾಸ್ಕೋಪು ತೆಗೆದು ತನ್ನ ನಾಲಿಗೆ ಮೇಲೆ ಇಟ್ಕೊಳ್ಳೋಕೆ ಹೋಗ್ತಾಳೆ.

ಡಾಕ್ಟರು : (ಅದನ್ನು ಕಿತ್ತುಕೊಂಡು) ಥೂ ತೆಗೆಯಮ್ಮ ಅದನ್ನು ಎಂಜಲು ಮಾಡಬೇಡ. ರೀ ನಿಮ್ಮ ಹೆಂಡ್ತಿಗೆ ಯಾವುದಾದರೂ ನಾಯಿ ದೆವ್ವ ಮೆಟ್ಕೊಂಡ್ತೇನ್ರೀ? ಯಾಕೇಂದ್ರೆ ನಾಲಿಗೆ ಹೊರಗೆ ಚಾಚಿಕೊಂಡೇ ಇರ್ತಾರೆ.

ಮಂಜು : (ತುಂಬಾ ಖುಷಿಯಿಂದ) ನಿಜ ಹೇಳೇ ಬಿಡ್ತೀನಿ ಡಾಕ್ಟ್ರೆ, ನನ್ನ ಹೆಂಡ್ತಿಗೆ ಬೆಳಗ್ಗೆಯಿಂದ ನಾಲಿಗೆ ಬಿದ್ದು ಹೋಗಿದೆಯಂತೆ ಹಾಗಂತ ಸನ್ನೆ ಮಾಡ್ತಿದಾಳೆ.

ಡಾಕ್ಟರು : (ಸಖತ್ ಖುಷಿಯಿಂದ ಮೈ ಕುಣಿಸಿ) ಹೌದಾ, ದಿಸೀಸ್ ಗ್ರೇಟ್ ನ್ಯೂಸ್ ಐ ಸೇ, ಹೇಗಾಯ್ತ್ರೀ? ಕೆನ್ ಯು ಎಕ್ಸ್‌ಪ್ಲೈನ್.

ಸುಮ : ಮತ್ತೆ ಡಾಕ್ಟರ ಮುಂದೆ ಬಂದು ನಿಂತು ನಾಲಿಗೆ ಚಾಚುತ್ತಾಳೆ. ಡಾಕ್ಟರು ಅವಳನ್ನು ಕುರ್ಚಿ ಮೇಲೆ ಕೂತಿರು ಅಂತ ಸನ್ನೆ ಮಾಡಿ, ಅವರೇ ಅವಳನ್ನು ಕುರ್ಚಿ ಮೇಲೆ ಕೂರಿಸುತ್ತಾರೆ.

ಡಾಕ್ಟರು : (ಮಂಜು ಭುಜದ ಮೇಲೆ ಕೈ ಹಾಕಿ) ರೀ ಮಂಜು, ಇದು ಹೇಗಾಯ್ತು ಅಂತ ಡೀಟೈಲಾಗಿ ವಿವರಿಸ್ರೀ.

ಮಂಜು : ಅದಾ ಸಾರ್. ನಿಮಗೇ ಗೊತ್ತು ನನ್ನ ಹೆಂಡತಿ ವಾಚಾಳಿ ಅಂತ.

ಡಾಕ್ಟರು : ಹೌದು, ಅವರು ನಿಮ್ಮನ್ನ ನನ್ನ ಕ್ಲಿನಿಕ್ಕಿಗೆ ಕರ್ಕೊಂಡು ಬಂದಾಗ್ಲೂ ನಿಮ್ಮನ್ನ ಮಾತಾಡೋಕೇ ಬಿಡ್ತಿರ್ಲಿಲ್ಲ. ಅದು ಊರಿಗೇ ಗೊತ್ತಿರೋ ಸಮಾಚಾರಾನೇ ಅಲ್ವಾ. ಆದ್ರೆ ಹೀಗೆ ಅವರ ಬಾಯಿ ಏಕಾಏಕಿ ಬಂದ್ ಆಗಿದ್ದು ಹೇಗೇಂತ.

ಮಂಜು : ಅದಾ ಸಾರ್, ಇವತ್ತು ಬೆಳಗ್ಗೆ ಯಾವುದೋ ಕಾರಣ ತೆಗೆದು ನನ್ನನ್ನು ಬೈಯೋಕೆ ಷುರು ಮಾಡಿದ್ಲು. ಫಾರ್ ದಿ ಫಸ್ಟ್ ಟೈಮ್ ನಾನು ಅವಳಿಗೆ ಎದುರುತ್ತರ ಕೊಟ್ಟೆ.

ಡಾಕ್ಟರು : ಅಂದ್ರೆ ಇಷ್ಟು ದಿನ ನೀವು ಸ್ವಲ್ಪ ಪಕ್ಕಕ್ಕೆ ತಿರುಕ್ಕೊಂಡು ಉತ್ರ ಕೊಡ್ತಿದ್ರಿ ಇವತ್ತು ಎದುರಿಗೇ ನಿಂತ್ಕೊಂಡು ಉತ್ತರ ಕೊಟ್ರಾ?

ಮಂಜು : ಅಯ್ಯೋ ಎದುರುತ್ತರ ಅಂದ್ರೆ ಹಾಗಲ್ಲ ಡಾಕ್ಟ್ರೆ, ಅವಳು ಮಾತಾಡಿದ್ದಕ್ಕೆ ತಿರುಗಿಸಿ ಮಾತಾಡ್ದೆ, ಎದುರುತ್ತರ ಅಂದ್ರೆ ಅದು.

ಡಾಕ್ಟರು : ಹೌದಾ, ವೆರಿಗುಡ್ ಐ ಸೇ, ಗಂಡಸ್ರು ಅಂದ್ರೆ ಅವಾಗವಾಗಾದ್ರೂ ಹೆಂಡ್ತಿಗೆ ಎದುರುತ್ತರ ಕೊಡಬೇಕು. ಹೀಗೆ ಎದುರುತ್ತರ ಕೊಡೋರು ಇನ್ನೂ ಯಾರ್ಯಾರು ಇದಾರೆ ಹೇಳ್ರೀ ಎಲ್ರನ್ನೂ ಸೇರಿಸಿ ಹೆಂಡ್ತಿಗೆ ಎದುರುತ್ತರ ಕೊಡೋ ಗಂಡಂದಿರ ಸಂಘ ಅಂತ ಒಂದು ಸಂಘ ಷುರು

ಮಾಡೇಬಿಡೋಣ. ಮುಂದೆ ಹೇಳಿ –

ಮಂಜು : ಅವಳೂ ಜೋರು ಜೋರಾಗಿ ಮಾತಾಡಿದ್ಲು. ನಾನು ಬೇಡ ಕಣೆ ಕಿರುಚ್ಬೇಡ, ನಾನು ನಿನಗೆ ಹೆದರ್ಕೊತೀನಿ ಅನ್ನೋದು ಅಕ್ಕಪಕ್ಕದ ಮನೆಯವರಿಗೆ ತಿಳಿಯೋದು ಬೇಡ ಅಂದ್ರೂ ಕೇಳಲಿಲ್ಲ.

ಡಾಕ್ಟರು : (ಎಕ್ಸೈಟ್ ಆಗಿ) ಮುಂದೆ?

ಮಂಜು : ಇವತ್ತು ಅವಳಿಗೆ ಅದೇನೋ ಆವೇಶ ಬಂದಿತ್ತು ಡಾಕ್ಟ್ರೆ, ಬಾಯಿಗೆ ಬಂದ ಹಾಗೆ ಮಾತಾಡಿದ್ಲು.

ಡಾಕ್ಟರು : ಯಾರಿಗೂ ಹೇಳಬೇಡಿ, ನನ್ನ ಹೆಂಡತಿನೂ ಹಾಗೇ ಮಾತಾಡೋದು. ನನ್ನನ್ನ ವಾಚಾಮಗೋಚರವಾಗಿ ಬೈತಾಳೆ. ನಾನು ಯಾರಿಗೂ ಹೇಳ್ಕೊಂಡಿರ್ಲಿಲ್ಲ. ಈಗ ನೀವು ಬಾಯಿ ಬಿಟ್ರಲ್ಲ ನಾನೂ ಬಾಯಿ ಬಿಟ್ಟೆ. ಇನ್ನ ಮೇಲೆ ನಾನೂ ನೀವೂ ಫ್ರೆಂಡ್ಸ್. (ಖುಷಿಯಿಂದ) ಆಮೇಲೆ?

ಮಂಜು : ನನ್ನ ಮೇಲಿನ ಸಿಟ್ಟಿಗೆ ಅಡಿಗೆ ಮನೆ ಪದಾರ್ಥನೆಲ್ಲ ಕುಕ್ತಾ ಇದ್ಲು ಡಾಕ್ಟ್ರೆ.

ಡಾಕ್ಟರು : ಥೇಟ್ ನನ್ನ ಹೆಂಡ್ತಿಯೂ ಹೀಗೇ ಮಾಡೋದು. ಅವಳಿಗೆ ನನ್ನನ್ನ ಕುಕ್ಕೋಕೆ ಆಗಲ್ಲ ಅದಿಕ್ಕೆ ಪಾತ್ರೆನ ಕುಕ್ತಾಳೆ ಮುಂದೆ.

ಮಂಜು : ನಾನು ಅವಳನ್ನು ತಡೆದೆ, ಕೈ ಹಿಡಿದೆ ಬೇಡ ಕಣೆ, ಅದೇನು ಮಾಡಬೇಕು ಹೇಳು ಮಾಡ್ತೀನಿ ಅಂದೆ. ಬೇಕಾದ್ರೆ ಕಾಲಿಗೆ ಬೇಕಾದ್ರೂ ಬೀಳ್ತೀನಿ ಅಂದೆ.

ಡಾಕ್ಟರು : ಕರೆಕ್ಟ್, ಕರೆಕ್ಟ್, ನಾನೂ ಹೀಗೇ ಅಂದಿದೀನಿ. (ಅಕ್ಕ ಪಕ್ಕ ನೋಡಿ) ನಿಮ್ಹತ್ರ ಯಾಕೆ ಮುಚ್ಚು ಮರೆ ಒಂದೆರಡು ಸಾರಿ ಕಾಲಿಗೂ ಬಿದ್ದಿದೀನಿ ಅನ್ನಿ. ಎಷ್ಟಾದ್ರೂ ನನ್ನ ಹೆಂಡ್ತಿ ಕಾಲಲ್ವ. ಸಿನಿಮಾದಲ್ಲಿ ಹೀರೋಗಳು ಹೀರೋಯಿನ್ ಕಾಲಿಗೆ ಕಿಸ್ಸೇ ಕೊಡ್ತಾರಂತೆ ಇದ್ಯಾವ ಮಹಾ. ಅಂದ ಹಾಗೆ ಈ ವಿಚಾರ ಯಾರಿಗೂ ಹೇಳಬೇಡಿ. ಮುಂದೆ?

ಮಂಜು : ನಾನು ಅವಳ ಕೈ ಹಿಡ್ಕೊಂಡ್ನಾ, ನನ್ನ ಕೈನೇ ಜೋರಾಗಿ ಕಚ್ಚಿಬಿಟ್ಲು ಅಂತೀನಿ.

ಡಾಕ್ಟರು : ಹೌದಾ, ನನ್ನ ಹೆಂಡ್ತಿನೂ ಹೀಗೇ ಮಾಡಿದ್ಲು ರೀ. ಇದೇನ್ರೀ ಎಲ್ಲರ ಹೆಂಡ್ತಿರೂ ಒಂದೇ ತರಾನಾ?

ಮಂಜು : ಇರಬಹುದೇನೋ ಸಾರ್. ನನಗಂತೂ ಅನುಭವವಿಲ್ಲ, ನನಗೆ ನನ್ನ ಹೆಂಡ್ತಿ ಒಬ್ಬಳ ಜೊತೆ ಇದ್ದೇ ಅನುಭವ. ನಿಮ್ಮ ಅನುಭವ ಹೇಗೋ ಏನೋ ನಂಗೊತ್ತಿಲ್ಲ.

ಡಾಕ್ಟರು : ರೀ ಏನ್ರೀ ಏನೇನೋ ಆಸೆ ಹುಟ್ಟಿಸೋ ಹಾಗೆ ಮಾತಾಡ್ತೀರಾ. (ಕೈ ತೋರಿಸಿ) ಇಲ್ನೋಡಿ ಈ ಗುರುತು. ನನಗೂ ನನ್ನ ಹೆಂಡ್ತಿಗೂ ಒಂದಿನ

ಜಗಳ ಆದಾಗ ಅವಳೂ ನನ್ನ ಕೈನ ಬಲವಾಗಿ ಕಚ್ಚಿಬಿಟ್ಟಿದ್ಲು ಇದು ನನ್ನ ಹೆಂಡ್ತಿ ಕಚ್ಚಿರೋ ಗುರುತು. ಯಾರಾದ್ರೂ ಕೇಳಿದ್ರೆ ಆಕ್ಸಿಡೆಂಟಲ್ಲಿ ಆಗಿದ್ದು ಅಂದ್ಬಿಡ್ತಿನಿ. ಆಮೇಲೆ?

ಮಂಜು : ನಾನು ತಕ್ಷಣ ಕೈ ಹಿಂದಕ್ಕೆ ತಗೊಂಡೆ. ತುಂಬಾ ನೋವಾಗ್ತಾ ಇತ್ತು. ಇದ್ಯಾಕೋ ಅತಿಯಾಯ್ತು ಅನಿಸ್ತು. ತಡ್ಕೊಳೋಷ್ಟೂ ತಡ್ಕೊಂಡೆ, ಎಷ್ಟಾದ್ರೂ ನಾನೂ ಗಂಡಸಲ್ವ ಡಾಕ್ಟ್ರೆ ಅದಿಕ್ಕೆ ನನಗೂ ಕೋಪ ಬಂದು

ಡಾಕ್ಟರು : ಏನು ಮಾಡಿದ್ರಿ (ಹತ್ತಿರ ಬಂದು ಎಕ್ಸೈಟ್ ಆಗಿ)

ಮಂಜು : ತೆಗೆದು ಒಂದು ಬಿಟ್ಟೆ ನೋಡಿ ಹೋಗಿ ಮೂಲೆಗೆ ಬಿದ್ಲು. ನಾನು ಎಲ್ಲಾದ್ರೂ ಬಿದ್ದು ಸಾಯಿ ಅಂತ ಆಚೆ ಬಂದೆ. ಖುಷಿಯಿಂದ ಇದ್ದೆ. ಪೇಪರ್ ಓದ್ದೆ ಟಿವಿ ನೋಡ್ದೆ, ಈಗ ಅರ್ಧಗಂಟೆ ಮುಂಚೆ ಬಂದು ನಾಲಿಗೆ ತೋರಿಸಿ ನನಗೆ ನಾಲಿಗೆ ಬಿದ್ದು ಹೋಗಿದೆ ಅಂತ ಸನ್ನೆ ಮಾಡ್ತಿದ್ಲು.

ಡಾಕ್ಟರು : ಹೌದಾ, ನೀವು ಹೊಡೆದ ಒಂದೇ ಏಟಿಗೆ ನಾಲಿಗೆ ಬಿದ್ದೇ ಹೋಯ್ತಾ?

ಮಂಜು : ಹೌದೂಂತೀನಿ –

ಡಾಕ್ಟರು : ಅದೆಂಥಾ ಹೊಡೆತಾರೀ, ಎಲ್ಲಿಗೆ ಹೊಡೆದ್ರಿ?

ಮಂಜು : ಕೆನ್ನೆಗೆ ಡಾಕ್ಟ್ರೆ, ಅದು ಸ್ವಲ್ಪ ಕಿವಿ ಹತ್ರ ಬಿತ್ತು ಅಂತ ಕಾಣುತ್ತೆ.

ಡಾಕ್ಟರು : ಹೇಗೆ ಹೊಡೆದ್ರಿ?

ಮಂಜು : ಹೇಗೇಂದ್ರೆ ಏನು ಹೇಳ್ಲಿ, ನಿಮಗೆ ಹೊಡೆದು ತೋರಿಸ್ಲಾ?

ಡಾಕ್ಟರು : ಹಾಗಲ್ರೀ ಸನ್ನೆ ಮಾಡಿ ತೋರಿಸ್ರೀ ನಂಗೆ ಗೊತ್ತಾಗುತ್ತೆ.

ಮಂಜು : (ಡಾಕ್ಟರನ್ನು ಸರಿಯಾಗಿ ನಿಲ್ಲಿಸಿ, ಹೆಂಡ್ತಿಗೆ ಹೇಗೆ ಹೊಡೆದೆ ಅಂತ ಸನ್ನೆ ಮಾಡಿ ತೋರಿಸ್ತಾನೆ) ಹೀಗೆ ಹೊಡೆದೆ ಡಾಕ್ಟ್ರೇ.

ಡಾಕ್ಟರು : ಅಂದ್ರೆ ಗಂಡ ಆದೋನು ಹೆಂಡ್ತಿಗೆ ಇಷ್ಟು ಜೋರಾಗಿ ಹೊಡೆದ್ರೆ ಅವರು ಅಷ್ಟು ದೂರ ಹೋಗಿ ಬೀಳ್ತಾರೆ. ಆಗ ಅವರ ನಾಲಿಗೆ ಬಿದ್ದು ಹೋಗುತ್ತೆ ಅಂದ ಹಾಗಾಯ್ತು.

ಮಂಜು : ಡಾಕ್ಟರಾಗಿ ನಿಮಗೇ ಈ ವಿಚಾರ ಗೊತ್ತಿಲ್ವ. ಸರಿ, ನೀವು ಟ್ರೀಟ್‌ಮೆಂಟ್ ಕೊಟ್ರೆ ನನ್ನ ಹೆಂಡ್ತಿಗೆ ಮತ್ತೆ ಮಾತು ಬಂದೇಬಿಡುತ್ತಾ ಡಾಕ್ಟ್ರೆ.

ಡಾಕ್ಟರು : ಅದು ಗಂಡನ ಮೇಲೆ ಡಿಪೆಂಡ್ ಆಗುತ್ತೆ. ಗಂಡ ಮತ್ತೆ ವಾಪಸ್ ಬರ್ಲಿ ಅಂದ್ರೆ ಬರುತ್ತೆ, ಬೇಡ ಅಂದ್ರೆ ಹಾಗೇ ಇರುತ್ತೆ. (ತಮ್ಮ ಪದಾರ್ಥ ತಗೊಂಡು ಹೊರಡ್ತಾರೆ)

ಮಂಜು : ಯಾಕೆ ಡಾಕ್ಟ್ರೆ, ನನ್ನ ಹೆಂಡ್ತಿಗೆ ಟ್ರೀಟ್ಮೆಂಟ್ ಕೊಡಲ್ವಾ, ಹೊರಟೇಬಿಟ್ರಲ್ಲ?

ಹೆಂಡತಿ : ಅಡ್ಡ ಬಂದು ಮತ್ತೆ ನನ್ನ ನಾಲಿಗೆ ಸರಿ ಮಾಡಿ ಅಂತ ಸನ್ನೆ ಮಾಡ್ತಾಳೆ.

(ಡಾಕ್ಟರು ಹೊರಟೇ ಹೋಗ್ತಾರೆ)

ಮಂಜು : ಇದೆಂಥಾ ಡಾಕ್ಟರಪ್ಪಾ, ಬಂದಿದ್ದು ಟ್ರೀಟ್ಮೆಂಟಿಗೆ ಆದ್ರೆ ಎಲ್ಲಾ ಡೀಟೈಲ್ಸೂ ತಗೊಂಡು ಹೊರಟೇ ಹೋದ್ರು.

ಸುಮ : ಹೋಗಿ ಡಾಕ್ಟ್ರನ್ನು ಕರ್ಕೊಂಡು ಬನ್ನಿ ಅಂತ ಸನ್ನೆ ಮಾಡ್ತಾಳೆ.

ಮಂಜು : (ಬೇಜಾರಿಂದ) ಅಯ್ಯೋ ಇರೇ ಸ್ವಲ್ಪ ಇಂಥಾ ಸಂತೋಷನ ಹೇಗೆ ಎಂಜಾಯ್ ಮಾಡೋಣ ಅಂತ ನಾನು ಯೋಚ್ನೆಮಾಡ್ತಿದ್ರೆ. ಇವಳೊಬ್ಳು.

ಡಾಕ್ಟರು : (ಮತ್ತೆ ಬರ್ತಾರೆ)

ಮಂಜು : ಏನ್ ಡಾಕ್ಟ್ರೆ ಏನಾದ್ರೂ ಮರೆತು ಹೋಗಿದ್ರಾ. ಈಗ್ಲಾದ್ರೂ ನನ್ನ ಹೆಂಡ್ತಿನ ಟ್ರೀಟ್ ಮಾಡ್ತೀರಾ ಹೇಗೆ?

ಡಾಕ್ಟರು : ಎಲ್ಲಾದ್ರೂ ಉಂಟಾ, ನಿಮಗೆ ಆಗ್ತಿರೋ ಸಂತೋಷನ ಕಿತ್ಕೊಂಡು ನಾನು ಯಾವ ನರಕಕ್ಕೆ ಹೋಗ್ಲಿ. ಇಂದಿನಿಂದ ನಿಮಗೆ ಸುಖದ ದಿನಗಳು ಬಂತು ಅಂದ್ಕೊಳಿ. ಎಂಜಾಯ್ ಯುವರ್ ಲೈಫ್ ಐ ಸೇ.

ಮಂಜು : ಅಲ್ಲಾ ಡಾಕ್ಟ್ರೆ, ಮತ್ತೆ ನನ್ನತ್ರ ಎಲ್ಲಾ ಡೀಟೈಲ್ಸೂ ಯಾಕೆ ತಗೊಂಡ್ರಿ?

ಡಾಕ್ಟರು : ಯಾಕೇಂದ್ರೆ ನನ್ನ ಹೆಂಡ್ತಿನೂ ನಿಮ್ಮ ಹೆಂಡ್ತಿ ತದ್ರೂಪು, ನನ್ನನ್ನ ಗೋಳು ಹುಯ್ಕೊತಾ ಇರ್ತಾಳೇ, ಬಾಯಿಗೆ ಬಂದ ಹಾಗೆ ಬೈತಾನೇ ಇರ್ತಾಳೆ. ನೀವು ನಿಮ್ಮ ಹೆಂಡ್ತಿಗೆ ಹೇಗೆ ಹೊಡೆದ್ರಿ, ಅದರಿಂದ ಅವಳಿಗೆ ಹೇಗೆ ನಾಲಿಗೆ ಬಿದ್ದು ಹೋಯ್ತು ಅಂತ ತಿಳ್ಕೊಂಡು

ಮಂಜು : ಹೂ. ತಿಳ್ಕೊಂಡು....

ಡಾಕ್ಟರು : ಹೋಗಿ ನಾನು ನನ್ನ ಹೆಂಡ್ತಿಗೂ ಹೊಡೆದು, ಅವಳಿಗೂ ಮಾತು ನಿಂತು ಹೋಗೋ ಹಾಗೆ ಮಾಡಿ ನಾನೂ ಇನ್ನು ಮುಂದೆ ಸುಖವಾಗಿರೋಣ ಅಂತ. ಇದೋ ಹೊರಟೆ ಈಗ ಹೋಗಿ ನನ್ನ ಹೆಂಡ್ತಿ ಹತ್ರ ನಾನೇ ಜಗಳ ತೆಗೆದು ನೀನು ನಿಮ್ಮ ಹೆಂಡ್ತಿಗೆ ಹೊಡೆದ ಹಾಗೆ ನಾನೂ ನನ್ನ ಹೆಂಡ್ತಿಗೆ ಹೊಡಿತೀನಿ ಬರ್ಲಾ. ಬಾಯ್

ಮಂಜು : ಎಲಾ ಡಾಕ್ಟರೇ, (ಅವರು ಹೋದ ಕಡೆ ಕುತೂಹಲದಿಂದ ನೋಡ್ತಾನೆ)

ಹೆಂಡತಿ : ಡಾಕ್ಟರು ಹೋದ ಕಡೆ ನಾಲಿಗೆ ಚಾಚಿಕೊಂಡು ಹೋಗ್ತಾಳೆ.

# "ಹಾಗಾದ್ರೆ ...... ಜೀವನ ಅಂದರೇನು?"

• ವೈ.ವಿ. ಗುಂಡೂರಾವ್

**ಅಂ**ತ ಕೇಳೀ. ಒಬ್ಬೊಬ್ಬರು ಒಂದೊಂದು ರೀತಿ ಉತ್ತರಿಸುತ್ತಾರೆ. common ಆಗಿ ಒಂದು definite definition ಸಿಗೋದು ಕಷ್ಟ 'ಜೀವನ ಅಂದರೇನು' ಅನ್ನುವ ಪ್ರಶ್ನೆಗೆ.

ಕೆಲವರಿಗೆ ದುಡ್ಡೇ ದೊಡ್ಡಪ್ಪ,
ಮತ್ತೆ ಕೆಲವರಿಗೆ ವಿದ್ಯೆ ಅದರಪ್ಪ....
ಕೆಲವರಿಗೆ ಪ್ರೀತಿನೇ ಆ ದ್ಯಾವ್ರು ತಂದ ಆಸ್ತಿ,
ಮತ್ತೆ ಕೆಲವರಿಗೆ ಆಸ್ತಿ ಮಾಡೋದರಲ್ಲೇ ಆಸಕ್ತಿ....
ಕೆಲವರಿಗೆ ಇಹಲೋಕವೇ ಸರ್ವಸ್ವ,
ಮತ್ತೆ ಕೆಲವರಿಗೆ ಪರಲೋಕದ್ದೇ ಚಿಂತೆ....
ಕೆಲವರಿಗೆ ಜೀವನ ನಾಲ್ಕು ದಿನದ ಸಂತೆ,
ಕೆಲವರ ಪ್ರಕಾರ ಅಷ್ಟರಲ್ಲೇ enjoy ಮಾಡಬೇಕಂತೆ....
ಕೆಲವರು ಅಧಿಕಾರಕ್ಕಾಗಿ ಏನು ಬೇಕಾದರೂ ಮಾಡಬಲ್ಲರು,
ಮತ್ತೆ ಕೆಲವರು ಏನು ಮಾಡಿದರೂ ಅಧಿಕಾರ ಒಲ್ಲರು....

......... ಹಾಗೆ ನೋಡಿದರೆ ಬದುಕು ಬಹಳ ಸಂಕೀರ್ಣ ಅನ್ನಿಸುತ್ತೆ. ಅಲ್ಲವಾ? ಹೌದಾ? ನಿಮಗೂ ಹಾಗೇ ಅನ್ನಿಸುತ್ತಾ? ಇಲ್ಲವಾ? ನಿಮಗೆ ಹಾಗೆ ಅನ್ನಿಸೋದಿಲ್ಲವಾ? ನನ್ನನ್ನೇನೋ ಈ ಎಲ್ಲಾ ವಿಷಯಗಳ ಕುರಿತ ಕೆಲವು ಪ್ರಶ್ನೆಗಳು ಕಾಡುತ್ತಾ ಇವೆ. ಈ ಪ್ರಶ್ನೆಗಳಿಗೆ ನಿಮಗೆ pose ಮಾಡುತೀನಿ. ಸ್ವಲ್ಪ ತಲೆ ಕೆರೆದುಕೊಂಡು ಉತ್ತರ ಕೊಡುವ ಕೃಪೆ ಮಾಡಿ Please......

✓ ಬಾಳೋದು, ಬದುಕೋದು – ಇವೆರಡರ ವ್ಯತ್ಯಾಸ ಸ್ವಲ್ಪ ತಿಳಿಸಿಕೊಡುತ್ತೀರಾ?

✓ ಇರೋವಷ್ಟು ದಿನ ಖುಷಿಯಾಗಿರಬೇಕು ಸ್ವಾಮಿ! ಸತ್ತಮೇಲೆ ಏನಾಗುತ್ತೋ ಯಾರಿಗೊತ್ತು. ಮುಂದಿನದು ಯೋಚನೆ ಮಾಡಿ ಯಾರು ಉದ್ಧಾರ ಆಗಿದ್ದಾರೆ ಹೇಳಿ? ಮೇಲೆ ಹೋಗಿ, ಯಾರೂ ಅಲ್ಲಿ ಏನಿದೆ, ಹೇಗಿದೆ ಅಂತ ಹೇಳಿಲ್ಲ, ಆದ್ದರಿಂದ

"ಸಾಲ ಮಾಡಿ ತುಪ್ಪ ತಿನ್ನೋ ಬೆಪ್ಪ" ಅಂತಾರೆ ಕೆಲವರು. ಈ policyನ ಪಾಲಿಸಬೇಕು ಅನ್ನುವವರ ಬಗ್ಗೆ ಏನನ್ನಿಸುತ್ತೆ?

- ✓ ನಮ್ಮ ಬದುಕು ಮುಖ್ಯ ಇವರೇ... ಸ್ವಾರ್ಥ ಅನ್ನಬಹುದು ನೀವು. ಆದರೆ ಇನ್ನೊಬ್ಬರು ನಾವು ಕಷ್ಟದಲ್ಲಿದ್ದಾಗ ಆಗುತ್ತಾರೆ ಅನ್ನುವ ಗ್ಯಾರಂಟಿ ಯಾರು ಕೊಡುತ್ತಾರೆ? ಆದ್ದರಿಂದ ನಮ್ಮಷ್ಟಕ್ ನಾವಾಗಿ, ಇದ್ದದ್ದರಲ್ಲಿ ಹಾಯಾಗಿ ಬದುಕೋದೇ ಪ್ರಪಂಚ. ಸರೀನಾ ಸಾರ್ ಈ Theory?
- ✓ ಪ್ರೀತಿ, ಪ್ರೇಮಕ್ಕೋಸ್ಕರ ಏನೇನೋ ಕಳಕೊಂಡವರು ಇದ್ದಾರೆ (ಮಾನ, ಮರ್ಯಾದೆ ಕೂಡ). ಅದಕ್ಕೋಸ್ಕರ ಯುದ್ಧಗಳೇ ಆಗಿಹೋಗಿವೆ ನಮ್ಮ ಚರಿತ್ರೆಯಲ್ಲಿ. ಈ ಪ್ರೀತಿ, ಪ್ರೇಮ ಜೀವನಕ್ಕೆ ಅನಿವಾರ್ಯವೆ? ಅನಿವಾರ್ಯವಾದರೆ, ಅದರ ಮಿತಿ ಎಷ್ಟಿರಬೇಕು?
- ✓ ಕೆಲವರು ತಾವು ನಂಬಿರುವ ತತ್ವಗಳಿಗೋಸ್ಕರ ಪ್ರಾಣಾನಾದರೂ ಬಿಡೋದಕ್ಕೆ ಸಿದ್ಧವಾಗಿರುತ್ತಾರೆ, No compromise at all at any 'cost'. ಮತ್ತೆ ಕೆಲವರು ಯಾವ ತತ್ವಗಳಿಗೂ ಅಂಟಿಕೊಂಡಿರೋದಿಲ್ಲ, ಜೀವನ ಬಂದ ಹಾಗೆ receive ಮಾಡುತ್ತಾ ಇರುತ್ತಾರೆ. ಯಾವುದು ಸರಿ?
- ✓ ಹಣ, ಅಧಿಕಾರ ಮುಖ್ಯವೇ ಅಲ್ಲ ಕೆಲವರಿಗೆ. ಮೋಸ, ಅನ್ಯಾಯದಿಂದ ಪಡೆಯೋದಿರಲಿ, ನ್ಯಾಯವಾಗಿ ಬರೋದರ ಬಗ್ಗೇನೂ ತಲೆ ಕೆಡಿಸಿಕೊಳ್ಳೋದಿಲ್ಲ. ಕೆಲವರು ಇನ್ನೊಂದು ಕಡೆ ಅದಕ್ಕಾಗಿ ಏನು ಬೇಕಾದರೂ ಮಾಡೋದಕ್ಕೆ ಸಿದ್ಧವಾಗಿರೋರು. ಇಂಥವರೂ ನಮ್ಮ ಕಣ್ಣ ಮುಂದೆ ಇದ್ದಾರೆ. ಇವೆರೆಡರ balance ಮಾಡೋದು ಹೇಗೆ?
- ✓ 'ಅಡಿ ಜಾರಿ ಬೀಳುವುದು, ತಡವಿಕೊಂಡೇಳುವುದು, ಕಡುಬ ತಿಂಬುವುದು, ಕಹಿ ಮದ್ದು ಕುಡಿಯುವುದು, ದುಡುಕಿ ಮತಿ ತಪ್ಪುವುದು, ತಪ್ಪನ್ನೊಪ್ಪೆನ್ನುವುದು, ಬದುಕೆಂಬುದಿದು ತಾನೆ ಮಂಕುತಿಮ್ಮ' ಅಂದರು. ಯಾಕೆ ಮನುಷ್ಯ ಹಾಗೆ ಮಾಡುತ್ತಾನೆ? ಯಾವುದು ಅವನನ್ನ ಅದಕ್ಕೆ ಪ್ರೇರೇಪಿಸುತ್ತದೆ?
- ✓ ಕೆಲವರಿಗೆ ಇಹಲೋಕವೇ ಎಲ್ಲಾ. 'ಇಲ್ಲೇ ಸ್ವರ್ಗ, ಇಲ್ಲೇ ನರಕ, ಮೇಲೇನಿಲ್ಲ ಸುಳ್ಳು' ಅಂತ ಹಾಡ್ತಾ ಇರತಾರೆ. ಇನ್ನು ಕೆಲವರು 'ಪುಣ್ಯ ಮಾಡಿದರೆ ಸ್ವರ್ಗ ಸಿಗುತ್ತೆ, ಪಾಪ ಮಾಡಿದರೆ ನರಕ'ಅಂತ ಆಡ್ತಾ ಇರತಾರೆ. ಇವೆರಡನ್ನೂ ಮೀರಿದರೆ ಮೋಕ್ಷ ಅಂತ ಬೇರೆ ಆಸೆ ತೋರಿಸುತ್ತಾರೆ. ಈಗಿನ ಕೆಲ ಯುವಕರಿಗೆ ಇದರ ಬಗ್ಗೆ ಸ್ಪಷ್ಟೀಕರಣ ಬೇಕಂತೆ. ಏನು ಹೇಳಬಹುದು ಅವರಿಗೆ?
- ✓ ಮೊನ್ನೆ ಒಂದು ಯುವ ಸಮ್ಮೇಳನದಲ್ಲಿ ಒಂದು ಮಾತು ಬಂತು. ಜೀವನ ಅಂದರೆ ಬರೀ confusion. ಒಬ್ಬೊಬ್ಬರು ಒಂದೊಂದು ರೀತಿ ವ್ಯಾಖ್ಯಾನಿಸುತ್ತಾರೆ ಅವರವರ

ಮೂಗಿನ ನೇರಕ್ಕೆ. ಬರೀ ಗೊಂದಲ create ಮಾಡುತ್ತಾರೆ ನಮ್ಮ ಹಿಂದಿನವರು. ಬರೀ ಗೋಜಲು ಗೋಜಲು. Today's youth are in cross roads. ನಿಮಗೇನನ್ನಿಸುತ್ತೆ?

- ✓ ಪ್ರತಿಯೊಬ್ಬರೂ ಅವರವರ ಜೀವನಾನ ತಮಗೆ ಬೇಕಾದ ರೀತಿಯಲ್ಲಿ ರೂಪಿಸಿಕೊಳ್ಳಬಹುದಾ ಇಲ್ಲ, ಎಲ್ಲ pre-determined ಆ?
- ✓ ದೇವರ ಅಸ್ತಿತ್ವದ ಬಗ್ಗೆ ಅನೇಕ ವಾದಗಳಿವೆ. ನಂಬಿದರೆ dependency ಜಾಸ್ತಿ ಆಗುತ್ತೆ. ನಂಬದೆ ಇರೋಣ ಅಂದರೆ ಆತ್ಮ ವಿಶ್ವಾಸದ ಕೊರತೆ. Practical ಆಗಿ ಯೋಚಿಸಿದರೆ ಯಾವ ದಾರಿ ಒಳ್ಳೆಯದು?
- ✓ 'ಹತ್ತಿರವಿದ್ದೂ ದೂರ ನಿಲ್ಲುವೆವು ನಮ್ಮ ಅಹಮ್ಮಿನ ಕೋಟೆಯಲಿ' ಅಂದರು ಕವಿಗಳು. ಹೇಗೆ ಈ ಅಹಮ್ಮಿನ ಕೋಟೆಯಿಂದ ಆಚೆ ಬರುವುದು?
- ✓ People are meant to be loved. Things are meant to be used. But now-a-days people are being used and things are being loved ಅನ್ನುವ ಹಾಗಾಗಿದೆ. ಯಾಕೆ ಭಾವನೆಗಳಿಗೆ ಬೆಲೇನೇ ಇಲ್ಲ? ನಿರ್ಜೀವ ವಸ್ತುಗಳ ಮೇಲೆ ಮೋಹಕ್ಕೆ internal ಕಾರಣನೋ ಅಥವಾ externalಓ?
- ✓ ಕೆಲವರಿಗೆ ಕೆಲವು ಸ್ವಭಾವ ಇರುತ್ತೆ. Mostly negative. ಬದಲಾವಣೆ ಮಾಡಿಕೊಳ್ಳೋದಕ್ಕೆ either ಇಷ್ಟ ಪಡಲ್ಲ or ಸಾಧ್ಯವಿಲ್ಲ. "ನೋಡಿ ಸ್ವಾಮಿ! ನಾವಿರೋದೇ ಹೀಗೆ, ಏನು ಬೇಕಾದರೂ ಮಾಡಿಕೊಳ್ಳಿ" ಅಂತಾರೆ. ಏನು ಮಾಡಿಕೊಳ್ಳಬಹುದು ನಾವು ಅಥವಾ ಅವರು?
- ✓ ಹುಟ್ಟುಗುಣ ಸುಟ್ಟರೂ ಹೋಗಲ್ಲ ಅಂತ ಒಂದು ಗಾದೆ. ಹುಟ್ಟುಗುಣ ಅಂದರೇನು? ಯಾವುದು ಹುಟ್ಟುಗುಣ? ಎಲ್ಲ ಮನುಷ್ಯರೂ ಒಂದೇ ರೀತಿ ಹುಟ್ಟುತ್ತಾರೆ. ಯಾವ ಗುಣನೂ ದೋಷನೂ ಬಂದಿರಲ್ಲ ಅಲ್ಲವಾ ಹುಟ್ಟುವಾಗ? ಮತ್ತೆ ಯಾಕೆ ಆ ಮಾತಿದೆ? ಇದಕ್ಕೆ ಬೇರೆ ಏನಾದರೂ ಅರ್ಥ ಇದೆಯಾ?
- ✓ ಜೀವನ ನೋಡುವ ರೀತಿ ಹೇಗಿರಬೇಕು?
- ✓ ನಮ್ಮಲ್ಲಿರುವ ಅನೇಕ confusionಗಳನ್ನು clear ಮಾಡಿಕೊಳ್ಳೋದು ಹೇಗೆ?
- ✓ ನಮ್ಮ ವ್ಯಕ್ತಿತ್ವದ ಬೆಳವಣಿಗೆ ಹೇಗೆ ಮಾಡಿಕೊಳ್ಳಬೇಕು? ನಮ್ಮ ಏಳಿಗೆಗೆ ನಾವೇ ಶಿಲ್ಪಿ ಆಗುವುದು ಹೇಗೆ?

.........ಈ ಎಲ್ಲ ಪ್ರಶ್ನೆಗಳಿಗೆ ತಿಳಿದೂ ಉತ್ತರ ಹೇಳದಿದ್ದರೆ – ನಿಮಗೆ ನನ್ನ ಮೇಲೆ ಕೋಪ ಅಂತ ಅರ್ಥ.

# ಡಾಕುವಿನ ಕವನ ಪ್ರಲಾಪ !

• ಡಾ।। ವಸಂತ ಅ. ಕುಲಕರ್ಣಿ. ಎಂ.ಡಿ.

ಧಾರವಾಡ ಸಾಂಸ್ಕೃತಿಕ ರಾಜಧಾನಿ ಎಂದು ಎಲ್ಲರಿಗೂ ಗೊತ್ತಿದ್ದ ಮಾತು. ಕುರಚಲ ಗಡ್ಡ, ಎಣ್ಣೆ ಕಾಣದ ತಲೆಗೂದಲು – ಪಾಯಜಾಮಾ ಕುರ್ತಾ ಹಾಗೂ ಮೇಲೊಂದು ಜಾಕೀಟು ಧರಿಸಿದ ವ್ಯಕ್ತಿ ಬಗಲಿಗೊಂದು ಶಬನಮ್ ಬ್ಯಾಗು ನೇತಾಡುವಿಕೆ – ಅದರಲ್ಲಿ ಕೆಲ ಹಾಳೆಗಳು – ಪುಸ್ತಕಗಳು – ಇವ ಕವಿಯೆಂದೇ ಗುರುತಿಸಬಹುದು. ರಸ್ತೆಯಲ್ಲಿ ನಡೆಯುವಾಗ ಬಾಯಿ ತುಂಬ ಎಲೆ ಅಡಿಕೆ ಹಾಕಿಕೊಂಡು ಗುಣಗುಣಿಸುತ್ತಿರುವವನು ಗಾಯಕನೆಂದೇ ಯಾರಾದರೂ ಹೇಳಬಹುದು – ಇದೊಂದು ಧಾರವಾಡದ 60ರ ದಶಕದ ಚಿತ್ರ! ಮೂರು ದಶಕಗಳ ಹಿಂದಿನ ಮಾತು. ಒಂದು ಕಲ್ಲನ್ನು ಎಸೆದರೆ ಅದು ಕವಿಗೆ ಬಡಿಯುವದು ಇಲ್ಲವೆ ಗಾಯಕನಿಗೆ ತಾಕುವದು. ಆವಾಗ್ಗೆ ಅಂದರೆ ಬೇಂದ್ರೆ ಯುಗದ ಪ್ರಸಿದ್ಧ ಮಾತು. ಸಾಧನಕೇರಿಯ ಶ್ರೀ ಮಾತಾದಲ್ಲಿ ನುಡಿಗಾರುಡಿಗನ ಕಂಚಿನ ಕಂಠದ ಓತಪ್ರೋತ ಮಾತೇ – ಮಾತು! ಅದೊಂದು ವಾಗ್ವೃಷ್ಠಿ, ಪಕ್ಕದ ಮನೆಯಲ್ಲಿ ಹಿರಿಯ ಸಂಶೋಧಕ ಶಂಬಾ ಹಿಂದುಗಡೆಯಲ್ಲಿ ಕರ್ನಾಟಕ ಕುಲಪುರೋಹಿತ ಆಲೂರವೆಂಕಟರಾಯರ ಮನೆ – ನಂತರ ಬರುವದು. ಆಕಾಶವಾಣಿ ಪೇಟೆ ಸೇರಿದಾಗ 'ದ.ಬಾ.ಕು.' ಅವರ ಪುಸ್ತಕದ ಅಂಗಡಿ – ಸಾಹಿತ್ಯದ ಚಾವಡಿ – ನಂತರ ಬರುವದು ಮನೋಹರ ಗ್ರಂಥಮಾಲೆಯ 'ಜಿಬಿ'ಯವರ ಅಟ್ಟ – ಸಾಹಿತ್ಯಧಾಮ – ನಂತರ ಬಾಲಚಂದ್ರ ಘಾಣೇಕರರ ಸಮಾಜ ಪುಸ್ತಕಾಲಯ – ಅಲ್ಲದೆ ಬೆಟಗೇರಿ.

ಕೃಷ್ಣಶರ್ಮರ 'ಜಯಂತಿ' ಕಚೇರಿಯ ಅಟ್ಟ – ಇವೆಲ್ಲ ನವನವೀನ ಸಾಹಿತ್ಯ ನಿರ್ಮಾಣದ ಆಲಯಗಳು. ಸಾರಸ್ವತಪುರ ಗುಡ್ಡ ಹತ್ತಿದಾಗ ನಾದ ಝೇಂಕಾರ ಯೋಗಿ ಮಲ್ಲಿಕಾರ್ಜುನ ಮನ್ಸೂರ್, ಮಾಳಮಡ್ಡಿಯತ್ತ ಹೆಜ್ಜೆ ಹಾಕಿದಾಗ ಸಿತಾರವಾದಕ ಉಸ್ತಾದ ಬಾಲೆಖಾನ್, ನೂರಾರು ಶಿಷ್ಯವರ್ಗ ನಿರ್ಮಿಸಿದ ಬಸವರಾಜ ರಾಜಗುರು – ಕಲ್ಯಾಣನಗರದಲ್ಲಿ ಸಂಗಮೇಶ್ವರ ಗುರವ ಒಂದೇ ಎರಡೇ ಸಂಗೀತಶಾರದೆ ಒಡಮುರಿದು ಬಿದ್ದಿರುವ ಪವಿತ್ರ ತಾಣ ಅಷ್ಟೇ. ಏಕೆ ಹಿರಿಯರು ಹೇಳುವ ಮಾತು ಧಾರವಾಡದ ಮರವೊಂದರಲ್ಲಿ ಕುಳಿತ ಪಕ್ಷಿಗಳು ಕೂಡ ಮಾತನಾಡುವದು ಅಪ್ಪಟ ಕನ್ನಡ – ಇಂಚರವೂ ಕನ್ನಡದಲ್ಲಿ ಆದರೆ ಈಗ ಧಾರವಾಡಕ್ಕೂ ಹೈಫೈ ಸಂಸ್ಕೃತಿ ಪ್ರವೇಶಿಸಿದೆ. ನಮ್ಮ 'ಡಾಕು' ಹುಬ್ಬಳ್ಳಿ ಮೆಡಿಕಲ್ ಕಾಲೇಜಿಕ್ಕೆ

ಸೇರಿದಾಗ ಒಂದು ವರುಷದ ಮಟ್ಟಿಗೆ ಧಾರವಾಡದಲ್ಲಿ ವಾಸವಾಗಿದ್ದ. ಆವಾಗ್ಗೆ 'ಕವಿ'ಯಾಗಬೇಕೆಂಬ ಹಂಬಲ ಮೊಳಕೆಯೊಡೆಯಿತು. ವರಕವಿಗಳ ಸಂಪರ್ಕ ಬಂದಾಗಲಂತೂ ಹಂಬಲ ಗಿಡವಾಗಿ ಬೆಳೆಯಿತು. ಕವನಗಳನ್ನು ಬರೆದದ್ದೇ ಬರದದ್ದು 'ಮುದ್ದಾಮಕವಿಗೆ' ವಿಷಯಗಳೇ ಉಳಿಯಲಿಲ್ಲ. ಪ್ರೇಮದಿಂದ ಆರಂಭವಾಗಿ ಪರಿಣಯದವರೆಗೂ ಕವನಗಳ ರಾಶಿ ಬೆಳೆಯುತ್ತಲೇ ಇತ್ತು. ಪ್ರಾಸದ ಹ್ರಾಸವಾಗಿ ಕವನಗಳು ಅರೆಬೆಂದ ಸ್ಥಿತಿಯಲ್ಲಿ ಹಲವಾರು ಅರ್ಥಗಳನ್ನು ಕೊಡಲು ಆರಂಭಿಸಿದವು. ಕಳಿಸಿದ ಕವಿತೆಗಳು ಪತ್ರಿಕೆಯಿಂದ ಮರಳಿ ಬಂದರೂ 'ಡಾಕು' ಧೃತಿಗೆಡಲಿಲ್ಲ. ತನ್ನದೊಂದು ಕವಿತೆಯನ್ನು ವರಕವಿಗಳ ಮುಂದೆ ಓದಿ ತೋರಿಸಿ ವ್ಹಾವ್ಹಾ ಗಿಟ್ಟಿಸಬೇಕೆಂದು ಒಂದು ದಿನ ಡಾಕು ಸಾಧನಕೇರಿಗೆ ದೌಡಾಯಿಸಿದ. ವರಕವಿಗಳ ಮುಂದೆ ಒಬ್ಬ ಉದ್ದಾಮ ಕವಿ ಕವನ ವಾಚನ ಮಾಡುತ್ತಿದ್ದರು. ಡಾಕು ಕವಿತೆ ಆಲಿಸುತ್ತಾ ಕುಳಿತ, ಕೊನೆಗೆ ವರಕವಿಯವರು ಮುಚ್ಚು ಮರೆಯಿಲ್ಲದೆ ಖಂಡತುಂಡವಾಗಿ ಹೇಳಿದರು "ನೀ ಹೀಂಗ ಪದ್ಯ ಬರಕೋತ ಹೋಗು ನಿನ್ನ ಗದ್ಯ ಸುಧಾರಣಾ ಆಗತದ" ಓದಿದ ಕವಿಯ ಮೋರೆ ಪೆಚ್ಚಾಯಿತು. ಡಾಕು ಇದನ್ನು ಕಂಡು ಒಯ್ದ ಕವನವನ್ನು ಜೇಬಿಗೆ ಇಳಿಸಿದ, ಓದುವ ಧೈರ್ಯ ತೋರಲಿಲ್ಲ. ಮತ್ತೊಮ್ಮೆ ಡಾಕು ತನ್ನ ಯತ್ನ ಬಿಡದೇ ವರಕವಿಗಳ ಹತ್ತಿರ ಧಾವಿಸಿದ. ಎಂಟು ದಿನಗಳವರೆಗೆ ತಿಣಕಾಡಿ ಕವನ ಬರೆದು ತೆಗೆದುಕೊಂಡು ಹೋದ. ವರಕವಿಗಳು ಅತಿಥಿಗಳೊಡನೆ ಚರ್ಚೆಯಲ್ಲಿ ಮಗ್ನರಾಗಿದ್ದರು. ಇತ್ತೀಚಿನ ಕವನಗಳ ಬಗ್ಗೆ ಪ್ರಸ್ತಾಪ ಬಂದಾಗ ವರಕವಿಗಳು ನಗೆ ಚಟಾಕಿ ಹಾರಿಸಿದರು. "ನೋಡ್ರೀ, ನಮ್ಮ ಮನಿ ಸಮೀಪ ಒಂದು ಹುಚ್ಚರ ಹಾಸ್ಪಿಟಲ ಇದೆ. ಆಕೂಟಕ್ಕೆ ಹುಚ್ಚರ ಕೂಟ – ಅಂತಾರ. ಅಲ್ಲಿ ಪಾಸಾಗಿ ಬಂದಾವ ನಮ್ಮ ಮನಿಯ ಕವಿಯ ಕೂಟಕ್ಕ ಬರತಾನ – ಕವಿತಾ ಓದುತಾನ" ಎಂದು ಹೇಳಿದಾಗ ಡಾಕುವಿನ ಮುಖ ಇಂಗ ತಿಂದ ಮಂಗನಂತಾಯಿತು. ಪುನಃ ಕವನವನ್ನು ಜೇಬಿಗೆ ಇಳಿಸಿ, ನಾಲ್ಕು ದೇಶಾವರಿ ಮಾತಾಡಿ ಮನೆಗೆ ಮರಳಿದ.

ಡಾಕು ಈಗ ಡಾಕ್ಟರ ಆಗಿ ಖಾಸಗಿ ವೃತ್ತಿಗಿಳಿದವನು. ಮದುವೆಯೂ ಆಯಿತು, ಮಕ್ಕಳು ಆದರು. ಆದರೂ ಕವನ ಬರೆಯುವ ಹುಚ್ಚು ಮಾತ್ರ ದಿನೇ ದಿನೇ ಬೆಳೆಯುತ್ತಲೇ ಇತ್ತು. ಇದೊಂದು ಸೋಂಕು ರೋಗ ಇದಕ್ಕೆ ಯಾವ ಔಷಧವೂ ಇಲ್ಲ. ಕೆಲ ದಿನಗಳವರೆಗೆ ಮಡದಿಯು ಡಾಕು ಬರೆದ ಕವನಗಳನ್ನು ಆಲಿಸುತ್ತಿದ್ದಳು. ಕೊನೆಗೆ ಒಂದು ದಿನ ಹೇಳಿಯೇ ಬಿಟ್ಟಳು, ನಿಮಗೆ ಕವನ ಬರೆಯುವ ಭೂತ ಬಡಿದಿದೆ. ಇದು ಹೆಂಡ ಕುಡಿದು ಬರುವ ಪತಿಗಿಂತ ಭೀಕರವಾಗಿ ಕಾಣಹತ್ತಿದೆ. ದಯವಿಟ್ಟು ನಿಲ್ಲಿಸಿ. ಕವನ ಬರೆಯುವ ಚಪಲದ ಬಹು ಮುಖ್ಯ ಲಕ್ಷಣವೆಂದರೆ – ಬರೆದಾಗ ಅಂದರೆ 'ಹಸಿಬಿಸಿ' ಇದ್ದಾಗ ಯಾರಿಗಾದರೂ ಓದಿ ತೋರಿಸಬೇಕೆಂದು ಇಚ್ಛೆ ಬಲವಾಗಿತ್ತು. ಬರಬರುತ್ತ ಮನೆಯ ಮಡದಿಯೇ ಈ ಶಿಕ್ಷೆಯಿಂದ ದೂರ ಉಳಿಯಹತ್ತಿದಳು. ಡಾಕು ಒಂದು ದಿನ ಹೆಂಡತಿಗೆ ಸಿಟ್ಟಿನಿಂದ ಹೇಳಿಯೇ ಬಿಟ್ಟ 'ಪ್ರಾಣ ಬಿಟ್ಟೇನು ಆದರೆ ಕವನ ಬರೆಯುವದು ಬಿಡೋಲ್ಲ.' ಅವಳು ಕಂಡ ಕಂಡ ದೇವರಿಗೆ ಹರಕೆ ಹೊತ್ತಳು. ದೇವರಿಗೆ ಕರುಣೆ ಬರಲಿಲ್ಲ. ಡಾಕುವಿನ ಸಾಹಿತ್ಯ ಸೇವೆ ಮತ್ತಷ್ಟು ಜೋರಾಯಿತು. ಮಧ್ಯಾನ್ಹ ದವಾಖಾನೆಯಿಂದ ಮನೆಗೆ ಬಂದ ನಂತರ ದಾರಿಯಲ್ಲಿ

ಹೋಗುವ ಪೋಸ್ಟ್‌ಮನ್ನನ್ನು ಕರೆದು ಅವನಿಗೆ ಚಹಾದ ಉಪಚಾರ ನೀಡಿ ಕವನ ವಾಚನ ಮಾಡಲು ಆರಂಭಿಸಿದ. ಇದಕ್ಕೆ ಬೇಸತ್ತ ಪೋಸ್ಟ್‌ಮನ್ನ ಇವರ ಮನೆಯ ದಾರಿಯನ್ನೇ ಬಿಟ್ಟು ಏನಾದರೂ ಪತ್ರಗಳಿದ್ದರೆ ಮೆಲ್ಲನೆ ಬಂದು ಪಕ್ಕದ ಕಿಟಕಿಯಲ್ಲಿ ಒಗೆದು ಹೋಗುತ್ತಿದ್ದ.

ಒಮ್ಮೆ ದವಾಖಾನೆಯಲ್ಲಿ ಒಬ್ಬ ಯುವಕ ಮುಗಳ್ನಗೆಯಿಂದ ಬಂದು ಪರೀಕ್ಷಾ ಟೇಬಲ ಮೇಲೆ ಮಲಗಿದ. ಡಾಕು 'ಏನು ತೊಂದರೆ ಎಂದು ಕೇಳಿದಾಗ,' 'ಏನು ಇಲ್ಲ' ಎಂದ. 'ಸರ್ ನೀವು ಪ್ರಸಿದ್ಧ ಕವಿಗಳು ನಿಮ್ಮ ಕವನ ಸಂಕಲನಗಳನ್ನು ಓದಿ ಮಾರು ಹೋಗಿದ್ದೇನೆ ನನ್ನದೊಂದು ಕವನ ತಂದಿರುವೆ ಓದಲು ಅವಕಾಶ ಮಾಡಿಕೊಡಿ' ಎಂದು ಆ ಯುವಕ ಹೇಳಿದಾಗ ಡಾಕುಗೆ ದಿಕ್ಕೇ ತೋಚದಂತಾಯಿತು. ಹೊರಗಡೆ ಕುಳಿತುಕೊಳ್ಳಲು ಹೇಳಿದ. ಮತ್ತೊಮ್ಮೆ ನಡು ರಾತ್ರಿಯ ಎರಡು ಗಂಟೆಯಲ್ಲಿ ಬೀಟಿಗೆ ಬಂದ ಪೋಲಿಸನೊಬ್ಬ ಮನೆಯ ಮುಂದೆ ಸೀಟಿ ಊದತೊಡಗಿದ. ಡಾಕು ಸಾಹೇಬರೇ! ಎಂದು ಕೂಗಿದ. ಗಾಬರಿಯಿಂದ ಎದ್ದ ಡಾಕು ಕಿಟಕಿಯಿಂದ ನೋಡಿದಾಗ ಪೋಲಿಸನೊಬ್ಬ ದೊಡ್ಡದಾದ ನೋಟುಬುಕ್ಕಿನೊಂದಿಗೆ ಹಾಜರಾಗಿದ್ದಾನೆ. 'ಆತ ಹೇಳಿದ ನನ್ನ ಕವನಗಳನ್ನು ತಮಗೆ ತೋರಿಸಬೇಕೆಂದು' ಬಂದಿದ್ದೇನೆ. 'ತಾವು ನಾಡಿನ ಪ್ರಸಿದ್ಧ ಕವಿಗಳು.' ಇಷ್ಟೇ ಸಾಕು ಉಬ್ಬಿ ಹೋದ ಡಾಕು ಬಾಗಿಲು ತೆಗೆದು ಮನೆಯೊಳಗೆ ಕರೆದ. ಪೋಲಿಸಪ್ಪನಿಗೆ ಕವನ ಓದಲು ಹೇಳಿದ ಅರೆ ನಿದ್ದೆಯಲ್ಲಿದ್ದ ಡಾಕುಗೆ ಏನು ತಿಳಿಯದಂತಾಯಿತು. ಆದರೆ ಆಸಾಮಿ ಜೋಶದಲ್ಲಿ ಏರುಧ್ವನಿಯಲ್ಲಿಯೇ ಕವನ ಓದ ಹತ್ತಿದ. ಅಕ್ಕಪಕ್ಕದ ಮನೆಯವರು ಎದ್ದು ಲೈಟ ಹಾಕಿ ಡಾಕುವಿನ ಮನೆಗೆ ಓಡಿ ಬಂದರು. ಏನೋ ಅವಘಢ ಸಂಭವಿಸಿದೆ ಎಂಬ ಶಂಕೆಯಿಂದ ಧಾವಿಸಿದ್ದರು. ಮಲಗಿದ್ದ ಡಾಕುವಿನ ಹೆಂಡತಿ ಬಂದು ಕವನ ಓದುವ ಪೋಲಿಸಪ್ಪನನ್ನು ದುರಗುಟ್ಟಿ ನೋಡಿದಳು. ಪೋಲಿಸಪ್ಪ ನೋಟಬುಕ್ಕ ಮುಚ್ಚಿ ಅಲ್ಲಿಂದ ಕಂಬಿ ಕಿತ್ತಿದ. ಆದರೆ ಡಾಕು ತಾನೆಷ್ಟು ಜನಪ್ರಿಯತೆ ಪಡೆದಿರುವೆ ಎಂದು ಒಳಗೊಳಗೆ 'ಖುಷಿ' ಪಟ್ಟ. ಡಾಕುವಿಗೆ ಈಗ ಇನ್ನೊಂದು ಹುಚ್ಚು ಅರ್ಥಾತ ಹವ್ಯಾಸ ಆವರಿಸಿತ್ತು. ಏನಾದರೂ ಮಾಡಿ ಪ್ರಸಿದ್ಧಿ ಪಡೆಯಬೇಕೆಂಬ ಇಚ್ಛೆ ಮೈಯಲ್ಲಾ ತುಂಬಿತ್ತು. ರಾಜಕೀಯ ಧುರೀಣರೊಬ್ಬರು ಬಂದು ಬರಲಿರುವ ಕಾರ್ಪೊರೇಶನ್ ಚುಣಾವಣೆಯಲ್ಲಿ ತಮ್ಮ ಪಕ್ಷದ ಸಾಧನೆಗಳ ಕುರಿತು ಕವನ ಬರೆಯಲು ಕೇಳಿಕೊಂಡರು ಅಲ್ಲದೆ ತಮ್ಮ ಪಕ್ಷದ ಪ್ರಚಾರಕ್ಕೆ ಬಂದರೆ ಖಂಡಿತ ಈ ಬಾರಿ ರಾಜ್ಯೋತ್ಸವ ಪ್ರಶಸ್ತಿಯನ್ನು ಕೊಡಿಸುವ ವ್ಯವಸ್ಥೆ ಹಾಗೂ ರಾಜ್ಯ ಮಟ್ಟದ ಸನ್ಮಾನಕ್ಕಾಗಿ ವ್ಯವಸ್ಥೆ ಮಾಡುವೆವು ಎಂದರು. ರಾಜಕಾರಣಿಯ ಈ ಮಾತನ್ನು ನಂಬಿ ನೂರಾರು ಕನಸುಗಳನ್ನು ಹೆಣೆದುಕೊಂಡು ತನ್ನ ಹೆಂಡತಿಯ ಮುಂದೆ ಜಂಭ ಕೊಚ್ಚಿದ್ದೇ ಕೊಚ್ಚಿದ್ದು. ಡಾಕು ಕವನಗಳೊಂದಿಗೆ ಪ್ರಚಾರ ಸಭೆಗೆ ಹೋದ ಜನವೋ ಜನ. ಥಗಳ ಅಂಗಿಯ ಪುಢಾರಿಯೊಬ್ಬ ಪ್ರತಿಪಕ್ಷದವರನ್ನು ಹಿಗ್ಗಾಮುಗ್ಗಾ ಬೈಯ ಹತ್ತಿದ. ಗದ್ದಲವೆದ್ದಿತು, ಯಾರೋ ಒಬ್ಬರು ಜನರ ಮಧ್ಯೆ ಮದವೇರಿದ 'ಗೂಳಿಯನ್ನು ಓಡಿಸಿದರು' ಕಲ್ಲು ತೂರಾಟ ಕೋಳಿಮೊಟ್ಟೆ ತೂರಿ ಬಂದವು. ಪೋಲಿಸರು ಲಾಠಿಪ್ರಹಾರ ಪ್ರಾರಂಭಿಸಿದರು. ಒಂದೆರೆಡು ಕಲ್ಲುಗಳು ವೇದಿಕೆ ಮೇಲಿದ್ದ ಡಾಕುವಿನ ಹಣೆಗೆ ತಾಕಿದವು ರಕ್ತ ಸುರಿಸುತ್ತಲೇ ಮನೆ

ಸೇರಬೇಕಾದರೆ ಸಾಕುಸಾಕಾಯಿತು. ಅವನ ಹೆಂಡತಿಯು ಹಣೆಗೆ ಪಟ್ಟಿಯನ್ನು ಕಟ್ಟುತ್ತಾ ಕುಟಕಿದಳು. ''ಹೇಗಿದೆ ರಾಜ್ಯೋತ್ಸವ ಪ್ರಶಸ್ತಿ'' ಎಂದಾಗ ಡಾಕು ಅಳಬೇಕೋ ನಗಬೇಕೋ ತಿಳಿಯದಾಯಿತು. ಕನಸುಗಳು ನುಚ್ಚು ನೂರಾಗಿದ್ದವು. ಆದರೂ ಡಾಕು ಬಲು ಭಂಢ. ಕರ್ನಾಟಕ ರಾಜ್ಯೋತ್ಸವದ ಕವಿಗೋಷ್ಠಿಯ ಹಾಗೂ ಸನ್ಮಾನ ಕಾರ್ಯಕ್ರಮದ ಆಮಂತ್ರಣ ಬಂದಾಗ ಸ್ವರ್ಗ ಮೂರೇ ಗೇಣು ಉಳದಿತ್ತು. ಅಂದಿನ ಕವಿಗೋಷ್ಠಿಗೆ ನಲವತ್ತು ಕವಿಗಳನ್ನು ಆಯ್ಕೆ ಮಾಡಿದ್ದರು. ಹಿರಿಕಿರಿ ಕವಿಗಳು, ಸಿದ್ಧ ಕವಿಗಳು, ಶುದ್ಧ ಕವಿಗಳು, ಧಿಡೀರ ಕವಿಗಳು, ಕದ್ದ ಕವಿಗಳನ್ನು ಆಯ್ಕೆ ಮಾಡಲಾಗಿತ್ತು. ಡಾಕು – 'ಕನ್ನಡ–ಕನಿಕರ' ಎಂಬ ಕವನವನ್ನು ತಿದ್ದಿ ತೀಡಿ ವಾರಗಟ್ಟಲೇ ಬರೆದ. ಮೂರುನೂರು ಆಸನಗಳುಳ್ಳ ಸಭಾಂಗಣದಲ್ಲಿ ಅಂದು ಕೇವಲ ನಲವತ್ತು ಕವಿಗಳು ಮಾತ್ರ ಹಾಜರ. ಸರಕಾರಿ ಕಾರ್ಯಕ್ರಮವಾದ್ದರಿಂದ ಇಲಾಖಾ ಕಾರ್ಯದರ್ಶಿ ಹಾಗೂ ಅವನ ಸಿಬ್ಬಂದಿ ಮೈಕು ತಂದವ, ಹೂಮಾಲೆ ತಂದವ, ಇವರನ್ನು ಬಿಟ್ಟರೇ ಸಭಾಂಗಣ ಖಾಲಿ. ಇದು ರಾಜ್ಯೋತ್ಸವದ ಸ್ಥಿತಿ. ಎಲ್ಲ ಕವಿಗಳು ವೇದಿಕೆಯ ಮೇಲೆ ಕುಳಿತರೆ ಶ್ರೋತೃಗಳು ಯಾರು ಎಂಬ ಪ್ರಶ್ನೆ? ಇದಕ್ಕಾಗಿ ಅಧ್ಯಕ್ಷ ಡಾಕುನನ್ನು ವೇದಿಕೆಯ ಮೇಲೆ ಕೂಡ್ರಲು ಕಾರ್ಯದರ್ಶಿ ವಿನಂತಿಸಿದ. ಕವಿಗಳು ಒಬ್ಬೊಬ್ಬರಾಗಿ ಬಂದು ನಾಡು ನುಡಿಯ ಬಗ್ಗೆ ಹೆಮ್ಮೆಯಿಂದ ಮಾತನಾಡಿ ಕವನ ವಾಚನ ಮಾಡಿದರು. ಸನ್ಮಾನ ಸ್ವೀಕರಿಸಿ ನಿರ್ಗಮಿಸಿದರು. ಕೊನೆಗೆ ವೇದಿಕೆಯ ಮೇಲೆ ಉಳಿದದ್ದು ಡಾಕು ಮಾತ್ರ. ಕನ್ನಡ ಜನರ ಉದಾಸೀನತೆಯ ಬಗ್ಗೆ ಡಾಕು ಅಂದು ಗುಡಗಿದ. 'ಕನ್ನಡ–ಕನಿಕರ' ಎಂಬ ಕವನ ವಾಚನ ಮಾಡಿದಾಗ ಖಾಲಿಇದ್ದ ಸಭಾಂಗಣ ಪ್ರತಿಧ್ವನಿಗೊಂಡಿತು. ಎಲ್ಲಿಯೋ ಹೋಗಿದ್ದ ಕಾರ್ಯದರ್ಶಿ ಓಡುತ್ತ ಬಂದು ಡಾಕುಗೆ ಸನ್ಮಾನ ಮಾಡಿದಾಗ ಚಪ್ಪಾಳೆ ತಟ್ಟುವವರು ಯಾರು? ಕಾರ್ಯಕ್ರಮ ಮುಗಿದಾಗ ಡಾಕುನನ್ನು ಕರೆತಂದ ಕಾರು ಮಾಯವಾಗಿತ್ತು. ಒದ್ದಾಡುತ್ತ ಸಿಟಿ ಬಸ್ಸಿನಲ್ಲಿ ಮನೆಗೆ ಮರಳಿದ. ಈ ಮಧ್ಯದಲ್ಲಿ ಡಾಕು ಬರೆದ 'ಪ್ರೇಮ ಗಾನ'ವೆಂಬ ರೊಮ್ಯಾಂಟಿಕ್ ಕವಿತೆಗೆ ರಾಜ್ಯ ಮಟ್ಟದ ಸಂಘಟನೆಯೊಂದು ಪ್ರಶಸ್ತಿ ನೀಡಿತು. ಪ್ರೇಮದ ಹಲವು ಅರ್ಥಗಳನ್ನು ಇಲ್ಲಿ ವಿಶ್ಲೇಸಿಸಲಾಗಿದೆ ಎಂದು ಡಾಕುವಿನ ಭಾವಚಿತ್ರದೊಡನೆ ಪ್ರಸಿದ್ಧ ದಿನ ಪತ್ರಿಕೆಯೊಂದು ಪ್ರಕಟಿಸಿತ್ತು. ಮರುದಿನ ಒಂದು ಹೆಣ್ಣು ಧ್ವನಿ ಫೋನಿನಲ್ಲಿ 'ಸಾರ್ ನಿಮ್ಮ ಸುಂದರ ಕವನಕ್ಕೆ ಅಭಿನಂದನೆಗಳು ನಿಮ್ಮನ್ನು ಕಾಣಬೇಕಾಗಿದೆ ವಿಳಾಸ ಕೊಡಿ' ಎಂದಾಗ ಮರು ಮಾತನಾಡದೆ ಡಾಕು ಹರ್ಷಚಿತ್ತನಾಗಿ ಮನೆಯ ವಿಳಾಸ ನೀಡಿದ. ಮರುದಿನ ಜೀನ್ಸ ಪ್ಯಾಂಟು ಟೀಶರ್ಟ ತೊಟ್ಟ ಬಾಚಣಿಗೆ ಕಾಣದ ಕೂದಲ ಹರಡಿಕೊಂಡು ತರುಣಿಯೊಬ್ಬಳು ಹಾಜರಾದಳು. 'ಸರ್ ನಿಮ್ಮ ಮಗನೆಲ್ಲಿ?' 'ಇಲ್ಲ – ಅವನು ಆಫೀಸಿಗೆ ಹೋಗಿದ್ದಾನೆ.' 'ಡಾಕು ಕವಿಗಳೆಂದರೆ ಯಾರು? ಎಂದು ಪ್ರಶ್ನಿಸಿದಳು.' ನಾನೇ ಎಂದು ನಾಚಿಕೆಯಿಂದ ಡಾಕು ಹೇಳಿದ. ತರುಣಿ ನಿರಾಶೆಯ ಪಾತಾಳಕ್ಕೆ ಇಳಿದಳು. ಅವಳ ಭ್ರಮೆ ಬೇರೆಯದಾಗಿತ್ತು. ರೊಮ್ಯಾಂಟಿಕ್ ಕವಿತೆ ಬರೆದವ ಸುಂದರ ಯುವಕನೆಂಬ ಕಲ್ಪನೆಯಾಗಿತ್ತು. ಆದರೆ ಈಗ ಎಲ್ಲವೂ ತಿರುವು ಮುರುವು, ಬಂದ ದಾರಿಗೆ ಸುಂಕವಿಲ್ಲದೆ ಹಿಂತಿರುಗಿದಳು.

ಡಾಕುವಿನ ಸಿದ್ಧಿ – ಪ್ರಸಿದ್ಧಿ ರಾಜ್ಯವ್ಯಾಪಿ ಹರಡಿತ್ತು. ತಾನೊಬ್ಬ ಹಿರಿ ಕವಿ – ಜನರಿಗೆ

ತಿಳಿಯದ ಹಾಗೇ ಕಠಿಣ ಶಬ್ದಗಳೊಡನೆ ಮುಕ್ತ ಛಂದಸ್ಸಿನಲ್ಲಿ ಬರೆದರೆ ಕೀರ್ತಿ ಬಿರುದಗಳು ತಾನಾಗಿಯೇ ಮನೆಯ ಬಾಗಿಲಿಗೆ ಬರುವವು ಎಂಬ ಗುಂಗಿ ಹುಳವನ್ನು ಯಾರೋ ಡಾಕುವಿನ ತಲೆಯಲ್ಲಿ ಬಿಟ್ಟಿದ್ದರು. ಇದೇ ಗುಂಗಿನಲ್ಲಿರುವಾಗ ಪೋಲಿಸ ಪೇದೆ ಒಬ್ಬ 'ಸಮನ್ಸ'ದೊಂದಿಗೆ ಮನೆಗೆ ಬಂದಾಗ ಡಾಕು ಭಯ ಭೀತನಾದ, ಒಂದೇ ಉಸಿರಿನಲ್ಲಿ ಹೇಳಿದ 'ಕೂಡಲೇ ಎಸ್ಪಿ ಸಾಹೇಬರು ಪೋಲಿಸ್ ಸ್ಟೇಶನ್‌ಗೆ ಬರಲು ಹೇಳಿದ್ದಾರೆ ತಾವು ತಕ್ಷಣ ನನ್ನೊಡನೆ ಬರಬೇಕೆಂದು ಗೋಗರೆದ.' ಭಯದಲ್ಲಿಯೇ ಪೋಲಿಸ್ ಸ್ಟೇಶನ್‌ಗೆ ಪಾದ ಬೆಳೆಸಿದ. ಎದುರಿಗೆ ಕುಳಿತಿದ್ದ ಎಸ್ಪಿ ಸಾಹೇಬರು ಗುಡಿಗಿದರು. 'ಏನ್ರೀ ನೀವು ಡಾಕ್ಟರು ಮೇಲಾಗಿ ಉದ್ದಾಮ ಕವಿಗಳು ನಿಮಗೂ ಕಳ್ಳ ಕಾಕರಿಗೂ ಏನು ಸಂಬಂಧ' ಎಂದು ಜೋರಿನಿಂದ ಕೇಳಿದಾಗ ಡಾಕುವಿಗೆ ಕಣ್ಣಿಗೆ ಕತ್ತಲು ಬಂದಂತಾಯಿತು. ಆದರೂ ಸಾವರಿಕೊಂಡು ಕೈ ಮುಗಿದು ನಿಂತ. ವಸ್ತುಸ್ಥಿತಿ ಹೀಗಿತ್ತು – ಕಳ್ಳರ ಬಳಿ ಡಾಕು ಬರೆದ ಕವನ ಸಂಕಲನ 'ಕಳ್ಳಾಕಳ್ಳಿ' ಇತ್ತು. ಅವರಿಗೆ ಕಳ್ಳತನ ಮಾಡಲು ಪ್ರೇರೆಪಿಸಿದೆ ಎಂಬ ಎಸ್ಪಿಯವರ ಆಪಾದನೆಯಾಗಿತ್ತು. 'ಡಾಕು' ಶಬ್ದ ಬಳಸಿದ್ದು ಕೂಡ ಅಪರಾಧ.

ಅದು ಪೋಲಿಸ್ ಇಲಾಖೆಯ ಸ್ವತ್ತು. ಡಾಕುಗೆ ಏನು ತಿಳಿಯದಂತಾಯಿತು. ಆಪಾದಿತ ಕಳ್ಳ ಈ ವಿವರಣೆ ನೀಡಿದ ಸರ್, ನಿಮ್ಮ ಕವನ ಸಂಕಲನವನ್ನು ರದ್ದಿ ಪೇಪರ ಅಂಗಡಿಯಲ್ಲಿ ಕೊಂಡೆ. 'ಕಳ್ಳಾಕಳ್ಳಿ' ಎಂಬ ಕವನದಲ್ಲಿ ಪ್ರೇಮಿಗಳಿಬ್ಬರು ಪ್ರೀತಿ ಪ್ರೇಮ ಕದಿಯುವ ಶೈಲಿಯನ್ನು ತುಂಬ ಚೆನ್ನಾಗಿ ಬರೆದಿರುವಿರಿ. ಇದು ನನ್ನ ಕಳ್ಳತನಕ್ಕೆ ಹುರುಪು ಕೊಟ್ಟಿತು. ಡಾಕುವಿನ ಪಾದದಡಿಯ ಭೂಮಿ ಕುಸಿದಂತಾಯಿತು. ಎಸ್ಪಿಯವರು ಈ ಬಾರಿ ವಾರ್ನಿಂಗ ಕೊಟ್ಟಿದ್ದೇನೆ. ನಮ್ಮ ಇಲಾಖೆಯ ಶಬ್ದ – ಡಾಕು ಇನ್ನು ಮುಂದೆ ಬಳಸಬೇಡಿ. ತಪ್ಪಿದರೆ ಇವರೊಡನೆ ನಿಮ್ಮನ್ನು ಒಳಗೆ ಕಳಿಸಬೇಕಾಗುತ್ತದೆ. ಡಾಕುವಿನ ಮೈಯೆಲ್ಲಾ ಬೆವತಿತ್ತು. ಒಂದೇ ಉಸಿರಿನಲ್ಲಿ ಹೇಳಿದ – ಸರ್, 'ಡಾಕು ಅಂದರೆ ಡಾಕ್ಟರ ಕುಲಕರ್ಣಿ' ಎಂಬ ಸಂಕ್ಷಿಪ್ತ ರೂಪ ಕ್ಷಮಿಸಿ. ಇನ್ನು ಮುಂದೆ ಇದನ್ನು ಬಳಸುವದಿಲ್ಲ, ಅದರಂತೆ ಕಳ್ಳಾಕಳ್ಳಿ ಎಂಬ ಶಬ್ದದಿಂದಲೂ ದೂರ ಇರುವೆ. ಪೋಲಿಸ್ ಸ್ಟೇಶನ್‌ನಿಂದ ಹೊರ ಬಂದಾಗ ಕವನ ಬರೆಯುವ ಗುಂಗು ಅರ್ಥಾತ್ ನಿಶೆ ಇಳಿದಿತ್ತು. ಮನೆಗೆ ಬಂದು ಮಡದಿಯ ಪಕ್ಕದಲ್ಲಿ ಕುಳಿತು 'ನಾನಿನ್ನು ಕವಿತೆ ಬರೆಯುವುದಿಲ್ಲ' ಎಂಬ ನೊಂದ ಮನದಿಂದ ನುಡಿದ. ಮಡದಿ ಗಹಗಹಿಸಿ ನಕ್ಕು ಹೇಳಿದಳು – 'ನಮ್ಮ ಮನೆ ದೇವರು ಸಿದ್ದಪ್ಪನಿಗೆ ಎರಡು ಕಿಲೋ ತುಪ್ಪ ಹಾಕುತ್ತೇನೆ ಎಂದು ಹರಕೆ ಹೊತ್ತಿದ್ದೇನೆ. ನಮ್ಮ ಸಿದ್ದಪ್ಪ ಸತ್ಯದ ದೇವರು. ಈಗ ಒಲಿದಿದ್ದಾನೆ' ಎಂದಳು. ಡಾಕುಗೆ ವರ ಕವಿ ಬೇಂದ್ರೆಯವರ ಕವಿತೆಯೊಂದು ನೆನಪು ಆಯಿತು.

'ಯಾರಿಗೆ ಬೇಕು – ನಿನ್ನ ಕವಿತಾ?
ಬ್ರೆಡ ತಾ! ಬೆಣ್ಣಿ ತಾ ಇಲ್ಲದಿದ್ದರ ಎಣ್ಣಿ ತಾ
ಮ್ಯಾಲ ಖಾರಪುಡಿ ಹಾಕು
ತಿಂದು ತೇಗಿ ಢರಕಿ ಹೊಡೆಯೋಣ'

ಎಂದಾಗ ಮಡದಿಯ ಮುಖದ ಮೇಲೆ ನಗೆ ನವಿಲು ಆಡುತಿತ್ತು.

# ದಾಳಪ್ಪನ ದಾಳ

• ಎಂ.ಎಸ್. ನರಸಿಂಹಮೂರ್ತಿ

**ರಾ**ಜಕಾರಣಿ ದಾಳಪ್ಪ ಮನೆಗೆ ಬರ್ತಾನೆ ಅಂದ್ರೆ, ಅದು ಒಂದು ಸುದ್ದಿ. ಪಕ್ಷೇತರ ಅಭ್ಯರ್ಥಿಯಾಗಿ ಸ್ಪರ್ಧಿಸಿ, ಸಿಂಗಲ್ ಓಟಿನಿಂದ ವಿಧಾನಸೌಧ ಮೆಟ್ಟಿಲನ್ನು ತುಳಿದ ಪುಣ್ಯವಂತ. ಮನೆ ಮುಂದೆ ಗೂಟದ ಕಾರುಬಂದು ನಿಂತಾಗ ವಿಶ್ವ – ವಿಶಾಲೂಗೆ ಖುಷಿಯಾಯಿತು. ದಾಳಪ್ಪನ ಪಾದ ಸ್ಪರ್ಶದಿಂದ ಧೂಳು ಪುನೀತವಾಯಿತು. ವಿಶ್ವ ವಿಶಾಲು ಆರತಿ ಮಾಡಿ ಆತನನ್ನು ಒಳಗಡೆ ಬಿಟ್ಟುಕೊಂಡರು. ದಾಳಪ್ಪನಿಗೆ ಖುಷಿಯಾಯಿತು.

''ವಿಶ್ವ, ನಾನು ನಿನ್ನ ಗೆಳೆಯನಾಗಿದ್ದೆ... ನಾನು ನೀನು ಒಟ್ಟಿಗೆ ಒಂದೇ ಒಂದು ಸೈಕಲ್‌ಶಾಪ್‌ನಲ್ಲಿ ಮೆಕ್ಯಾನಿಕ್ ಆಗಿ ಕೆಲಸ ಮಾಡಿದ್ವಿ...'' ಎಂದು ದಾಳಪ್ಪ ಹಳೇದಿನಗಳನ್ನು ನೆನಪು ಮಾಡಿಕೊಂಡ.

''ಹೌದು, ನಾವು ಸೈಕಲ್‌ಗೆ ಟೈರ್‌ಫಿಟ್ ಮಾಡ್ತಾ ಇದ್ದೆ, ನೀವು ಬ್ಲೋ ಹೊಡೀತಾ ಇದ್ರಿ...''

''ಆದರೆ ಕಾಲ ಎಲ್ಲಾ ಒಂದೇಥರ ಇರೋದಿಲ್ಲ... ಈ ಪ್ರಜಾಪ್ರಭುತ್ವದಲ್ಲಿ.. ಯಾರು ಏನು ಬೇಕಾದ್ರೂ ಆಗಬಹುದು. ಇರುವೆ ಆನೆಯಾಗುತ್ತೆ... ಆನೆ ಇರುವೆಯಾಗುತ್ತೆ...'' ದಾಳಪ್ಪ ಹೆಮ್ಮೆಯಿಂದ ನುಡಿದ.

''ತಾವು ಆನೆಯಾಗಿರೋದೇ ಇದಕ್ಕೆ ಸಾಕ್ಷಿ ಅನ್ಸುತ್ತೆ...'' ವಿಶಾಲು ಸೇರಿಸಿದಳು.

ದಾಳಪ್ಪನಿಗೆ ಖುಷಿಯಿಂದ ತನ್ನ ಕತೆ ಒದರಿದ...

''ನಾನು ಪಕ್ಷೇತರ ಅಭ್ಯರ್ಥಿಯಾಗಿ ನಿಂತೆ, ಗೆದ್ದೆ... ಸಿಂಗಲ್‌ಸೀಟ್‌ನಿಂದ ಸರ್ಕಾರ ಕಟ್ಟಬೇಕಾಗಿ ಬಂದಾಗ ನಾನು ಮಂತ್ರಿ ಪದವಿ ಕೇಳಿದೆ... ಯಾವುದೋ ಕೆಲಸಕ್ಕೆ ಬಾರದ ಮಂತ್ರಿ ಪದವಿ ಕೊಟ್ಟರು... ನನಗೆ ಬೇಕಾಗಿರೋ ಒಳ್ಳೆ ಗೃಹಮಂತ್ರೀನೋ... ನಗರಾಭಿವೃದ್ಧಿನೋ ಸಿಕ್ಕಿದ್ರೆ ಆನಂದ ಇರೋದು... ಕ್ಯಾಬಿನೆಟ್ ಮಾಡೋಬದಲು, ಬರೀ ರಾಜ್ಯಮಟ್ಟದಲ್ಲಿ ನಿಲ್ಲಿಸಿಬಿಟ್ಟಿದ್ದಾರೆ. ಅದಕ್ಕೆ ನನ್ನ ಪ್ರೋಟೆಸ್ಟ್ ಇದೆ. 'ಸರ್ಕಾರಕ್ಕೆ ಧಿಕ್ಕಾರ! ಮುಖ್ಯಮಂತ್ರಿಗಳಿಗೆ ಧಿಕ್ಕಾರ' ಎಂದು ತನ್ನವರ ಮೇಲೇ ಗುಡುಗಾಡಿದ.

''ಆದರೂ ದಾಳಪ್ಪ, ನೀವು ಎಲೆಕ್ಷನ್‌ಗೆ ನಿಂತಾಗ ನೀವು ಕರಪತ್ರದಲ್ಲಿ ಹಾಕಿಸಿದ್ರಿ, ನಾನು ನಿಸ್ವಾರ್ಥ ಸೇವೆ ಮಾಡ್ತೀನಿ... ನನಗೆ ಅಧಿಕಾರ ದಾಹ ಇಲ್ಲ, ಜನಗಳ ಸೇವೆಯೇ ಜನಾರ್ದನ

ಸೇವೆ... ಸರ್ಕಾರಿ ಕೆಲಸ ದೇವರ ಕೆಲಸ... ಅಂತೆಲ್ಲಾ ಹೇಳ್ತಾ ಇದ್ರಲ್ಲಾ...?'' ಎಂದು ವಿಶ್ವ ನೆನಪು ಮಾಡಿದ.

''ಅದು ಗೆಲ್ಲೋವರೆಗೂ ಅಷ್ಟೇನೇ... ಗೆದ್ದಮೇಲೆ ಆಶ್ವಾಸನೆಗಳನ್ನ ನೆಚ್ಚಿಕೊಂಡು ಕೂತರೆ ಆಗುತ್ತಾ..? ನನ್ನ ಜೊತೆಯವನು ಕಿತ್ತು ಹೋದ ಕಾಳಪ್ಪ... ಹಳ್ಳಿಯಲ್ಲಿ ಸಗಣಿ ಬಾಚ್ತಾ ಇದ್ದವ... ನೆನ್ನೆ ಚಿತ್ರಾನ್ನಾನ ನಾಳೆ ತಿಂತಾ ಇದ್ದವ... ಇವತ್ತು ಕ್ಯಾಬಿನೆಟ್ ಮಿನಿಸ್ಟರು. ಅವನು ಇನ್ನೂರು ಎಕರೆ ಜಮೀನನ್ನು ಡಿ-ನೋಟಿಫೈ ಮಾಡಿಕೊಂಡಿದ್ದಾನೆ. ಇವತ್ತು ಐನೂರು ಕೋಟಿರೂಪಾಯಿ ಬೆಲೆಬಾಳುತ್ತೆ ಅವನ ಶರೀರ... ನಾನೂ ಇದ್ದೀನಿ... ಏನು ಪ್ರಯೋಜನ?''

''ಆದರೆ ನಿಮಗೆ ಯಾರೋ ಇಪ್ಪತ್ತೈದು ಕೋಟಿರೂಪಾಯಿ ಕೊಡ್ತೀನಿ ಅಂತ ಹೇಳಿದ್ದಾರೆ. ಸರ್ಕಾರದಲ್ಲೇ ಇರಿ ಅಂತ ಕೇಳ್ಕೋತಿದ್ದಾರೆ?'' ವಿಶಾಲೂಗೆ ಅನುಮಾನ.

''ಹೌದಮ್ಮ, ನನ್ನ ತಲೆಗೆ ಇಪ್ಪತ್ತೈದು ಕೋಟಿರೂಪಾಯಿ ಬೆಲೆ ಕಟ್ಟಿದ್ದಾರೆ...''

ವಿಶ್ವನಿಗೆ ಖುಷಿಯಾಯ್ತು...

''ಅಬ್ಬಾ , ಆ ಕಾಡುಗಳ್ಳ ವೀರಪ್ಪನ್ ತಲೆಗೆ ಒಂದು ಕೋಟಿರೂಪಾಯಿ ಮಾತ್ರ ಕಟ್ಟಿದ್ರು... ಆ ಕಾಡುಗಳ್ಳ ವೀರಪ್ಪನಿಗಿಂತಲೂ ಇಪ್ಪತ್ತೈದು ಪಟ್ಟು ಹೆಚ್ಚು ಬಲಶಾಲಿಗಳು ನೀವು ಅಂತ ಇದರಿಂದ ಸಾಬೀತಾಗುತ್ತದೆ...''

ವಿಶ್ವನ ವ್ಯಂಗ್ಯ ದಾಳಪ್ಪನಿಗೆ ಅರ್ಥವಾಗಲಿಲ್ಲ. ಅವನು ಖುಷಿಯಾಗಿ ''ಹೌದು ಹೌದು'' ಎಂದ.

''ನಾನು ಮುಖ್ಯಮಂತ್ರಿಗಳಿಗೆ ಹೇಳಿದ್ದೀನಿ. ಇದು ಇನ್‌ಫ್ಲ್ಯುಯೇಷನ್ ಕಾಲ... ಈ ಇನ್‌ಫ್ಲ್ಯುಯೇಷನ್‌ನಲ್ಲಿ ನೀವು ಕೊಡುವಂತಹ ಇಪ್ಪತ್ತೈದು ಕೋಟಿ ಏನೇನೂ ಸಾಕಾಗೊಲ್ಲ. ನನಗೆ ಒಂದಿನ್ನೂರ್ರೈವತ್ತು ಲ್ಯಾಂಡ್ ಡಿ-ನೋಟಿಫೈ ಮಾಡಿ ಕೊಟ್ಟುಬಿಡಿ... ನಾನು ನಿಮ್ಮ ಜೊತೆ ಇರ್ತೀನಿ ಅಂತ ಸೂಚಿಸಿದ್ದೀನಿ. ಈ ಬಗ್ಗೆ ಕ್ಯಾಬಿನೆಟ್ ಮೀಟಿಂಗ್ ನಡೀತಿದೆ...''

ಅಷ್ಟರಲ್ಲಿ ಡ್ರೈವರ್ ಬಳಿ ಬಂದ ನಮಸ್ಕಾರ ಮಾಡಿದ. ಒಂದಷ್ಟು ಹಣ್ಣು ಹಂಪಲು ತಂದಿಟ್ಟ

''ತಗೋ ವಿಶ್ವ, ನಾನು ಮರೆತರೂ ನಮ್ಮ ಡ್ರೈವರ್ ಮರೆತಿಲ್ಲ... ಹಣ್ಣು ಇಟ್ಕೋ...''

''ಇದೆಲ್ಲಾ ಯಾತಕ್ಕೆ?'' ಎಂದಳು ವಿಶಾಲು.

ದಾಳಪ್ಪ ನಕ್ಕ.

''ಯಾರೋ ನನಗೆ ಕೊಟ್ಟಿದ್ದು, ನಾನು ನಿಮಗೆ ಕೊಡ್ತಾ ಇದ್ದೀವಿ... ಅತ್ತೇದು ಅಳಿಯನಿಗೆ ದಾನ ಮಾಡಿದ್ದಾಗ್ಗೆ... ದೊಂಬರ ಕತ್ತೇನ ದೋಬಿಗೆ ಕೊಟ್ಟಹಾಗೆ !... ಇರಲಿ ಪವರ್ರು, ಸೀಟು ಅಧಿಕಾರ... ಇದ್ದಾಗ ಏನಾದ್ರೂ ಕೊಡೋದು ಮಾಮೂಲು... ಸೀರೆ, ಪಂಚೆ, ನಿಕ್ಕರ್ರು, ಉಡಿದಾರ...''

ವಿಶಾಲೂಗೆ ಅನುಮಾನವಾಯಿತು.

"ರೀ, ಆಗ್ಲಿಂದ ಇವರು ಇನ್‌ಫ್ಲೇಷನ್ ಅಂತ ಹೇಳ್ತಾ ಇದ್ದಾರಲ್ಲಾ... ಏನ್ರೀ ಅದರ ಅರ್ಥ...?"

"ಅದನ್ನ ಆಮೇಲೆ ಹೇಳ್ತೀನಿ ಇರು..." ಎಂದ ವಿಶ್ವ...

"ಹೇಳಪ್ಪಾ ಪರ್ವಾಗಿಲ್ಲ... ನೀನೂ ಒಬ್ಬ ಕವಿ ಅಲ್ಲವಾ? ನೀನು ನಿಂದೇ ಮಾತಲ್ಲಿ ಹೇಳು.."

ಎಂದ ದಾಳಪ್ಪ ಹೇಳಿದಾಗ, ವಿಶಾಲು ಹೊತ್ತಿದ್ದ ದಪ್ಪ ಶರೀರವನ್ನು ನೋಡಿದ ವಿಶ್ವ...

"ನಿನ್ನತೂಕ ಎಷ್ಟು ವಿಶಾಲು...?" ಎಂದ.

"ನಾನು ಇವತ್ತು ಎಪ್ಪತ್ತೈದು ಕೇಜಿ ಇದ್ದೀನ್ರೀ..." ಎಂದಳು ವಿಶಾಲು...

"ನೀನು ಮದುವೆಯಾದಾಗ ಕೇವಲ ನಲವತ್ತು ಕೇಜಿ ಇದ್ದೆ.. ಆಗ ನಿನ್ನ ಸೈಜು 36-28-36. ಆದರೆ ಇವತ್ತು 48-48-48 ಆಗಿದೆ. ಸಂಖ್ಯೆ ದೃಷ್ಟಿಯಿಂದ ಜಾಸ್ತಿಯಾದರೂ ಬೆಲೆ ದೃಷ್ಟಿಯಿಂದ ನೀನು ಕಡಿಮೆಯಾಗಿದ್ದೀಯ... ಅದಕ್ಕ ಇನ್‌ಫ್ಲೇಷನ್ ಅಂತಾರೆ..."

ವಿಶಾಲೂಗೆ ಸಿಟ್ಟಾಯಿತು. ಆದರೂ ತೋರ್ಪಡಿಸಲಿಲ್ಲ... ದಾಳಪ್ಪ ವಿವರಿಸಿದ.

"ಗೊತ್ತಾಯ್ತಾಮ್ಮಾ? ಸಂಖ್ಯೆ ಜಾಸ್ತಿಯಾಗುತ್ತೆ. ಆದರೆ ಅದಕ್ಕೆ ಬೆಲೆ ಕಡಿಮೆಯಾಗುತ್ತೆ... ಇವತ್ತು ನೋಟಿನ ಬೆಲೇನೂ ಅದೇನೇ... ಮುಂಚೆ ಕೈಯಲ್ಲಿ ನೋಟುಗಳು ತಗೊಂಡು ಹೋಗಿ ಬ್ಯಾಗಲ್ಲಿ ಧಾನ್ಯ ತರ್ತಿದ್ರು... ಈಗ ಬ್ಯಾಗಲ್ಲಿ ನೋಟುಗಳು ತಗೊಂಡು ಹೋಗಿ, ಕೈಯಲ್ಲಿ ಧಾನ್ಯ ತರಬೇಕಾದಂತಹ ಕಾಲವಾಗಿದೆ."

ಯಾವುದೋ ಫೋನಿಗೆ ಕಾಯುತ್ತಾ ಕೂತ ದಾಳಪ್ಪ. ಗಡದ್ದಾಗಿ ಊಟವಾಯಿತು...

"ನಾನು ಇವತ್ತು ಎರಡರಲ್ಲಿ ಒಂದು ನಿರ್ಧಾರವಾಗಬೇಕು... ನನಗೆ ಅವರು 150 ಎಕರೆ ಡಿ-ನೋಟಿಫೈ ಮಾಡಿಕೊಡಬೇಕು... ಇಲ್ಲಾಂದ್ರೆ ನಾನು ಮಂತ್ರಿ ಪದವಿ ಬಿಟ್ಟುಬಿಡ್ತೀನಿ... ನನ್ನ ಸಪೋರ್ಟ್ ವಿತ್‌ಡ್ರಾ ಮಾಡ್ತೀನಿ..."

ಆ ವೇಳೆಗೆ ಅಲ್ಲಿಂದ ದಾಳಪ್ಪನಿಗೆ ಫೋನ್ ಬಂತು.

"ಹೌದಾ? ಪಾರ್ಟಿಮೀಟಿಂಗ್ ಮುಗೀತಾ? ಏನು ನನ್ನ ಪ್ರೈಮರಿ ಮೆಂಬರ್‌ಶಿಪ್‌ನಿಂದಾನೇ ಕಿತ್ತು ಹಾಕಿದ್ದೀರಾ?" ದಾಳಪ್ಪನಿಗೆ ಗಾಬರಿಯಾಯಿತು. ವಿಶಾಲು ಆಚೆಕಡೆ ನೋಡಿದಳು. ದಾಳಪ್ಪ ಬಂದಿದ್ದ ಕಾರು ಹೊರಟುಹೋಯಿತು.

"ರೀ, ಆ ಗೂಟದ ಕಾರು ಹೊರಟು ಹೋಯಿತು..."

"ಹಾಂ? ಹೋಗೇಬಿಡ್ತಾ ವಿಶಾಲೂ?"

"ಛೇ, ಎಷ್ಟು ನಶ್ವರ ಈ ಅಧಿಕಾರ..." ದಾಳಪ್ಪ ಅರ್ಥ ಮಾಡಿಕೊಂಡ...

"ದಾಳಪ್ಪ ಐ ಆ್ಯಮ್ ವೆರಿಸಾರಿ, ನಮ್ಮ ಮನೆಗೆ ಬಂದು ಎಲ್ಲಾ ಕಳ್ಕೊಂಡ ಹಾಗಾಯ್ತು..." ಎಂದ ವಿಶ್ವ.

ದಾಳಪ್ಪನಿಗೆ ಜ್ಞಾನೋದಯವಾಯಿತು...

"ಜನ ಓಟುಕೊಟ್ಟು ನಮ್ಮನ್ನು ಆಳಿ ಅಂತ ಕಳಿಸಿದಾಗ ಜನರನ್ನು ಅಳಿಸಬಾರದು... ನಿಷ್ಠೆಯಿಂದ ಕೆಲಸ ಮಾಡಬೇಕು... ಅಧಿಕಾರ ವ್ಯಾಮೋಹ ಜಾಸ್ತಿ ಆದರೆ ಹೀಗೇ ಆಗುತ್ತೆ ಅಂತ ನನಗೆ ಈಗ ಗೊತ್ತಾಗ್ತಾ ಇದೆ... ಇರ್ಲಿ ಹೋಗ್ತೀನಿ.. ಜನ ಸಾಮಾನ್ಯನಾಗಿ ದುಡೀತೀನಿ..."

"ಈಗ ಮುಂದೆ ಏನು ಮಾಡಬೇಕು ಅಂತ ಇದ್ದೀರಾ? ದಾಳಪ್ಪ?" ವಿಶ್ವ ಕೇಳಿದ.

"ಸರ್ಕಾರಿ ಕಾರು ಹೋಯ್ತು, ಬಂಗಲೆ ಹೋಯ್ತು... ಅಧಿಕಾರ ಹೋಯ್ತು ಎಲ್ಲಾ ಹೋಯ್ತು... ಒಬ್ಬ ಮಾಜಿ ಮಿನಿಸ್ಟರ್ ಏನು ಮಾಡ್ತಾನೆ ಅನ್ನೋದನ್ನ ಮಾಡಿ ತೋರಿಸ್ತೀನಿ..."

"ಅಂದರೆ?"

"ಹೇಗೂ ಸೈಕಲ್‌ಶಾಪ್ ಇದೆ. ಹಳೇ ಸೈಕಲ್ ರಿಪೇರಿ ಮಾಡ್ತಾ ಮತ್ತೆ ಬ್ಲೋ ಹೊಡೆಯೋಕೆ ಶುರು ಮಾಡ್ತೀನಿ.. ಭಗವಂತ ಕೂಡ ಇವತ್ತಲ್ಲಾ ನಾಳೆ ನನಗೂ ಬ್ಲೋ ಹೊಡೆದು ದಪ್ಪ ಮಾಡ್ತಾನೆ ಅನ್ನೋ ಆಶ್ವಾಸನೆ ನನಗಿದೆ..."

ಎನ್ನುತ್ತಾ ಭಾರವಾದ ಹೆಜ್ಜೆ ಇಟ್ಟು ದಾಳಪ್ಪ ಹೊರಟ.

---

## ಪರಿಮಳ

ಹಾಲು ಕುಡ್ದ ಮೇಲೂ
ಕೆಳಗಿಳಿಸಲಿಲ್ಲ
ತಳ ತೂತಾದರೂ
ತಳಮಳಿಸಲಿಲ್ಲ
ಕೊಳಗ
ಕರಗಿ ಬೆಂಕಿ
ಬೆಳಕಾಯ್ತು
ಹಾಲ ಪರಿಮಳವಾಯ್ತು
ಇಲ್ಲದೆಲೆ ಹರಡಿ
ತುಂಬಿ ಎಲ್ಲೆಡೆಯಾಯ್ತು

– ಎನ್. ಪ್ರಕಾಶ್

# ಬುರುಡೆ ಬಾಜಿಯರಾಯರ ವಿಲ್ ಯಾನೆ ಮರಣಶಾಸನ

• ನೀರಗುಂದ ಕೇಶವಮೂರ್ತಿ ರಾವ್

**ಬಾ**ಗೂರಿನಲ್ಲಿ ನನ್ನ ಮತ್ತು ಬುರುಡೆ ಬಾಜೀರಾಯರ ಮನೆ ಅಕ್ಕ-ಪಕ್ಕದಲ್ಲಿಯೇ ಇದೆ. ನಾನು ಸದಾ ಸಂಚಾರಿಯಾಗಿರುವುದರಿಂದ ಊರಿಗೆ ಬಂದಾಗಷ್ಟೇ ಭೇಟಿ. ನಾನಲ್ಲಿದ್ದಾಗ ಒಂದು ಮುಂಜಾನೆ ಕಾಫಿ ಕುಡಿಯುತ್ತಿರುವಾಗ ರಾಯರ ಆಗಮನವಾಯ್ತು. ಕಾಫಿಯೊಂದಿಗೆ ಸ್ವಾಗತಿಸಿದೆ. ವಿಷಯವೇನೆಂದು ನಾನು ಕೇಳದಿದ್ದರೂ ತಾವು ಕೈಲಿ ಹಿಡಿದಿದ್ದ ಕರಡು ಕಾಗದಲ್ಲಿ ಬರೆದಿದ್ದ ಹಾಳೆಯೊಂದನ್ನು ತೋರಿಸಿ ''ಇದಕ್ಕೊಂದು ಸಾಕ್ಷಿ ಹಾಕು'' ಎಂದರು. ಕಾಗದ ತೆಗೆದುಕೊಂಡು ಓದಲಿಕ್ಕೆ ಹೋದಾಗ ''ಅದರಲ್ಲಿ ಏನೂ ಇಲ್ಲಯ್ಯ. ನಿನಗೆ ಗೊತ್ತಲ್ಲ, ಇದು ಆಸ್ತಿ ಉಯಿಲು ಪತ್ರ. ನನ್ನ ಪಿತ್ರಾರ್ಜಿತ ಆಸ್ತಿಯೆಲ್ಲಾ ನನ್ನ ಮಕ್ಕಳಿಗೆ ಹೇಗೂ ಬಳುವಳಿಯಾಗಿ ಬಂದೇ ಬರುತ್ತೆ. ಅಂದ್ರೆ ಅದೇ, ಬಿ.ಪಿ, ಶುಗರ್ ಇತ್ಯಾದಿ....'' ಎನ್ನುತ್ತಾ ಬೊಚ್ಚು ಬಾಯಿಂದ ನಗುತ್ತಾ ಮಾತು ಮುಂದುವರೆಸಿದರು. ''ಈಚೆಗೆ ನನಗೆ ನಾನೆಲ್ಲಿ ಇದ್ದಕ್ಕಿದ್ದ ಹಾಗೆ 'ಓಂ' ಎಂದು ನೆಗೆದುಬಿದ್ದು ಹೋಗ್ತೀನೋಂತಾ ಅನ್ನಿಸ್ತಾ ಇದೆ. ಮುಂದೆ ತೊಡಕುಂಟಾಗಬಾರದೆಂದು ವಿಲ್ ಬರೀತಾ ಇದೀನಿ'' ಎಂದು ಓದಲು ಬಿಡದೆ ಸಹಿ ತೆಗೆದುಕೊಂಡು ಹೋದರು.

ರಾಯರು ಮರೆಯಾದ ನಂತರ ಅವರ ಆಸ್ತಿಯ ಬಗ್ಗೆ ಯೋಚನೆ ಮಾಡಿದರೆ ನನಗೆ ಏನೇನೂ ತೋಚಲಿಲ್ಲ. ಉಯಿಲಿನ ಬಗ್ಗೆ ಅಲ್ಲಿ-ಇಲ್ಲಿ ಕೊಂಚ ಓದಿದ್ದೆ. ಉಯಿಲು ಬರೆಯೋರಿಗೆ ಕೆಲವು ಯೋಗ್ಯತೆಗಳು ಇರಬೇಕು. ಮಾನಸಿಕವಾಗಿ ಆರೋಗ್ಯವಾಗಿರಬೇಕು. ತಮ್ಮ ಆಸ್ತೀನ ಯಾರಿಗೆ ಬೇಕಾದರೂ ಬರೆಯಬಹುದು. ಬದುಕಿರುವವರೆಗೂ ಬರೆದವರದ್ದೆ ಹಕ್ಕು. ಆನಂತರಷ್ಟೇ ಅವರು ಬರೆದಿರುವವರಿಗೆ ಬರುತ್ತದೆ ಇತ್ಯಾದಿ....

ಬಾಜಿರಾಯರಿಗೆ ವಯಸ್ಸೇನೋ ಆಗಿದೆ. ಯಾವಾಗ ಬೇಕಾದರೂ 'ವಸ್ತು' ಇಲ್ಲವಾಗಬಹುದು. ಆದರೂ ಅವರ ದಿನಚರಿಯಲ್ಲಿ ಯಾವುದೇ ಬದಲಾವಣೆಯಿಲ್ಲವೆಂಬುದು ಊರಿನವರ ಅಂಬೋಣ.

ಮುಂಜಾನೆ ಎದ್ದು ನಿತ್ಯಕರ್ಮಗಳನ್ನು ಪೂರೈಸಿ ಮೇನ್ ರೋಡಿನಲ್ಲಿ ಸವಾರಿ ಹೊರಟರೆಂದರೆ ಎದುರಿಗೆ ಕಂಡವರಾರೂ ಕಣ್ತಪ್ಪಿಸಿ ಗಲ್ಲಿ ಬಿದ್ದು ಹೋಗದಿದ್ದು ಆಶ್ಚರ್ಯ!

ಕಂಡವರಿಗೆಲ್ಲಾ ಕೈ ಮುಗಿದು ನಡೆಯುವಾಗಿನ ಠೀವಿ ನೋಡಿದವರಿಗೇ ಗೊತ್ತು. ಕಚ್ಚೆ ಪಂಚೆ, ಕ್ಲೋಸ್ ಕಾಲರ್ ಕಪ್ಪು ಕೋಟು, ಸೋಡಾ ಕನ್ನಡಕ, ತಲೆಯ ಮೇಲೊಂದು ಟೊಪ್ಪಿ, ಕಾಲಿನಲ್ಲಿ ಗಿರಕಿ ಚಡಾವು. ಎರಡು ಕೈಗಳು ಕೋಟಿನ ಜೇಬಿನಲ್ಲಿರುತ್ತಿದ್ದುವು. ಬಲಗೈ ಆಗಾಗ ಜೇಬಿನಿಂದ ಹೊರಬಿದ್ದು ಬಾಯಿಯೆಡೆಗೆ ಹೋಗುತ್ತಿತ್ತು. ಅಕಸ್ಮಾತ್ ಆ ಸಮಯದಲ್ಲಿ ಎದುರಿಗೆ ಯಾರಾದಾದರೂ ದರ್ಶನವಾದರೆ ಎಡಗೈಯನ್ನು ಜೇಬಿನಿಂದ ಹೊರತೆಗೆದು ಅವರಿಗೆ ಕಲ್ಯಾಣಸೇವೆ, ಕಲ್ಲುಸಕ್ಕರೆ ಚೂರನ್ನು ಹೊರತೆಗೆದು ''ತಕ್ಕೊಳ್ಳಿ ಪ್ರಸಾದ'' ಎನ್ನುತ್ತಿದ್ದರು. ಎಷ್ಟೋ ದಿವಸಗಳ ನಂತರ ಗೊತ್ತಾಗಿದ್ದು, ಬಲಗಡೆಯ ಜೇಬಿನಲ್ಲಿರುತ್ತಿದ್ದುದು 'ಗೋಡಂಬಿ, ದ್ರಾಕ್ಷಿ' ಎಂದು ! ಇದಕ್ಕೆ ನಮ್ಮೂರಿನವರು ಹೇಳುತ್ತಿದ್ದ ಗಾದೆ ಮಾತು ''ಒಂದು ಕಣ್ಣಿಗೆ ಸುಣ್ಣ, ಒಂದು ಕಣ್ಣಿಗೆ ಬೆಣ್ಣೆ'' ಬಾಜಿರಾಯರ ಜೋಬು ಎನ್ನುತ್ತಿದ್ದರು ಇರಲಿ.

ಬಾಜೀರಾಯರು ಬಾಗೂರಿನ ರಸ್ತೆಯಲ್ಲಿ ಗಸ್ತು ತಿರುಗುತ್ತ ಸ್ಥಳೀಯ ಕಛೇರಿಗಳಿಗೆ ಭೇಟಿಕೊಟ್ಟು ಅಲ್ಲಿಗೆ ಬಂದ ಹೊಸ ಅಧಿಕಾರಿಗಳಿರಲಿ, ಗುಮಾಸ್ತರಿರಲಿ ಅವರೆಲ್ಲರ ಪರಿಚಯ, ಮಾಹಿತಿಗಳನ್ನು ಪಡೆದು ಅವರನ್ನು ತಮ್ಮ ಮನೆಯ ''ಮೇಜುವಾನಿಗೆ'' ಆಹ್ವಾನಿಸುತ್ತಲೂ ಇದ್ದರು. ಅವರುಗಳೊಂದಿಗೆ ಸ್ನೇಹ, ಸಲುಗೆಯಿಂದಲೂ ಇರುತ್ತಿದ್ದರು. ಈ ಬಗ್ಗೆ ಊರಿನ ಕೆಲವರು 'ಗುಸುಗುಸು' ಎನ್ನುತ್ತಲೂ ಇದ್ದರು. ಒಂದೊಂದು ಸಲ ಮೇನ್ ರೋಡಿನಲ್ಲಿ ಅಪರೂಪದವರು ಭೆಟ್ಟಿಯಾದರೆ ಸಮೀಪದಲ್ಲಿಯೇ ಇದ್ದ ಎಂಗಟಾಚಲಯ್ಯನ ಓಟಲಿಂದ ಕಾಫಿ ತರಿಸಿ ಅಲ್ಲಿಯೇ ಕಟ್ಟೆ ಮೇಲೆ ಕುಳಿತು ಕುಡಿಯುತ್ತಿದ್ದುದೂ ಉಂಟು.

ಬಾಜೀರಾಯರ ಉಯಿಲಿಗೂ ಅವರ ದಿನಚರಿಗೂ ಏನು ಸಂಬಂಧವೆಂದು ತಾವು ತಾಳ್ಮೆತಪ್ಪಿ ನನ್ನ ಮೇಲೆ ಕೋಪಿಸಿಕೊಂಡಿರಲಿಕ್ಕೆ ಸಾಧ್ಯವಿದೆ. ''ಇದೇನು ಇವನು ಬಂಗಾಳಿಯ ಬಂಕಿಮಚಂದ್ರರ ಕೃಷ್ಣಕಾಂತನ ಉಯಿಲು ಕಾದಂಬರಿಯಂತೆ ಬಾಗೂರಿನ ಬುರುಡೆ ಬಾಜೀರಾಯರ ಉಯಿಲನ್ನು'' ಬರೀತಿದಾನೇನ್ನೋಬೇಡಿ.

ಉಯಿಲು ಬರೆದದ್ದು ಬಾಜೀರಾಯರೆ, ಸಾಕ್ಷಿ ಹಾಕಿದ್ದು ಮಾತ್ರ ನಾನೆ. ಒಂದು ಬಾರಿ ಅಲ್ಲ ಅದೆಷ್ಟು ಸಲ ಬದಲಾಯಿಸಿದ್ದರೋ ಏನೋ ಗೊತ್ತಿಲ್ಲ. ಪ್ರತಿಸಾರಿಯೂ ''ಇದರಲ್ಲೇನಿಲ್ಲ, ಸುಮ್ನೆ ಸಹಿ ಹಾಕು ಆಮೇಲೆ ವಿವರವಾಗಿ ತಿಳಿಸ್ತೀನಿ'' ಎನ್ನುತ್ತಿದ್ದರು.

ಕಾನೂನಿನ ಪ್ರಕಾರ ಮರಣಕ್ಕೆ ಮುಂಚೆ ಎಷ್ಟು ಬಾರಿ ಬೇಕಾದರೂ ಬದಲಾಯಿಸಬಹುದಂತೆ. ಕೊನೆಯಲ್ಲಿ ಬರೆದ ವಿಲ್ ಮಾತ್ರ ಊರ್ಜಿತವಾಗಿರುತ್ತದಂತೆ. ಇದನ್ನು ಯಾವುದೇ ಸ್ಟಾಂಪ್ ಪೇಪರಿನಲ್ಲಿ ಬರೆಯಬೇಕಾಗಿಲ್ಲ. ಸಾಮಾನ್ಯ ಹಾಳೆಯ ಮೇಲೆ ಬರೆಯಬಹುದಂತೆ. ಉಯಿಲಿನಲ್ಲಿ ಬರೆದ ಸಹಿ, ಪೂರ್ಣ ವಿಳಾಸ, ದಿನಾಂಕ ಇರಬೇಕು. ನೋಂದಣಿ ಮಾಡಿಸುವ ಅಗತ್ಯವಿಲ್ಲ. ಆದರೆ ನೋಂದಣಿ ಉಯಿಲು ಕಳೆಯುವುದಿಲ್ಲ. ಮತ್ಯಾರು ಬದಲಿಸುವುದು ಸಾಧ್ಯವಿಲ್ಲ. ಹೀಗೆ ಕಾನೂನಿನ ಬಗ್ಗೆ ಬುರುಡೆ ಬಾಜೀರಾಯರು ಪೂರ್ಣ ಪ್ರಮಾಣದ ವೇಳೆಯ ತರಗತಿಯನ್ನು ತೆಗೆದುಕೊಂಡರಾದರೂ ಉಯಿಲಿನ ಗುಟ್ಟನ್ನು ಮಾತ್ರ ಬಿಟ್ಟಿರಲಿಲ್ಲ.

ಕಾಲಾನಂತರದಲ್ಲಿ ಒಂದು ದಿನ ಬಾಗೂರಿನಲ್ಲಿ ಬುರುಡೆ ಬಾಜೀರಾಯರು ನಿಧನರಾದರೆಂಬ ಸುದ್ದಿ ದೂರದೂರಿನಲ್ಲಿದ್ದ ನನಗೆ ಬಾಜೀರಾಯರ ಬದ್ಧ ವೈರಿಗಳೆಂದು ಗುರುತಿಸಿಕೊಂಡಿದ್ದ ಹಾಸನದ ಶ್ರೀರಂಗರಾಯರ ಸುದೀರ್ಘ ಪತ್ರದಿಂದ ತಿಳಿದು ಬಂತು. ಬುರುಡೆ ಬಾಜೀರಾಯರ ಉಯಿಲಿನ ಕುರಿತು ಬರೆದಿದ್ದರು.

ಬುರುಡೆ ಬಾಜೀರಾಯರ ವಿಲ್ ಯಾನೆ ಮರಣಶಾಸನದ ಸಾರಾಂಶ ಈರೀತಿ ಇತ್ತು:-

ಬುರುಡೆ ಬಾಜೀರಾಯರಿಗೆ ನಮ್ಮೂರಿನ ಜನರ ಪರಿಚಯವಿದ್ದುದ್ದು ಸರಿಯಷ್ಟೆ ಅವರ ಮನಸ್ಸಿನಲ್ಲಿದ್ದ ಹುಚ್ಚು ವಿಚಾರ ವಿಲ್ ಯಾನೆ ಮರಣ ಶಾಸನದ ಮೂಲಕ ಹೊರಬಿದ್ದಿತ್ತು. ''ತಮ್ಮ ನಿಧನಾ ನಂತರ ನಾನು ಮರಣ ಶಾಸನ/ವಿಲ್/ಉಯಿಲಿನಲ್ಲಿ ನಮೂದಿಸಿರುವ ನನ್ನ ಆಪ್ತಮಿತ್ರರು, ಅಧಿಕಾರಿಗಳು ಮತ್ತು ಇತರರನ್ನು ತಪ್ಪದೇ ನನ್ನ ವೈಕುಂಠ ಸಮಾರಾಧನೆಯ ದಿವಸ ಭೋಜನಕ್ಕೆ ಆಹ್ವಾನಿಸಿ ಅವರುಗಳನ್ನು ಸಂತೃಪ್ತಿಗೊಳಿಸುವುದು'' ಎಂದು ಕೆಳಗೆ ಗೀಟು ಹಾಕಿ ಬರೆದಿದ್ದರು.

ಸುಮಾರು ಮೂವತ್ತು ಮಂದಿಯ ಹೆಸರುಗಳೊಂದಿಗೆ ಉಯಿಲುಕರ್ತ ಬಾಗೂರು ಬುರುಡೇ ಬಾಜೀರಾಯರ ರುಜು. ಸಾಕ್ಷೀದಾರನಾಗಿ ನನ್ನದೂ ಸಹ ! ಇದು ಮೊದಲ ಉಯಿಲಿನ ಸಾರಾಂಶ ! ಆದರೆ ನಂತರದ ಬದಲಾವಣೆಯ ಉಯಿಲುಗಳಲ್ಲಿಯ ಮಂದಿಯ ಸಂಖ್ಯೆ ಕಡಿಮೆಯಾಗುತ್ತಾ ಹೋಗುತ್ತದೆ ! ಬಾಜೀರಾಯರು ನಿಧನರಾಗುವಾಗ ಬದಲಾದ ಅಂತಿಮ ಉಯಿಲಿನಲ್ಲಿದ್ದವರ ಸಂಖ್ಯೆ ಕೇವಲ ಒಂದು ಕೈ ಬೆರಳಿನಷ್ಟಿತ್ತೆಂದು ತಿಳಿದು ಬಂತು.

ಬಾಗೂರಿನ ಬುರುಡೇ ಬಾಜೀರಾಯರ ಉಯಿಲು ಸಧ್ಯ ನ್ಯಾಯಾಲಯದ ಕಟ್ಟೆ ಹತ್ತದೆ ಬಗೆಹರಿಯಿತೆಂಬುದೇ ಸಮಾಧಾನ !

## ಯಾರು ಯಾರಿಗೆ?

ರಮಣ ಮಹರ್ಷಿಗಳು ಪ್ರತಿ ದಿನ ಅರುಣಾಚಲ ಬೆಟ್ಟವನ್ನು ಒಂದು ಸುತ್ತು ಹಾಕುತ್ತಿದ್ದರು. ಒಂದು ದಿನ ಒಬ್ಬ ಅಪರಿಚಿತ ವ್ಯಕ್ತಿಯೊಬ್ಬ ಅವರು ಒಬ್ಬರೇ ನಡೆಯುತ್ತಿರುವುದನ್ನು ಗಮನಿಸಿ ಅವರ ದರ್ಶನ ಪಡೆಯಲು ಬೇಗ ಬೇಗ ಹೆಜ್ಜೆ ಹಾಕಿ, ಅವರನ್ನು ಮುಂದಕ್ಕೆ ಹಾಕಿ, ಅವರ ಮುಂದೆ ನಿಂತು "ಸ್ವಾಮೀಜಿ ಇಂದು ನನ್ನ ಜೀವನದ ಪರಮ ದಿನ. ನೀವು ನನಗೆ ದರ್ಶನ ನೀಡಿ ಆಶೀರ್ವದಿಸಿದ್ದೀರಿ" ಎಂದು ಕೈ ಮುಗಿದುಕೊಂಡು ಹೇಳಿದ.

"ನಿನ್ನ ಮಾತು ವಿಚಿತ್ರವಾಗಿದೆ. ಏನೀ ದರ್ಶನ ಮಾತು? ನನ್ನ ಮುಂದೆ ಬಂದು ನಿಂತು ನನಗೆ ದರ್ಶನ ನೀಡಿರುವುದು ನೀನು" ಎಂದರು ರಮಣ ಮಹರ್ಷಿಗಳು.

# ನೋವು ನಲಿವುಗಳ ಮಧ್ಯೆ

• ಪ್ರೊ. ಶ್ಯಾಮಲಾ ರವಿಶಂಕರ್

**ಬೋ**ರ್ಡು ಓದುವ ಹವ್ಯಾಸ ನನಗೆ ಈಗೀಗ ಒಂದು ಗೀಳಾಗಿ ಬಿಟ್ಟಿದೆ. ಅದಕ್ಕೇ ನಾನು ಬಸ್ಸಿನಲ್ಲಿ ಪರಿಚಯವಿದ್ದವರ ಪಕ್ಕದಲ್ಲಿ ಕೂಡುವುದನ್ನು ಆದಷ್ಟು ಮಟ್ಟಿಗೆ ತಪ್ಪಿಸಿಕೊಳ್ಳುತ್ತೇನೆ. ಕಿಟಕಿಯಾಚೆ ಕಾಣಸಿಗುವ ಪುಕ್ಕಟೆ ಮನರಂಜನೆಯ ಸದಾವಕಾಶ ನಾನೆಂದಿಗೂ ಬಿಡುವುದಿಲ್ಲ. ಬಸ್ಸಿನಲ್ಲಿ ತೂಕಡಿಸುವುದನ್ನೂ ಬಿಟ್ಟುಕೊಂಡು ಒಂದೇ ಸಮನೆ ಬೋರ್ಡುಗಳಿಗಾಗಿ ಎದುರು ನೋಡುತ್ತಿರುತ್ತೇನೆ.

ಇಂತಹುದೊಂದು ಸತ್ಸಮಯದಲ್ಲಿ ನನ್ನೆದುರಿಗೆ ಬಂದು ನಿಂತದ್ದು ನಮ್ಮೂರಿನ 'ಬೋನ್ ಸೆಟಿಂಗ್ ಸೆಂಟರ್' ಎಂಬ ನಾಮಾಂಕಿತ ತಲೆಬರಹಗಳು! ಮನೆಯಿಂದ ಯೂನಿವರ್ಸಿಟಿವರೆಗಿನ 12 ಕಿ.ಮೀ. ಪ್ರಯಾಣದಲ್ಲಿ ಎಂಟು ಬೋ.ಸೆ.ಸೆಂ.ಗಳು ತಂತಮ್ಮ ಬೋರ್ಡುಗಳನ್ನು ಎತ್ತಿ ಹಿಡಿದು ಹೆಮ್ಮೆಯಿಂದ ಬೀಗುತ್ತಿರುತ್ತವೆ! ಒಂದು 'ಭೌನ್ಸೆಟ್ಟಿಂಗ್ ಶೆಂಟರ್' ಆದರೆ ಇನ್ನೊಂದು 'ಬೌನ್ ಸಿಟ್ಟಿಂಗ್ ಸೆಂಟರ್'! ಮಗದೊಂದು 'ಬೂನ್ ಸೆಟ್ಲಿಂಗ್ ಸೆಂಟರ್' ಆದರೆ ಮತ್ತೊಂದು 'ಬೋನ್ ಸ್ಟಿಂಗ್ ಸೆಂಟರ್' ಇನ್ನೂ ಒಂದಾದರೋ 'ಬೋನ್ ಸ್ಟೆಂಟಿಂಗ್ ಸೆಂಟ್ರಲ್' ಇತ್ಯಾದಿ.... ಇಷ್ಟೆಲ್ಲಾ ಭಾಷಾ ವೈವಿಧ್ಯತೆಯನ್ನು ಕಂಡ ಮೊದ ಮೊದಲಲ್ಲಿ 'ಇಂತಹ ಕಡೆ ಯಾರು ಯಾತಕ್ಕೆ ತಾನೆ ಹೋಗ್ತಾರೆ' ಅನ್ನೋ ಥರ ಅನ್ನಿಸಿದ್ರೂ ಮನೆಯಲ್ಲಿ ವಿನೀತಳಾಗಿ ಪತಿದೇವರನ್ನು ಕೇಳಿದೆ.

'ಏನೂ... ಅಷ್ಟೂ ಗೊತ್ತಾಗಿಲ್ಲವೇ, ಸ್ವಲ್ಪ ಸ್ಪೆಲ್ಲಿಂಗ್‌ನ ತಪ್ಪು ಓದ್ಕೊಂಡಿದ್ದೀಯ ಅಷ್ಟೆ' ಅಂದ್ರು.

'ಹೋಗ್ಲಿ ಬಿಡಿ ನಿಮಗೂ ಗೊತ್ತಿಲ್ಲವೇನೋ, ಬೇರೆ ಯಾರಾದ್ರೂ ತೆಲುಗು ಚೆನ್ನಾಗಿ ಓದೋವ್ರನ್ನ ಕೇಳಿ ತಿಳ್ಕೊತೀನಿ.' ಅಂತ ಸಣ್ಣ ಮೂದಲಿಕೆಯೊಂದನ್ನ ಸ್ಪಷ್ಟಪಡಿಸಿದೆ.

'ಅಲ್ಲೇನಾದ್ರೂ ಬರೆದಿರಲಿ, ಅಲ್ಲಿನ ವ್ಯಾಪಾರವೇನಾದ್ರೂ ಇರಲಿ, ಆ ಅಂಗಡಿಗಳ ಮುಂದೆ ಇಟ್ಟಿರ್ತಾರಲ್ಲ ತಗಡಿನ ಶೀಟ್ ಮೇಲಿನ ಪೇಯಿಂಟಿಂಗ್, ಅದೇ ಯಾವುದೋ ನಟಿಯರ ಫೋಟೋ. ಅವುಗಳನ್ನು ನೋಡು, ನಿನಗೆ ಗೊತ್ತಾಗುತ್ತೆ.'

''ಬೋರ್ಡು ನೋಡಿ ಸ್ವಲ್ಪ ನಗರಪ್ಪ ಅಂದ್ರೆ, ಅದನ್ನು ನೋಡ್ದೇನೂ ಸಿನಿಮಾ

ನಟಿಯರ ಫೋಟೋ ನೋಡಿದ್ದೀನಿ ಅಂತೀರಲ್ಲ. ಏನು ಹೇಳ್ಬೇಕೋ ನಿಮ್ಮಂತಹವರಿಗೆ.''

'ತಲೆ ಎತ್ತಿ ಬೋರ್ಡಿನ ಸ್ಪೆಲ್ಲಿಂಗ್‌ಗಳನ್ನು ಎಡಿಟ್ ಮಾಡ್ತಾ ಡ್ರೈವ್ ಮಾಡಿದ್ರೆ ಆ ಅಂಗಡಿಗಳ ಒಳಗೆ ಹೋಗೋ ಪರಿಸ್ಥಿತಿ ಖಚಿತ. ಇನ್ನೂ ಒಂದ್ಮಾತು, ಅಲ್ಲಿ ಇಟ್ಟಿರೋ ದೊಡ್ಡ ದೊಡ್ಡ ಫೋಟೋಗಳನ್ನ ನೋಡ್ದೆ ಡ್ರೈವ್ ಮಾಡಿದ್ರೂ ಆ ಅಂಗಡಿಗಳ ಮೊರೆ ಹೋಗಬೇಕಾದಿತು. ನಾನು ಸಭ್ಯನೆಂಬುದನ್ನು ಮರೆಯದಿರು' ಎಂದರು ನಾಟಕೀಯವಾಗಿ. ಈಗ ನನ್ನ ಅಲ್ಪ ದೃಷ್ಟಿಯ ಮೇಲೆ ನನಗೇ ಕೇಡೆನಿಸಿತು. ಸ್ಪೆಲ್ಲಿಂಗ್ ಬಿಟ್ಟು ಬೇರೇನೂ ಇಲ್ಲವಾ ಅಲ್ಲಿ ನೋಡೋಕೆ? ಛೆ, ಎಂತಹ ಅನ್ಯಾಯ ! ಬೇರೆ ಎಲ್ಲೆಲ್ಲೋ ಕೂಡ ಕಣ್ಣರಳಿಸಿ, ಕುಗ್ಗಿಸಿ, ಮುಚ್ಚಿ ತೆಗೆದು ನೋಡಲೇಬೇಕು ನಾಳೆಯಿಂದ. ಇಲ್ಲದಿದ್ರೆ ಇಂಟರೆಸ್ಟಿಂಗ್ ವಿಷಯಗಳು ಕಣ್ಣಿಗೆ ಹೇಗೆ ತಾನೆ ಬೀಳುತ್ತೆ ಅಂದ್ಕೊಂಡೆ.

ಮಾರನೆಯ ದಿನ ಹಠಾತ್ತಾಗಿ ಕಾಲೇಜಿಗೆ ರಜ ಎಂದು ಪೇಪರ್‌ನಲ್ಲಿ ಕಂಡಾಗ ಬಹಳವೇ ಬೇಸರ(!)ವಾಯಿತು. ಹೀಗಾದ ನಂತರ ಒಂದಾನೊಂದು ದಿನ ಮೊದಲು ಸಿಗುವ ಅಂಗಡಿಯ ಫೋಟೋ ಒಂದೇ ಒಂದು ಕ್ಷಣ ನೋಡುವ ಅವಕಾಶ ಸಿಕ್ಕಿತು. ಬುರ್ರ್ರೋ ಎಂದು ಮುಂದೋಡಿದ ಬಸ್ಸ್‌ನಲ್ಲಿ ಆ ಮುಖ ಎಲ್ಲೋ ನೋಡಿದ ನೆನಪು ಕಾಡಲು ಶುರು! ಯಾರದು? ಯಾರದು? ಈ ಕೀಟ ಕೊರೆಯುತ್ತಿದ್ದ ಹಂಗೆ ಮುಂದಿನ ಫೋಟೋ ಡಿಸ್‌ಪ್ಲೇ ಕಾಣಿಸಿತು. ಬಹಳ ಶ್ರಮಪಟ್ಟ ಮೇಲೆ ಅನ್ನಿಸಿದ್ದಿಷ್ಟು – ಮಾಧುರಿ ದೀಕ್ಷಿತ್‌ನ ಹೋಲುವ ಮುಖಕ್ಕೆ ವಂಡರೆಗಣ್ಣು + ಉಬ್ಬು ಹಲ್ಲು ಸೂಪರ್ ಪ್ರೋಸ್ ಮಾಡಿದ ಮುಖ! ಎಡಗೈಗೆ ಪ್ಲಾಸ್ಟರ್ ಹಾಕಿದ್ದರು. ಅದೇ ಕೈ ಬೆರಳುಗಳು 'ಟಾ ಟಾ' ಹೇಳಲು ಯತ್ನಿಸಿದಂತಿತ್ತು. ಇನ್ನು ಮುಂದೆ ಈ ಚಿತ್ರಪಟಗಳನ್ನು ಇನ್ನಷ್ಟು ಕೂಲಂಕುಶವಾಗಿ ನೋಡಲೇಬೇಕೆಂಬ ಹಂಬಲ ಉಲ್ಬಣಿಸಿತು.

ಇನ್ನೊಂದು ಚಿತ್ರದಲ್ಲಿ ಅದೇ ಉಬ್ಬು ಹಲ್ಲಿನ ವಂಡೆರಾಕ್ಷಿ ಕಾಲು ತುಂಬ ಲಂಗ ಹಾಕಿ ಕುತ್ತಿಗೆಗೆ ಕಾಲರ್, ಹಾಗೂ ಒಂಥರಾ ಕ್ಲಿಪ್ ಹಾಕಿದ್ದಳು. ಅದೆಷ್ಟು ಆನಂದ ಅವಳ ಮುಖದಲ್ಲಿ! ನನಗೆ ಅರ್ಥವಾಗಲೊಲ್ಲದು. ನಾನೂ ನೆಕ್ ಕಾಲರ್ ಧಾರಿಣಿಯೇ. ಅವಳ ಹಾಗೇ ನಗು ಇರಲಿ, ಸದ್ಯ ಅಳುಮುಂಜಿ ಅಲ್ಲವಲ್ಲ ಅಂತ ಅಂದ್ಕೊಳ್ತೀನಿ ನನ್ನನ್ನ ನಾನೆ ! ನನಗಿಲ್ಲದ ನಗು ಇವಳಿಗ್ಯಾಕೆ ಅಂದ್ಕೊಂಡಾಗ ಫೈನಲ್ ಅನಾಲಿಸಿಸ್ 'ಕ್ಲಿಪ್' ಎಂದಿತು ನನ್ನ ಮನ ! ಸರಿ, ಅದಕ್ಕೇ ಅವಳು ನನಗಿಂತ ಸುಪೀರಿಯರ್ ಹ್ಯೂಮನ್ ಬೀಯಿಂಗ್ ಅಂದ್ಕೊಂಡೆ.

ಮೂರನೆಯ ಅಂಗಡಿಯ ಮುಂದಿನ ಚಿತ್ರಪಟಕ್ಕೆ ಬರೋಣ. ರೂಪದರ್ಶಿ ಹೆಚ್ಚು ಕಡಿಮೆ ಒಬ್ಬಳೇ, ಅಥವಾ ಹಿಂದಿನವಳ ಜುಡುವಾ ಬೆಹನ್ನೋ ? ಅಂತೂ ಸಾಕಷ್ಟು ಹೋಲಿಕೆಯಿತ್ತು. ಇವಳು ಸ್ಕರ್ಟ್ ಹಾಕ್ಕೊಂಡಿದ್ದಾಳೆ. ಬಾಲ್ ಡಾನ್ಸ್‌ನ ಭಂಗಿಯಲ್ಲಿ ಒಂದು ಕಾಲು ಮೆಟ್ಟಿಂಗಾಲಲ್ಲಿದೆ. ಅದಕ್ಕೇ ಪ್ಲಾಸ್ಟರ್ ಆದರೂ ಅದರ ಲೆಕ್ಕವಿಲ್ಲ (ನೋವಿನ ಲೆಕ್ಕಾರೀ ನಾನ್ಹೇಳ್ತಿರೋದು) 'ಲೆಟ್ ಅಸ್ ಹ್ಯಾವ್ ಎ ಡಾನ್ಸ್' ಅನ್ನೋ ಸಂತಹ ಸೂಸುತ್ತಿದ್ದಾಳೆ !

ಇನ್ನೂ ಒಂದು ಚಿತ್ರಪಟದಲ್ಲಿರುವ ಹುಡುಗಿಗೆ ಅದೇ (ಹಿಂದಿನವಳಂತೆ) ಮೈಕಟ್ಟು! ಕೂದಲು ಬಹಳ ಗುಂಗುರು ಮಾಡಿಬಿಟ್ಟಿದ್ದರು. ಇವಳಿಗೆ ಅಂಗೈಗೆ ಪ್ಲಾಸ್ಟರ್. ಅದನ್ನು ಇವಳು

ಅತುಳಾನಂದದಿಂದ ಬಿಸಿ ಮುಟ್ಟಿದಾಗ ಉಫ್ ಉಫ್ ಎಂದು ಊದುಕೊಳ್ಳುವಂತಹ ಯತ್ನದಲ್ಲಿದ್ದಳು. ಮೊದಲೇ ಉಬ್ಬಿದ ಹಲ್ಲು, ಇನ್ನು ನಗುವ ಯತ್ನದಲ್ಲಿ ಇನ್ನೂ ಹೆಚ್ಚಿನ ದಂತದರ್ಶನ!

ಇನೊಂದು ಚಿತ್ರಪಟಕ್ಕೆ ಸಾಗೋಣ. ಈ ಹುಡುಗಿಗೆ ತಲೆ, ಕಣ್ಣು, ಕಿವಿ, ಮೂಗು ಎಲ್ಲಾ ಬ್ಯಾಂಡೇಜ್ ಆವರಿಸಿ ಬಿಟ್ಟಿತ್ತು. ಆದರೆ ಬಾಯಿ ಮಾತ್ರ ಓಪನ್ ಟು ಸ್ಮೈಲ್ ಅಲ್ಲ ಲಾಫ್! ಇದನ್ನು ನೋಡಿದರೆ ಮಿಲಿಯನ್ ಡಾಲರ್ ಸ್ಮೈಲ್ ಇರಲಿ, ನಾನಂದುಕೊಂಡಷ್ಟು ದಂತವಕ್ರಣೆ ಅಲ್ಲವೇನೋ ಅನ್ನಿಸಿತು. ಪಕ್ಕದಲ್ಲಿದ್ದ ಇನ್ನೊಂದು ಚಿತ್ರದಲ್ಲಿ ಈ ಹುಡುಗಿ ಮೈನಸ್ ಬ್ಯಾಂಡೇಜ್. ಇವಳ ನಗುವಿಗಾಗಿ ಮುಖವೆಲ್ಲಾ ತಲಾಷ್ ಮಾಡಿದ್ರು ಸಿಗಲಿಲ್ಲ! ಇವಳಿಗೆ ಬ್ಯಾಂಡೇಜ್ ತೆಗೆದು ಬಿಟ್ಟಿದ್ದಕ್ಕೆ ಅಸಮಾಧಾನ. ನೋವಿನಲ್ಲೇ ನಗುವ ಕಾಣುವ ಬಾಲೆ ಎಲ್ಲಾ ಸರಿಯಾದ ಮೇಲೆ ಮುಖ ಸಿಂಡರಿಸಿ ಕೊಂಡಿದ್ದಾಳೆ ! ಈ ಚಿಂತೆ ಇಂದ ಆವೃತಳಾದ ನಾನು ಮಿಕ್ಕ ಚಿತ್ರಪಟಗಳನ್ನು ಹೆಚ್ಚಾಗಿ ಹಿಡಿಸಿಕೊಳ್ಳಲಿಲ್ಲ.

ಮನೆಗೆ ಬಂದ ಮೇಲೆ ಇವರನ್ನು ಮಾತಿಗೆಳೆದೆ, 'ರೀ, ಈವತ್ತು ನಿಮ್ಮ ಆದೇಶದ ಮೇರೆಗೆ ನಿಮ್ಮ ಫ್ರೆಂಡಿನ ಚಿತ್ರಗಳನ್ನು ಬಹಳ ಸೂಕ್ಷ್ಮವಾಗಿ ಗಮನಿಸಿ ಹಲವು ನಿರ್ಧಾರಗಳನ್ನು ಮಾಡಿದ್ದೇನೆ. ಇದೆಲ್ಲಾ ರಿಯಲ್ ಟೈಂ ರಿಸರ್ಚ್, ರಿಯಲಿ' ಅಂದೆ.

ನಂ. 10 ಡೌನಿಂಗ್ ಸ್ಟ್ರೀಟ್‌ನಲ್ಲೊ, ವೈಟ್ ಹೌಸ್‌ನಲ್ಲೋ (ಮಾನಸಿಕವಾಗಿ) ಇದ್ದವರು ಒಮ್ಮೆಲೇ ತಬ್ಬಿಬ್ಬಾದರು: ''ಏನೇ ಅದೂ, ನೀ ಹೇಳ್ತಿರೋದೂ....'' ''ಅದೇರಿ, ಹಿಂದೊಂದು ಸಲ ನಾನು ನಿಮ್ಮನ್ನ ಬೋರ್ಡುಗಳಿಂದ ಸ್ವಾರಸ್ಯವಾದ ಹಾಸ್ಯ ಅನುಭವಿಸಿ ಅಂದಿದ್ದಕ್ಕೆ ನೀವು ಹುಡಿಗೀರ ಫೋಟೋ ನೋಡು, ಅಂದ್ರಲ್ಲ ತರಲೆ ಬಿಟ್ಟು ಏನು ಹೇಳ್ಬೇಕೂಂತ ಇದ್ದೀಯೋ ಅದನ್ನ ವದರುವವಳಾಗು'' ಎಂದರು.

''ಅದೇರಿ, ಬೋನ್ ಸೆಟ್ಟಿಂಗ್ ಅಂಗಡಿಗಳವರು ಇಟ್ಟಿರೋ ಚಿತ್ರಪಟಗಳು – ಅದೇ ಯಾರೋ ಸಿನಿಮಾ ನಟಿಯರ ಪೈಂಟಿಂಗ್‌ಗಳನ್ನು ನೋಡೋದ್ರಲ್ಲಿ ಬೋರ್ಡುಗಳ ಸ್ಪೆಲ್ಲಿಂಗ್‌ಗಳ ತಮಾಷೆ ಮಿಸ್ ಮಾಡ್ಕೊಂಡ್ರಿ ಅಂತ ಹೇಳ್ದೆ. ಜ್ಞಾಪಕ ಇದೆ ತಾನೆ?''

'ಮತ್ತೇ ಅದೇ ರಾಗ ಎಳೀತಿದ್ದೀಯಲ್ಲ, ಮಾರಾಯ್ತಿ? ಏನು ತಪ್ಪು ಆ ಚಿತ್ರಪಟಗಳು ದೊಡ್ಡದಾಗಿ ಫುಟ್‌ಪಾತಿನ ಹೊರಗೆ ರಾರಾಜಿಸುತ್ತಿದ್ದಾಗ ಅದನ್ನು ನೋಡದೆ ಅವುಗಳಿಗೆ ಢಿಕ್ಕಿ ಹೊಡೀತಿದ್ರೆ ಆ ಅಂಗಡಿಗೆ ನಾವು ಕ್ಲಯಂಟ್ಸ್ ಆಗಬೇಕಾಗುತ್ತದೆ. ಹಾಗೆ ಈ ಕಿಷ್ಕಿಂದದಲ್ಲಿ ತಲೇನೂ ಎತ್ಕೊಂಡು ಬೋರ್ಡುಗಳನ್ನು ವಿಶ್ಲೇಷಿಸುತ್ತಾ ಇದ್ರೆ ಒಂದೇ ಗುರಿ – ಮೇಲಕ್ಕೆ – ಮುಟ್ಬೇಕಾಗುತ್ತೆ ನಾವುಗಳು !'

'ಇಲ್ಲದ ಸಲ್ಲದ ಕಾರಣ ಹೇಳೋ ಬದಲು ಓದಿಲ್ಲಾಂತ ಒಪ್ಕೊಳ್ಳಿ. ಹೋಗಲಿ, ನಾಳೆ ನಿಮ್ಮ ಆ ಡಬ್ಬಾ ಸ್ಕೂಟರ್‌ಗೆ ರೆಸ್ಟ್ ಕೊಟ್ಟು ನನ್ನ ಜೊತೆ ಬಸ್ಸಿನಲ್ಲಿ ಬನ್ನಿ. ಅದೂ ಆಗೊಲ್ವೇ. ನನ್ನ ರಿಸರ್ಚ್ ನನ್ನನ್ನ ಎಲ್ಲಿಗೆ ಲೀಡ್ ಮಾಡ್ತು' ಅಂತ ಅಂದ್ರೆ ''ಹುಡುಗಿಯರು ನೋವಿನಲ್ಲೂ ನಲಿಯುತ್ತಾರೆ. ನೋವಿಲ್ಲದಿದ್ದರೆ ಅಷ್ಟೇನೂ ನಲಿವು ಇಲ್ಲ.'' ಇದು ನನ್ನ ಸಿದ್ಧಾಂತ. ಇದಕ್ಕೆ

ಒಂದು annexure : ''ಕೆಲವೊಮ್ಮೆಯಾದರು ಹಲ್ಲುಬ್ಬಿಣೆಯರಿಗೂ ದೃಷ್ಟಿ ಸೊಟ್ಟಿಣೆಯರಿಗೂ ರೂಪದರ್ಶಿಯಾಗಲು ಛಾನ್ಸು ಸಿಕ್ಕೇ ಸಿಗುತ್ತದೆ. ರೂಪಿ – ಕುರೂಪಿಯಿಬ್ಬರೂ ತಂತಮ್ಮ ಮಧ್ಯೆ ಅಸೂಯೆ ಪಡಬೇಕಾಗಿಲ್ಲ. Every one has a place in modelling ಹೇಗಿದೆ ನನ್ನ ಸಿದ್ಧಾಂತ?'' ಎಂದು ಬೀಗಿದೆ.

'ಹಾಗಾದರೆ..... ತಮಗೂ ಉಂಟೋ...... ಸ್ಸಾರಿ, ಸ್ಸಾರಿ..... I mean...... ನೋ..... I did not mean...... ಹೋಗಲಿ, ಊಫಿ ಅಂದೆ ಬಿಡು.'

'ಅಯ್ಯೋ ಬಿಡೀಪ್ಪಾ ನನ್ನ ವಿಷಯಾನಾ. ನಾಳೆ ನಾನೂ ಹಾಗೂ ನನ್ನ ಫ್ರೆಂಡ್ ವಾರುಣಿ ಇಬ್ಬರೂ ಒಂದು ಪ್ಲಾನ್ ಹಾಕಿದ್ದೀವಿ. ಆ ಅಂಗಡಿಗೆ ಹೋಗಿ ಇನ್ನಷ್ಟು ತಮಾಷೆ ನೋಡೋಣ ಅಂತಿದ್ದೀವಿ.'

'ಏ, ಏನಂತಿದ್ದೀಯಾ? ಸುಮ್ಮನೆ ಇರೋಕಾಗಲ್ವಾ ನಿಂಗೆ? ಹೋಗಿ ಇನ್ನೇನಾದ್ರೂ ಅವಾಂತರದಲ್ಲಿ ಸಿಕ್ಕಿ ಹಾಕ್ಕೊಂಡೀಯೇ....'

ಮಾರನೆಯ ದಿನ ನಾನೂ ವಾರುಣಿ ಬೋನ್ ಸೆಟ್ಟಿಂಗ್ ಸೆಂಟರೊಂದಕ್ಕೆ ಹೊರಟೆವು. ಮೊದಲು ನಾನು ಸ್ವಲ್ಪ ಕುಂಟುತ್ತಾ ಪ್ರವೇಶಿಸಿದೆ. ತಕ್ಷಣ ಜುಬ್ಬಾ ಹಾಗೂ ಟೋಪಿಧಾರಿಯೊಬ್ಬ ಎಲ್ಲಿಂದಲೋ ಪ್ರತ್ಯಕ್ಷವಾಗಿ ಟೋಪಿ ತೆಗೆದಿರಿಸಿ ಕೈಮುಗಿದು ನಗುನಗುತ್ತ ನನ್ನನ್ನು ಸ್ವಾಗತಿಸಿದ. ''ಬಾಗಿಲೊಳು ಕೈಮುಗಿದು...'' ಎಂದು ಗುನುಗಿತು ನನ್ನ ಅಂತರಂಗ : ಇರಲಿ, ಆ ವಿಷಯ ಮುಖ್ಯವಲ್ಲ ನನ್ನ ಕುಂಟು ಕಾಲು ಅವನಿಗೆ ಅದೆಷ್ಟು ಸಂತಸ ನೀಡಿತು ಅಂದರೆ ಅವನ ಬೋರ್ಡು ನನಗೆ ಕರಿದದಕ್ಕಿಂತ ಬಹುಪಾಲು ಹೆಚ್ಚು.

'ಬನ್ನಿ ತಾಯಿ, ಬನ್ನಿ ಮೊಣಕಾಲು ಅಲ್ಲವೇ' ಅಂದ.

ಕೆಳಗೆ ಹಾಸಿದ್ದ ರಜಾಯಿ ಮೇಲೆ ನನ್ನ ಕುಳ್ಳಿರಿಸಲು ಯತ್ನಿಸಿದ. ನಾನೂ ಕೂರಲಾರದವಳಂತೆ ನಟಿಸಿದೆ. ಅವನ ಸಹಾಯ, ಅರ್ಥಾತ್ ದಬ್ಬಿದ್ದರಿಂದ ನಾನು ತಪಕ್ ಅಂತ ಕುಕ್ಕರಿಸಿದೆ.

'ಎಲ್ಲಿ..... ಚಾಚೀಮಾ, ಆ ಕಾಲನ್ನ ಹುಂ ಇತ್ಲಾಗೆ, ಹೀಗೆ ವೆರಿಗುಡ್.' ಈ ಮೊಣಕಾಲೇ ಎಲ್ಲಾ ಲೇಡಿಸ್‌ಗಳಿಗೂ ತೊಂದರೆ ಪಾಯಿಂಟ್. ಅಲ್ಲ, ಅಲ್ಲ, ಜಾಯಿಂಟು ಎಂದು ತನ್ನ ಜಾಣ್ಮೆಗೆ ತಾನೇ ನಕ್ಕ.

'ಅಲ್ಲ, ಹಿಮ್ಮಡಿ' ಅಂದೆ.

'ಅದೇ, ಎಲ್ಲಾ ಶುರು ಆಗೋದು ಅಲ್ಲೇ (ಎಲ್ಲಿ?) ನೀವು ಕಾಲೇಜು ಡೇಸ್‌ನಲ್ಲಿ ಹೈಹೀಲ್ಡ್ ಶೂ ಹಾಕ್ಕೊಂಡು ಈಗ ಅದರ ರಿಟರ್ನ್ ಗಿಫ್ಟ್ ಪಡೀತೀರ.'

'ನಾನಿನ್ನೂ ಕಾಲೇಜಿಗೆ ಹೋಗ್ತಾನೇ ಇದೀನಿ' ಅಂದೆ ನೋವಿನ ನಟನೆಯ ಮಧ್ಯೆ. 'ಪಾಪ, ಯಾರ್‍ಯಾರಿಗೆ ಯಾವಾಗ ಯಾವಾಗ ಅವಕಾಶ ಕೊಡ್ತಾನೋ ಆ ದೇವ್ರು.' ಈಗ

ಹಿಮ್ಮಡಿಯಿಂದ ಮೊಣಕಾಲಿಕೆ ಹತ್ತತ್ತೆ ನೋವು. ಅಂದ್ಹಾಗೆ ಈ ಕಾಲದಲ್ಲಿ ಎಲ್ರೂ ಕಾಲೇಜಿಗೆ ಹೋಗೋವ್ರೇ. ಎಲ್ಲಿ, ಕಾಲನ್ನ ಸ್ವಲ್ಪ ನೀಡಿ.. ಹಾಗೇ.. ಇನ್ಮೇಲಾದ್ರೂ ಹೀಲ್ಸ್ ನಿಮ್ಮ ಮಕ್ಕಳಿಗೂ ಕೊಡಿಸ್ಬೇಡಿ. ನೋಡಿದ್ರಾ, ನಿವು ಎಷ್ಟೊಂದು ಕೋಪರೇಟ್ ಮಾಡ್ತಿದೀರಾ! ನಿಮ್ಮದು ಅರ್ಲಿ ಸ್ಟೇಜ್, ಬೇಗನೇ ಗುಣ ಹೊಂದಬಹುದು. ಒಂದೆರಡು ಸಿಟ್ಟಿಂಗ್ ಅಷ್ಟೇ.

ನಮ್ಮವರು ''ಲೇ... ಹುಷಾರು....'' ಎಂದದ್ದು ಗುರುತಿಗೆ ಬಂತು.

ಅಷ್ಟರಲ್ಲಿ ಅವನು ''ಯೋ, ಬಿಟ್ರೊ .... ಎಲ್ಹೋದ್ಯೋ... ಮಗನೇ... ಆ ಪೀಲಿ ಬಾಟ್ಲೀಲಿರೋ ಕಾಚಿ ಎಣ್ಣೆ ತಾರ್ಲಾ ಬೇಗ'' ಎಂದ.

ಪೀಲೀ ಬಾಟ್ಲಿ ಹಿಡಿದ 6-7 ವರ್ಷದ ನಿದ್ರಾವೃತನಾದ ಚಿಳ್ಳೆಯೊಂದು ಆವಿರ್ಭವಿಸಿ ''ಇಕೋ..... ಇಂದು.....'' ಅಂದ್ಬಿಟ್ಟು ಬಾಟಲ್‌ನ ಅಲ್ಲೇ ಇಟ್ಟು ಬಂದ ದಾರಿಯಲ್ಲೇ ಅಂತರ್ಧಾನವಾಯಿತು.

ಆ ಎಣ್ಣೆಯನ್ನು 1/2 ಚಮಚದಷ್ಟು ಕೈಗೆ ಬಗ್ಗಿಸಿಕೊಂಡವನೇ ನನ್ನ ಹಿಮ್ಮಡಿಗೆ ಉಜ್ಜಲು ಪ್ರಾರಂಭಿಸಿದ. ನನ್ನ ಊಹೆಯಲ್ಲಿ ಅದು ಎಳ್ಳೆಣ್ಣೆ ಎರಬಹುದು. ಅದಕ್ಕೆ ಇಂಗು, ಪಚ್ಚಕರ್ಪೂರ ಸೇರಿಸಿರಬೇಕು, ವಾಸನೆಗಳಿಂದ ತಿಳಿದಿದ್ದಷ್ಟು. ಕಾಲಿಗೆ ಹಚ್ಚಿದಾಕ್ಷಣ ಲಬ ಲಬೋ ಅನ್ನೋ ಉರಿ! ಅಂದೆ ಕೂಡ. ಅದರಲ್ಲಿ ಮೆಣಸಿನಕಾಯಿ + ಅರಿಶಿನ ಕೂಡ ಇದ್ದಿರಬಹುದು. ನನ್ನ ಶಿಷ್ಯವೃಂದವಿದ್ದಿದ್ದರೆ ಆ ಕ್ಷಣ What a Combi ! ಅಂದಿರುತ್ತಿದ್ದರು. ಪರವಾಗಿಲ್ಲ ಜೀವಕ್ಕಾಗಲಿ, ಚರ್ಮಕ್ಕಾಗಲಿ ಅಪಾಯವೇನೂ ಇಲ್ಲ ಎನಿಸಿ 'ಕೊಡಿ, ನಾನೇ ಹಚ್ಚಿಕೊಳ್ತೇನೆ' ಎಂದೆ.

'ಇಲ್ಲ, ಅದು ನನ್ನ ಕೆಲಸ, ನೀವು ಹಾಯಾಗಿ ವಿಶ್ರಮಿಸಿ.'

'ಇಲ್ಲ, ನೀವು ನನ್ನ ನರಗಳನ್ನ ಹಾಗೂ ರಕ್ತನಾಳಗಳನ್ನ ಕಿತ್ತೊಗೆದು ಬಿಡ್ತೀರೇನೋ ಎಂದೆನಿಸ್ತಿದೆ ಅದಕ್ಕೇ ನನಗೇ ಬಿಡಿ.'

ಅವನಿಗೆ ಸ್ವಲ್ಪ ಅಪಮಾನವಾದಂತಾಯಿತು.

'ನಿಮ್ಮಿಷ್ಟ, ಆದರೆ, ಸ್ವಲ್ಪವಾದರೂ ನೋವಿಲ್ಲದಿದ್ದರೆ, ನಿಮಗೆ ನಲಿವು ಸಿಗುವುದಿಲ್ಲ' ಓಹೋ ಮತ್ತೆ ನೋವು ನಲಿವುಗಳ ಸಮ್ಮಿಲನ! ಎಂದು ಮನಸ್ಸಿನಲ್ಲೇ ನಗುತ್ತಿದ್ದೆ. ಇದಾದ ಮೇಲೆ ತಪಸ್ಸಿಗೆ ಕೂಡುವ ಋಷಿಗಳ 'Y' ಆಕಾರದ ಕೋಲನ್ನು ಕೈಗೆ ಆಧಾರವಾಗಿಟ್ಟು ಕೊಳ್ಳೋ ಹಾಗೆ ನನ್ನ ಹಿಮ್ಮಡಿಗೆ ಆ ಕೋಲನ್ನು ಇರುಕಿಸಿ ಹಾಗೇ ಇರಲು ಹೇಳಿ ಪರದೆಯ ಹಿಂದೆ ಸರಿದು ಹೋಗಿ ಸಮೋಸ - ಚಾಯಿ ಬಾಯಿಗೆ ಹಾಕ್ಕೊಂಡು ಬಂದ. ''ಬಂಡ್ವಾಳಿಲ್ಲದ ಬಡಾಯಿ'' ಜ್ಞಾಪಕಕ್ಕೆ ಬಂತು.

ಈಗ ಎಂಟರ್ ವಾರುಣಿ! ಚಟ್ ಚಟ್ ಎಂದು ಒಳಗೆ ಬಂದು ನಿಂತಳು. ನಮ್ಮ ಹೀರೋ ಮುಖ ಹಿಗ್ಗಿ ಹೀರೇಕಾಯಿ ! 'ಬನ್ನಿ ಬನ್ನಿ' ಎಂದು ಆದರದ ಸ್ವಾಗತ ನೀಡಿ, ಬೆನ್ನೆಲುಬು, ಹೌದು ತಾನೇ... ಅಂದ.

'ಏನೂ ಇಲ್ಲಪ್ಪಾ....' ಅಂತ ರಾಗ ಎಳೀತಿದ್ದಾಗ್ಲೇ.

'ಇದೇ ನಮ್ಮ ಲೇಡಿಸ್‌ಗಳಿಗಿರೋ ಸಹಿಷ್ಣುತೆ, ಟಾಲರೆನ್ಸ್, ಎಷ್ಟೇ ನೋವಿದ್ರೂ ಇಲ್ಲಾಂತ ನಲಿವು ಪ್ರದರ್ಶಿಸುತ್ತಾರೆ. ಬನ್ನಿ, ಎಲ್ಲಾ ಸರಿ ಮಾಡ್ಬಿಡ್ತೀನಿ. ನೆಟ್ಟಗೆ ಮಾಡ್ಬಿಡ್ತೀನಿ' – ಆತಂಕ, ಎಲ್ಲಿ ಎರಡನೇ ಕ್ಲಯಂಟ್ ಕೈಬಿಟ್ಟು ಹೋಗುತ್ತೋಂತ.

'ಸ್ವಲ್ಪ ಕೇಳ್ತೀರಾ ನನ್ನ ಮಾತನ್ನ...' ಅಂದಳು ದರ್ಪದಿಂದ.

ಯಾಕೋ ಸ್ವಲ್ಪ ಬೆವರಿದ ನಮ್ಮ ಹೀರೋ, ತಕ್ಷಣ ಚೇತರಿಸ್ಕೊಂಡು, ಕಳಕಳಿಯಿಂದ 'ಡ್ರಗ್ ಕಂಟ್ರೋಲ್ ಮೇಡಂ? ನಾನು ಕೊಡೋ ವೈದ್ಯ ವಂಶಪಾರಂಪರ್ಯದಿಂದ ಬಂದಿರೋದು. ಇಷ್ಟಕ್ಕೂ ಇದು ಮನೆವೈದ್ಯ. ನಾನೇನೋ ಒಂದಿಷ್ಟು ಅಂದರೆ ಜೀವನಕ್ಕೆ ಸಾಕಾಗೋಷ್ಟು ಸಂಪಾದಿಸಿದ್ರೆ ಸಾಕಾಗಿದೆ. ಮೇಡಂ, ಅದರಲ್ಲಿ ಏನೂ ಕಲಬೆರಕೆ ಮಾಡೋನಲ್ಲ' ಎಂದು ಪಹ ಪಹಲಾಡಿದ.

'ನಾನು ಡ್ರಗ್ ಕಂಟ್ರೋಲ್‌ನವಳೂ ಅಲ್ಲ, ನಿನ್ನ ಔಷಧಿಗೆ ಸಿಕ್ಕಿ ಬೀಳುವವಳೂ ಅಲ್ಲ. ನಿನ್ನ ಹತ್ತಿರ ನನ್ನ ಸಂಶಯಗಳಲ್ಲಿ ಕೆಲವನ್ನಾದರೂ ನಿವಾರಿಸ್ಕೊಳ್ಳೋಕೆ ಬಂದಿದೀನಿ. ನಿನ್ನ ಸಮಯ ವ್ಯರ್ಥ ಮಾಡಿದ್ದಕ್ಕೆ ಅಷ್ಟಿಷ್ಟು ದುಡ್ಡು ಕೊಡ್ತೀನಿ' ಅಂದಾಗ ಅವನು ಸಮಾಧಾನದ ನಿಟ್ಟುಸಿರು ಬಿಟ್ಟ. ಅವಳನ್ನು ಕುಳ್ಳಿರಿಸಿದ ಕೂಡ !

ಅವನ ವಂಶ, ಹಿರಿಯರಿಂದ ಅವನು ಕಲಿತ ವಿದ್ಯೆ ಬಗ್ಗೆ ನಾಲ್ಕು ಪ್ರಶ್ನೆ ಕೇಳಿದ ವಾರುಣಿ 'ಈ ಹುಡುಗಿ ಯಾರು' ಎಂದು ಆ ಚಿತ್ರ ಪಟಕ್ಕೆ ಕೈ ತೋರಿಸಿದಳು.

''ಯಾಕೆ, ಯಾರಾದರೂ, ಕಳೆದು ಹೋದ ಹುಡುಗಿಯ ಹಾಗಿದ್ದಾಳಾ ಹೋಲಿಕೆಯಲ್ಲಿ?''

'ಅಲ್ಲ, ದಿನಾ ನೋಡ್ತೀನಿ ಅದನ್ನ. ಅದಕ್ಕೆ ಕೇಳಿದೆ ಅಷ್ಟೆ' ಅಂದಳು.

'ಗೊತ್ತಿಲ್ಲ, ಯಾರೋ ಪೈಂಟಿಂಗ್ಸ್‌ನವನು ಬರೆದುಕೊಟ್ಟ ಅಷ್ಟೇ.'

'ಸಿಟಿಲಿರೋ ನಿಮ್ಮ ಕಸುಬಿನವರೆಲ್ಲಾ ಇವಳದ್ದೋ ಅಥವಾ ಇವಳ ಅವಳಿ ತಂಗಿಯದೋ ಪೈಂಟಿಂಗ್ ಇಟ್ಕೊಂಡಿದ್ದಾರೆ. ಅದಕ್ಕೆ ಈ ರೂಪದರ್ಶಿ ನಿಮ್ಮವರಲ್ಲೇ ಒಬ್ಬಳಾ ಅಥವಾ ನೀವು ಕಾಂಟ್ರಾಕ್ಟ್ ತೊಗೊಂಡಿದ್ದೀರಾ?'

'ಅದ್ಹೇಗೆ ಮೇಡಂ, ಬೇರೆ ಬೇರೆ ಅಂಗಡಿಗಳಲ್ಲಿ ಬೇರೆ ಬೇರೆ ಪೋಸುಗಳಲ್ಲಿ ಬರೆಸಿದ್ವಿ.'

ವಂಡರ್ ಗಣ್ಣು, ಉಬ್ಬು ಹಲ್ಲು ಇತ್ಯಾದಿ ಬೇರೆ ಬೇರೆ ಪೋಸುಗಳು, God bless!

''ಬರೆಸಿದ್ವಿ'' ಅಂದ್ರೆ?

ಈ ಎಲ್ಲಾ ವ್ಯಾಪಾರಾನು ನಮ್ಮ ಫ್ಯಾಮಿಲೀದೆ. ಈ ಸಿಟಿನಲ್ಲಿರೋ ಎಲ್ಲಾ ಈ ತರದ ಅಂಗಡಿ ಪ್ರೊಪ್ರೈಟರುಗಳು ನಮ್ಮ ವಂಶಜರೇ !

'ಅಂದರೆ, ಒಟ್ಟಾರೆ ಈ ಹುಡುಗೀಗೆ ಎಲ್ಲಾ ಜಾಯಿಂಟ್ಸ್‌ಗೆ ತೇಪೆ ಹಾಕ್ಬಿಟ್ರಿ ನೀವೆಲ್ಲಾ ಸೇರಿ ! ನನ್ನ ಮೆಚ್ಚುಗೆ ನಿಮ್ಮ ವೈವಿಧ್ಯತೆಗೆ, ಅಲ್ಲಾ ನಿಮ್ಮ ಪೈಂಟರ್‌ನ ಕ್ರಿಯೇಟಿವಿಟಿಗೆ. ಒಂದು ಕಡೇ

ಪ್ರಶ್ನೆ!' ಎಲ್ಲಾ ಕಡೆ ಪ್ಲಾಸ್ಟರ್ ಹಾಕ್ಕೊಂಡಾಗ ತುಂಬಾ ಖುಷಿಯಾಗಿದ್ದು ನಗ್ತಾ ಇರ್ತಾಳಲ್ಲ ಈ ರೂಪದರ್ಶಿ? ಹಾಗೂ ಒಂದು ಕಡೆ ಪ್ಲಾಸ್ಟರ್ ಬಿಚ್ಚಿದಾಗ ನಗು ಕಾಣಸಿಗುವುದಿಲ್ಲ ಅವಳ ಮುಖದಲ್ಲಿ? ಅವಳಿಗೆ ಇನ್ನೂ ನೋವಿದ್ದಾಗಲೇ ನೀವು ಪ್ಲಾಸ್ಟರ್ ಬಿಚ್ಚಿ ಬಿಟ್ಟಂಗಿದೆ!

'ಓ, ಅದಾ... ಅವಳ ದೃಷ್ಟಿಯಿಂದಲೂ ನೋಡಿ ಮೇಡಂ. ಇನ್ನುಮೇಲೆ ಕಂಟ್ರಾಕ್ಟ್ ಆಗ್ಹೋಯ್ತಲ್ಲಾ ಅಂತ ಬೇಜಾರಾಗಿರಬಹುದು. ಆ ಭಾವವನ್ನು ಪೈಯಿಂಟರ್ ಅವಳ ಮುಖದಲ್ಲಿ ಕಂಡದ್ದನ್ನು ಕಂಡ ಹಾಗೆ ಬಿಡಿಸಿದ್ದಾನೆ ಅಷ್ಟೇ.'

ಅಬ್ಬಾ Never say die spirit ಇವನದು ! ಅಂದ್ಕೊಂಡ್ವಿ.

ಅಷ್ಟರಲ್ಲಿ, 'ನಾನು ಇಲ್ಲಿನ ದಿನಪತ್ರಿಕೆಯಲ್ಲಿ ಕಾಲಂನ ಬರೀತೀನಿ. ಇನ್ನೆರಡು ದಿನಗಳಲ್ಲಿ ನಮ್ಮ ಈ ಭೇಟಿಯ ವಿವರಣೆ ನೀವು ಪತ್ರಿಕೆಯಲ್ಲಿ ಕಾಣಬಹುದು. ಬರ್ತೇನೆ ನಮಸ್ಕಾರ !' ಎಂದ ವಾರುಣಿ ಒಂದೈವತ್ತರ ನೋಟನ್ನು ನೀಡಿ ಹೊರಬಿದ್ದಳು.

ನಾನೂ ನನ್ನ ಪಾಲಿನ ಮನರಂಜನೆಗೆ ಶುಲ್ಕ ತೆತ್ತು (ಪಾದಸೇವೆ?) ಹೊರಟೆ.



# ಹಾಸ್ಯ, ಅಪರಂಜಿ ಮತ್ತು ನಾನು

• ದತ್ತೂರಾವ್ ರಮೇಶ್

**ಭ**ರತಮುನಿಯ "ನಾಟ್ಯಶಾಸ್ತ್ರ" ಕೃತಿಯಲ್ಲಿ ಅವನು ಕಂಡ ರಸಗಳು ಒಂಭತ್ತು. ನವರಸಗಳು - ಶೃಂಗಾರ, ರೌದ್ರ, ಕಾರುಣ್ಯ, ಭೀಭತ್ಸ, ಭಯಾನಕ, ವೀರ, ಶಾಂತ ಮತ್ತು ಅದ್ಭುತ. ಎರಡನೆಯದೇ ಹಾಸ್ಯ. (ಗಮನಿಸಬೇಕಾದ ಒಂದು ಮುಖ್ಯ ವಿಷಯ ಮೊದಲನೆಯದು ಇಲ್ಲದಿದ್ದರೆ ಮಾನವ ವಂಶವಾಗಲೀ, ಮತ್ತು ರಸಗಳಲ್ಲಿ ಎಂಟೂ ಇರುತ್ತಿರಲಿಲ್ಲವಷ್ಟೇ!) ಸರಳವಾದ ಮುಗುಳ್ನಗೆಯಿಂದ ಹಿಡಿದು ಬಿದ್ದು-ಬಿದ್ದು ನಗುವತನಕ ಎಲ್ಲ ಮಟ್ಟದ ಹಾಸ್ಯವನ್ನು ಭರತಮುನಿ ಬಳಸಿದ್ದಾನೆ. ಮಿತ್ರರೊಡನೆ ಚೇಷ್ಟೆ ಕಪಿತ್ವ ಇವೆಲ್ಲವೂ ಹಾಸ್ಯರಸದಲ್ಲೇ ಕೂಡಿ ಬರುತ್ತವೆ. ಅವನ ಪ್ರಕಾರ ಹಾಸ್ಯದ ಬಣ್ಣ ಬಿಳಿ ಮತ್ತು ಅದರ ಅಧಿ ದೇವತೆ "ಪ್ರಮೋತ". ಇರಲಿ ಇನ್ನು ಉತ್ತರಿಸಲು ಕಷ್ಟವಾದ ಶಾಶ್ವತ ಪ್ರಶ್ನೆ. ಕನ್ನಡದಲ್ಲಿ ಹಾಸ್ಯವೇಕೆ ಕಡಿಮೆ ಇದ್ದಹಾಗಿದೆ? ಇದನ್ನು, ನಾನು ಮೊದಲೇ ಹೇಳಿದಂತೆ ಅನೇಕ ವಿದ್ವಾಂಸರು ಅಪರಂಜಿಯಲ್ಲಿಯೇ ಉತ್ತರಿಸಲು ಪ್ರಯತ್ನಿಸಿದ್ದಾರೆ.

ಕ್ಲಬ್ಬಿನಲ್ಲಿ ಕುಳಿತು ನಮ್ಮ ಪ್ರಿಯವಾದ ವಿಷವನ್ನು ಹೀರುತ್ತಾ ನಮಗೆ ಆಪ್ತರಾದ ಮಿತ್ರವೃಂದದೊಡನೆ ಕುಳಿತಾಗ ಹಾರುವ ಹಾಸ್ಯ ಚಟಾಕಿಗಳು ಬೇರೆಲ್ಲೆಡೆ ಅಥವಾ ಬರವಣಿಗೆಯಲ್ಲಿ ಏಕೆ ಹರಿಯುವುದಿಲ್ಲಾ? ಒಂದು ಉತ್ತರ : ಸಲ್ಲದ, ಬೇಡದ ಮಡಿವಂತಿಕೆ : ಕಾಲ ದೇಶಗಳಿಗೆ ಅನ್ವಯಿಸದ ಮಡಿವಂತಿಕೆ.

ಕೆಲವು ದಶಕಗಳ ಹಿಂದೆ "ರೀಡರ್ಸ್ ಡೈಜೆಸ್ಟ್"ನಲ್ಲಿ ಪುಟದ ಕೆಳಭಾಗದಲ್ಲಿ ಬರುತ್ತಿದ್ದ ಚುಟುಕಗಳಲ್ಲಿ ಓದಿದ ಒಂದು ಹೇಳಿಕೆ ಜ್ಞಾಪಕವಿದೆ. "A child becomes an adult two years after it thinks it has, and three years before the parents think it will" : ಒಂದು ಮಗು ತಾನು ಬಲಿತೆ ಎಂದು ತಿಳಿದ ಎರಡು ವರ್ಷಗಳ ನಂತರ ಬಲಿಯುತ್ತದೆ. ಅವನ ತಂದೆತಾಯಿಗಳು ಮಗು ಬಲಿಯುತ್ತೆ ಎಂದುಕೊಳ್ಳುವುದಕ್ಕೆ ಮೂರು ವರ್ಷಗಳ ಮುಂಚೆಯೇ ಬಲಿಯುತ್ತದೆ. ನಾನು ಜಟಾಯು ಬಿಡಿ. ಆದರೆ ನನ್ನ ನಂತರದ ಪೀಳಿಗೆಯವರೂ ನಮ್ಮ ಹಳೆಯ ಮೌಲ್ಯಗಳನ್ನೇ ಇಟ್ಟುಕೊಂಡು, ಅವು ಈಗಲೂ relevant ಎಂದೇ ನಂಬಿದ್ದಾರೆ!

ನಮ್ಮ ಪೀಳಿಗೆಯವರಿಗೆ, ನಮ್ಮದೇ ಸಮಾಜದಲ್ಲಿ, ನಮ್ಮದೇ ಪರಿವಾರಗಳಲ್ಲಿ, ನಮ್ಮ ಮಕ್ಕಳಲ್ಲೇ ಆಗುತ್ತಿರುವ, ಆಗಿರುವ ಬೃಹತ್ತರ ಬದಲಾವಣೆಗಳ ಅರಿವೇ ಇಲ್ಲ ಎನಿಸುತ್ತದೆ.

ಅವರು ಇಂಟರ್ನೆಟ್ಟಿನಲ್ಲಿ ಓದಬಹುದಾದ/ಓದುವ, ನೋಡಬಹುದಾದ/ನೋಡುವ ವಿಷಯಗಳು ನಾವು ನಮ್ಮ ಮೂವತ್ತನೆಯ ವಯಸ್ಸಿನಲ್ಲಿಯೂ ತಿಳಿದಿರಲಿಲ್ಲ! "Live in" ''72 ಗಂಟೆಗಳ ಮಾತ್ರೆ'', "vanila flavoured candom" ಇತ್ಯಾದಿ, ಇತ್ಯಾದಿ ವಿಷಯಗಳೆಲ್ಲಾ ಇವರಿಗೆ ತಿಳಿದಿದೆ. ತಮ್ಮ ಮಗ-ಮಗಳು ಒಂದು ನಿರ್ದಿಷ್ಟ ಸಮಯದಲ್ಲಿ ಎಲ್ಲಿದ್ದಾರೆ, ಏನು ಮಾಡುತ್ತಿದ್ದಾರೆ ಎಂಬುದು ಎಲ್ಲ ತಂದೆ-ತಾಯಿಗಳಿಗೆ ಗೊತ್ತೆ? "live in" ಜಾತಿ-ಮತಗಳ ಸಂಪೂರ್ಣ ಅಲಕ್ಷ್ಯ, ಸೆಕ್ಸ್‌ಗೆ ಇರುವ ಪ್ರಾಧಾನ್ಯತೆ ಇತ್ಯಾದಿ - ಸಮಾಜ ಹೀಗಿರುವಾಗ, ನಮ್ಮ ಹಾಸ್ಯದ ಬರವಣಿಗೆಯಲ್ಲಿ ನಾವು 19ನೇ ಶತಮಾನದ ಮಡಿವಂತಿಕೆಯನ್ನೇ ಮುಂದುವರಿಸುತ್ತಿದ್ದರೆ ನಮ್ಮ ಹಾಸ್ಯ ನಮ್ಮಂತಹ ಗೃಧ್ರಗಳನ್ನು ಬಿಟ್ಟು, ಸಮಕಾಲೀನ ಯುವಕ ಯುವತಿಯರಿಗೆ ನೀರಸ, ಅಸಮಕಾಲೀನ, ಅಸಮಂಜಸ ಆಗುವುದಿಲ್ಲೇ?

ಅಮೆರಿಕಾದ ಸಂಸ್ಕೃತಿ, ಜೀವನ ಶೈಲಿ ಸಂಪೂರ್ಣವಾಗಿ ನಮ್ಮ ಸಮಾಜದ ಪೀಳಿಗೆಗಳನ್ನು ಆವರಿಸಿ ಮುಳುಗಿಸಿ ಬಿಟ್ಟಿದೆ. ಜೀನ್ಸ್ (ಅದರಲ್ಲೂ frayed, ಪೃಷ್ಠ ಕಾಣಿಸಬೇಕು) ಭುಜದಿಂದ ಒಂದು ಗಿಟಾರನ್ನು ನೇತುಹಾಕಿಕೊಂಡು ಹಜಾಮನನ್ನೇ ಕಾಣದ ಕೊಳಕು ಗಡ್ಡ-ಮೀಸೆ, ಎದೆ ಕಾಣಿಸುತ್ತಿರಬೇಕು, ರಂಗದ ಮೇಲೆಲ್ಲಾ ಎಗರಾಡಿ, ಕುಣಿದು, ಕುಪ್ಪಳಿಸಿ, ಬಗ್ಗಿ, ಮಲಗಿ, ಎದ್ದು ಮಾಡುವ ಭಯಂಕರ ಶಬ್ದಗಳು, ಅವರಿಗೆ ಮ್ಯೂಸಿಕ್ ! ಇವರೂ ಬರೆಯು ಮ್ಯೂಸಿಕ್ ಇಂಗ್ಲೀಷಿನಲ್ಲೇ. ಸಂಭಾಷಣೆಯಲ್ಲಿ ಉಪಯೋಗಿಸುವ ಪದಗಳೂ ಅಮೆರಿಕನ್ನರದೇ : ನಾಲ್ಕಕ್ಷರದ ದೇವನಾಗರಿ ಪದಗಳು, ಡ್ರಗ್ ಸೇವನೆ ; Free sex, ಚಿಕ್ಸ್, ಹಂಕ್, ''ಕೂಲ್ ಮ್ಯಾನ್'' ........... ''ಗೆಟ್ ಹೈ'' ಇತ್ಯಾದಿ. ಸಾವಿರಾರು ಹಣತೆತ್ತು, ವಿದೇಶದಿಂದ ಬರುವ ಇಂಥದೇ ''ಸಂಗೀತಗಾರ''ರ ಕಚೇರಿಗಳಿಗೆ ಲಕ್ಷಾಂತರ ಯುವಕ - ಯುವತಿಯರು ಹೋಗಿ ಅಲ್ಲಿಯೇ ಡ್ರಗ್ ಸೇವಿಸಿ, ಚೇಳಿನಿಂದ ಕಚ್ಚಿಸಿಕೊಂಡ ಹೆಂಡ ಕುಡಿದ ಕಪಿಗಳಂತೆ ಕುಣಿಯುತ್ತಾರೆ. ಇದು ಸ್ವಾಮಿ, ನಮ್ಮ ಸಮಾಜದ ಸತ್ಯ. ಯಾವುದಾದರೂ ಒಂದು ಪಬ್ ಖಾಲಿಯಿರುತ್ತದೆಯೇ, ಯಾವುದಾದರೂ ಒಂದು ''ಬಾರ್ ಗರ್ಲ್'' ಮುತ್ತೈದೆಯಂತೆ ಸೆರಗು ಮುಚ್ಚಿರುತ್ತಾಳೆಯೇ? ಇದು ಸಾರ್, ಇಂದಿನ ಓದುಗರ ಸಮುದಾಯ.

ನಿಜ, ನಮ್ಮಂಥವರೂ ಇದ್ದಾರೆ ; ಹಳೆಯ ಮೌಲ್ಯಗಳು, ಶಾಸ್ತ್ರೀಯ ಸಂಗೀತ, ಕನ್ನಡ ಸಾಹಿತ್ಯ, ಪೂಜೆ, ಪುನಸ್ಕಾರ ಇತ್ಯಾದಿ. ಆದರೆ ಮೇಲೆ ವಿವರಿಸಿದ ಸಮಾಜದ ಭಾಗವನ್ನು ನಿರ್ಲಕ್ಷ್ಯ ಮಾಡಿ, ನಮ್ಮ ಮಡಿವಂತಿಕೆಯನ್ನೇ ಮುಂದುವರಿಸಿದಲ್ಲಿ, ಅವರೂ ಬರೊಲ್ಲಾ, ನಾವೂ ಇರೊಲ್ಲ ನಮ್ಮ ಕನ್ನಡದ ಹಾಸ್ಯವೂ ಹಾಸ್ಯಾಸ್ಪದ !

ನಮ್ಮ ಶಿವಕುಮಾರರು ಓದಿರುವ ಸಾಹಿತ್ಯದ ಆಳ - ವಿಸ್ತಾರ ಅವರ ಬರವಣಿಗೆಯಲ್ಲೇ ಪ್ರತಿಬಿಂಬವಾಗುತ್ತದೆ. ಅವರ ಹಸನ್ಮುಖದ ವಾಗ್ಝರಿಯನ್ನು ಕೇಳಿದವರೇ ಅದರ ಸವಿಯನ್ನು ಬಲ್ಲರು. ಇವರೂ ಕೂಡ ಒಮ್ಮೆ ನಾನು ಕಳುಹಿಸಿದ್ದ ಒಂದು (ಕಾಳಿದಾಸನದೆಂದು

ಹೇಳಲಾದ) ಸಂಸ್ಕೃತ ಶ್ಲೋಕ ಮತ್ತು ಅದರ ಕನ್ನಡ ಅನುವಾದವನ್ನು ಚೆನ್ನಾಗಿ ಮೆಚ್ಚಿದರೂ, ಸಮಾಜದ ಕಟ್ಟಿಗೆ ಬಿದ್ದು ಪಾಪ ಕೆಲ ಮಡಿವಂತ ಓದುಗರು ಅದಕ್ಕಿಂತ ಕಡಿಮೆ ಮಟ್ಟದ "revealing" ಹಾಸ್ಯವನ್ನು ಅಶ್ಲೀಲ ಎಂದಿದ್ದರು, ಎಂಬ ಕಾರಣದಿಂದ ಪ್ರಕಟಿಸುವುದು ಬೇಡ ಎಂದಿದ್ದರು. (ಸಂಪಾದಕರು ಅನುಭವಿಸಬೇಕಾದ ಧರ್ಮಸಂಕಟ, ಕಷ್ಟ ಅವರಿಗೇ ಗೊತ್ತು!) ಇವರ ಧರ್ಮಸಂಕಟವನ್ನು ಅರ್ಥಮಾಡಿಕೊಳ್ಳುವುದು ಸುಲಭ. ಆದರೆ, ನಮ್ಮ ಸಾಹಿತ್ಯದಲ್ಲಿ, ಅದೂ ಧಾರ್ಮಿಕ ಗ್ರಂಥಗಳಲ್ಲಿ ಬರುವ explicit ವಿವರಗಳು pornography ಆದಾವು! ಭಾಗವತದಲ್ಲಿ ಬರುವ ಲಕ್ಷ್ಮಿ ಅಥವಾ ಮೋಹಿನಿಯರ ವರ್ಣನೆ, ವಿಶ್ವಾಮಿತ್ರನ ತಪಸ್ಸಿನ ಭಂಗ, ಇಂದ್ರನ ಕೇಳಿ – ಇದನ್ನು ನಮ್ಮ ಅಪರಂಜಿಯಲ್ಲಿ ಅಚ್ಚುಮಾಡಿದರೆ ಸೆನ್ಸಾರ್ ಮಾಡಿಬಿಡುತ್ತಾರೆ ಸ್ವಾಮಿ!

ಶಂಕರಾಚಾರ್ಯರಂತಹ ಆಜನ್ಮ ಬ್ರಹ್ಮಚಾರಿಗಳು ಸೌಂದರ್ಯಲಹರಿಯಲ್ಲಿ ವರ್ಣಿಸಿದ ಸ್ತ್ರೀ ಸೌಂದರ್ಯ ನಮ್ಮ ಬರವಣಿಗೆಗಳಲ್ಲಿ ತರಲಾದೀತೆ ! ಈ ಇಬ್ಬಗೆಯ ಮನೋಭಾವ, ತಾವು ಮಾಡುವುದೊಂದು, ಸೋಗು ಹಾಕುವುದು ಇನ್ನೊಂದು – ಇದರಿಂದ ಕೂಡ ನಮ್ಮ ಸಹಜವಾದ ಹಾಸ್ಯದ ಹೊನಲು ಅದುಮಿ ನಿಲ್ಲುತ್ತದೆ.

ಹೀಗೆ ನಮ್ಮ ಮೇಲೆ ನಾವೇ ಹಾಕಿಕೊಂಡಿರುವ, ಸತ್ಯವಲ್ಲದ ನೈತಿಕತೆಯ ಬಗ್ಗೆ ನಿಜವೂ ಅಲ್ಲದ, ಸಹಜವಲ್ಲದ ಧೋರಣೆ ಇತ್ಯಾದಿಗಳಿಂದಾಗಿ ನಮ್ಮ ಹಾಸ್ಯದ ಬರವಣಿಗೆಯಲ್ಲಿ ಹಾಸ್ಯ ಎಲ್ಲಿದೆ ಎಂದು ಹುಡುಕಬೇಕು.

ದಯಮಾಡಿ ಕ್ಷಮಿಸಿ : ನಮ್ಮ ಹಲವು ಹಾಸ್ಯ ಪತ್ರಿಕೆಗಳ ಹೆಚ್ಚು ಲೇಖನಗಳಲ್ಲಿ ಹಾಸ್ಯ ಎಲ್ಲಿದೆ ಎಂದು ಹುಡುಕಿದರೂ ಸಿಗವಲ್ಲದು. ಬಹಳ constipationನಿಂದ ನರಳುತ್ತಿರುವ ವ್ಯಕ್ತಿ, ತಿಣುಕಿ ತಿಣುಕಿ ಹೊರಬಹುದಾದ ವಸ್ತುವಿನಂತೆ, ನಮ್ಮ ಬಹುತೇಕ ಬರವಣಿಗೆಗಳಲ್ಲಿ ಕಂಡುಬರುವ ಹಾಸ್ಯ ಅಷ್ಟೇ ಪ್ರಮಾಣ. ಈ ಉಪಮಾನವನ್ನು ಮಡಿವಂತರು scatalogical (ಸೊಂಟದ ಕೆಳಗಿನ) ಜೋಕ್ ಎಂದು ಪರಿಗಣಿಸಬಹುದು. (ಹಾಗೆ ನೋಡಿದರೆ ಸಾವಿರಾರು ವರ್ಷಗಳ ನಂತರ Freud - Yung ಅವರುಗಳು ಪ್ರತಿಪಾದಿಸಿದ ಆದರೆ ಅಷ್ಟೇ ಸಾವಿರ ವರ್ಷಗಳ ಮುಂಚೆ ನಮ್ಮ ಭರತಮುನಿ, ವಾತ್ಸ್ಯಾಯನ, ಲಿಂಗಂ–ಯೋನಿಪೂಜೆ, ಬಹುಸಂಖ್ಯಾತ ಇತರ ಕೃತಿಗಳು ಗಂಡು–ಹೆಣ್ಣುಗಳ ಪರಸ್ಪರ ಆಕರ್ಷಣೆಯೇ ಸಂಸಾರವನ್ನು ನಡೆಸುತ್ತಿರುವ ಮೂಲಸೂತ್ರ ಎಂದು ತಾನೆ?)

ಇತ್ತೀಚೆಗೆ ನಮ್ಮ ನೆರವಿಗೆ – ನೆರವು ಏನು, ಆಸರೆಯೇ ಎಂದು ಬಂದ ಇಂಟರ್ನೆಟ್ಟಿನಿಂದ ಉಗುಳ್ಳಗೆ ಇಲ್ಲ ಎಂದರೂ ಮುಗುಳ್ನಗೆಯಾದರೂ ಬಂದೇ ಬರುವಂತಹ ಹಾಸ್ಯ ಚಟಾಕಿಗಳು, ಕನ್ನಡಕ್ಕೆ ಭಾಷಾಂತರವಾಗಿ, ಬಹುತೇಕ ಎಲ್ಲ ಕನ್ನಡ ಪತ್ರಿಕೆಗಳನ್ನೂ ಸಂವೃದ್ಧಿಸಿವೆ. ಈ ತರಹವಾದ ಜೋಕುಗಳಲ್ಲಿಯೂ ಹೆಚ್ಚು ಜನಪ್ರಿಯವಾಗಿ ಹೆಚ್ಚು ಆನಂದ ತರುವವೆಂದರೆ, ಮತ್ತೆ ಸೆಕ್ಸ್ ಸಂಬಂಧವಿದ್ದ ಜೋಕುಗಳೇ ! ಇಲ್ಲಿಯೂ ಕೂಡ ಬಹಳ ಚೆನ್ನಾಗಿರುವ ಆದರೆ ಮೇರೆ ಮೀರಿದೆಯೆಂದು ಬಿಟ್ಟ ಚಟಾಕಿಗಳೇ ಹೆಚ್ಚು.

ನನ್ನ ಅನುಭವದಲ್ಲಿ the most readable passages with a stream of humour always underneath ಅಂದರೆ ನಮ್ಮ ತಾಯಿ ಕೊರವಂಜಿಯ ಮಗ ಶೌರಿಯ ಕತೆಗಳು, ಅದನ್ನು ಇಂಗ್ಲೀಷಿನಿಂದ ಕನ್ನಡಿಸಿ, ಕನ್ನಡದ್ದೇ original ಅನ್ನುವಷ್ಟು ಚೆನ್ನಾಗಿ ಬಂದಿದೆ adaptation. ಇದನ್ನೇ ಇನ್ನೂ ಹೆಚ್ಚಾಗಿ ನಾವೇಕೆ ಮಾಡುವುದಿಲ್ಲ, ಮಾಡಬಾರದು? ಅದು ತಪ್ಪೇ? ಕಳೆದ ಶತಮಾನದ ಇಪ್ಪತ್ತರ ದಶಕದಲ್ಲಿ ಇಂಗ್ಲೀಷಿನಿಂದ ಸ್ಫೂರ್ತಿ ತೆಗೆದುಕೊಂಡು ಕನ್ನಡದ ಸಾಹಿತ್ಯ - ಅದರಲ್ಲೂ ಕಾವ್ಯ ಸ್ಫೋಟಗೊಳ್ಳಲಿಲ್ಲವೆ? (ಬೀ.ಎಮ್. ಶ್ರೀ ಸೀತಾರಾಮಯ್ಯ ಇತ್ಯಾದಿ)

ನಮ್ಮ ಕನ್ನಡವೇ ಶ್ರೇಷ್ಠ "ಎಲ್ಲಾದರು ಇರು, ಎಂತಾದರು ಇರು, ಎಂದೆಂದಿಗೂ ನೀ ಕನ್ನಡವಾಗಿರು" ಎಂಬ ಹೇಳಿಕೆಯಿಂದ ಹಿಡಿದು, ಕಾವೇರಿ ನೀರು, ಹೊಗೇನಕಲ್, ಬೆಳಗಾವಿ, ಕಾಸರಗೋಡು, ಬೆಲೆದುಬಾರಿ, ಕರೆಂಟ್ ಇಲ್ಲ, ಕನ್ನಡದ ಚಲನಚಿತ್ರಗಳಿಗಿಂತ ಹಿಂದಿ/ ತಮಿಳು/ತೆಲುಗು/ಇಂಗ್ಲೀಷ್ ಚಿತ್ರಗಳು ಹೆಚ್ಚು ಜನಪ್ರಿಯ ಇತ್ಯಾದಿ, ಇತ್ಯಾದಿ ಯಾವ ವಿಷಯವಾದರೂ ಸರಿ, ಕನ್ನಡದ "ಅಭಿಮಾನಿ"ಗಳು ಕಲ್ಲು ತೂರಿ, ರಸ್ತೆ ಅಡ್ಡಗಟ್ಟಿ, ಕನ್ನಡ ಸಾಹಿತ್ಯವನ್ನು ಉದ್ಧಾರ ಮಾಡುತ್ತಾರೆ. ಈ ಕನ್ನಡಮ್ಮನ ಕಂದಗಳಿಗೆ "ಹ" ಮತ್ತು "ಅ" ಗಳು ಎರಡು ಬೇರೆ ಬೇರೆ ಅಕ್ಷರಗಳು ಎಂದು ಇಂದೂ ಕೂಡ ತಿಳಿಯದು. ಇವರಿಗೆ "ಹಾಸ್ಯ"ದ ಅರ್ಥ ಏನು? (ದಿ. ಡಾ. ರಾಜಕುಮಾರ್, ನಟ ನರಸಿಂಹರಾಜು ಅವರನ್ನು "ಹಾಸ್ಯ ಚಕ್ರವರ್ತಿ" ಎಂದು ವರ್ಣಿಸಿದ್ದರು.) ಇನ್ನೂ "ಕಟ್ಟರ್ ಪಂಥಿ"ಗಳು ಕಂಪ್ಯೂಟರ್ ಪದಕ್ಕೆ ಗಣಕಯಂತ್ರ ಎನ್ನುತ್ತಾರೆ, (ಹಾಗಾದರೆ ಕ್ಯಾಲ್ಕ್ಯುಲೇಟರ್‌ಗೆ ಏನು?) softwareಗೆ ಮೃದುಪದಾರ್ಥ (!) (pathology reportನಲ್ಲಿ ಬರುವಂತೆ "soft and well formed" ಎನ್ನುವ ಹಾಗೆ!), ಪೋಲೀಸ್ ಸ್ಟೇಷನ್ ಆರಕ್ಷಣ ಠಾಣೆಯಾಗಿದ್ದು, ಎಂಜಿನಿಯರು ಅಭ್ಯಂತರರಾಗಿದ್ದು ಟೆಲಿಫೋನ್ ದೂರಭಾಷಿಯಾಗಿದ್ದು ಟೆಲಿವಿಷನ್ ದೂರದರ್ಶನವಾಗಿದ್ದು ಇಂಟರ್‌ನೆಟ್ಟೆ ಅಂತರ್ಜಾಲ, ಬಿಡಿ ಇದೆಲ್ಲಾ ಹಳೆಯ ಕಥೆ. ರಸಪ್ರಶ್ನೆಯಲ್ಲಿ ರಸ ಹುಡುಕಬೇಕು. ಕ್ವಿಜ್ ಎಂದಿದ್ದರೆ ಸಾಕಿತ್ತಲ್ಲಾ. ಇನ್ನು ಕ್ರಿಕೆಟ್ ಕಾಮೆಂಟರಿ ಕನ್ನಡದಲ್ಲಿ ಕೇಳಿದರೆ, ಅದಕ್ಕೆ ಮುಂಚೆ ವಮನ ಮಾಡಲು ಸ್ಥಳ ಹುಡುಕಿಕೊಳ್ಳಬೇಕು. ಇದನ್ನೆಲ್ಲಾ ಮಾಡಿ ಪ್ರೋತ್ಸಾಹಿಸುತ್ತಿರುವವರು ಕನ್ನಡದ ಕಣ್ಮಣಿಗಳು: "ಅನುಮಂತ ಆರಿಬಂದು ರಾಕ್ಸಸನ ಅಲ್ಲು ಉದರ್ಸ್ದ" ಅನ್ನುವ ವಿದ್ವಾಂಸರು ಪ್ರತಿ ಬಡಾವಣೆಯಲ್ಲಿ ಆಟೋರಿಕ್ಷಾ ಸ್ಟ್ಯಾಂಡ್(ನಿಲ್ದಾಣ)ದ ಬಳಿ ಎತ್ತರದ ಒಂದು ಕಂಭ, ಅದರ ಮೇಲೆ ಕನ್ನಡದ ಬಾವುಟ, ಕೆಳಗೆ ಚಿನ್ನದ ಬಣ್ಣ ಹಚ್ಚಿದ "ದಿ. ಡಾ. ರಾಜ್‌ಕುಮಾರರೇ?" ಎನ್ನುವಂತಹ ಪ್ರತಿಮೆ. ಇದಕ್ಕೆಲ್ಲಾ ಹಣ ಪ್ರೋತ್ಸಾಹ ಎಲ್ಲಿಂದ ಎಂದು ಎಲ್ಲರಿಗೂ ತಿಳಿದ ವಿಷಯ) ಇದು ಕನ್ನಡದ ಪ್ರಗತಿ.

ಭಾಷೆಯ ಸಮೃದ್ಧಿ ಅದರ ಪದಗಳ ಸಮೃದ್ಧಿಯಲ್ಲಿದೆ. ಇಂಗ್ಲೀಷ್ ಡಿಕ್ಷನರಿಗೆ ಪ್ರತಿವರ್ಷ ಬೇರೆ ಬೇರೆ ಭಾಷೆಗಳ ಸಾವಿರಾರು ಪದಗಳು ಸೇರುತ್ತವೆ. "ಚಪಾತಿ, ಕಡಿ, ಜಂಗಲ್" ಇತ್ಯಾದಿ. ಕನ್ನಡದಲ್ಲಿ ತಿಣುಕಿ ತಿಣುಕಿ ಭಾಷಾಂತರ ಮಾಡಿ, ಹೇಳುವವರಿಗೂ ಕೇಳುವವರಿಗೂ

''ಇದೇನು'' ಎಂದೇ ತಿಳಿಯಲಾಗದಂತಹ ಪದಗಳು.

ಭಾಷಾ ಸಮೃದ್ಧಿ ಇದ್ದರೆ, ಸಾಹಿತ್ಯ (ಕೇವಲ ಕಾದಂಬರಿಗಳಲ್ಲ, physics chemistry, mathematics, astrophysics surgery, ಇತ್ಯಾದಿ ಬೆಳೆಯಬಲ್ಲವು). ಇವುಗಳ ಮಕ್ಕಳಂತಿರುವ ಹಾಸ್ಯ, ಅಳು, ನಗು ಹೇಗೆ ಬಂದಾವು?

ಇಲ್ಲಿ ಇನ್ನೊಂದು ವಿಷಯ ಹೇಳಲೇಬೇಕು. ನವರಸಗಳಲ್ಲಿ ಹಾಸ್ಯ ಒಂದು ರಸ. ಆದರೆ ಅದೊಂದೇ ರಸವಲ್ಲ. ಒಂದು ಲೇಖನದಲ್ಲಿ ಬರೀ ಹಾಸ್ಯವೇ ಇರುವಂತೆ ಬರೆದರೆ ಅದನ್ನು ಓದುವುದೇ ಕಷ್ಟ. ಉಪ್ಪಿಲ್ಲದೇ ಊಟಮಾಡುವುದು ಕಷ್ಟ. ಆದರೆ, ಬೇರೆ ಏನೂ ಇರದೆ ಬರೀ ಉಪ್ಪು ಮಾತ್ರ ಹಾಕಿದ ಅಡಿಗೆ ತಿನ್ನಬಹುದೇ? ನಮ್ಮ ಶ್ರೀನಿವಾಸ ವೈದ್ಯರ ಲೇಖನವೊಂದರಲ್ಲಿ, ಅವರನ್ನು ತಂದೆಯವರು ಬೀಳ್ಕೊಡಲು ರೈಲ್ವೇನಿಲ್ದಾಣಕ್ಕೆ ಬಂದ ಸನ್ನಿವೇಶ ನಿಜವಾಗಿ ಕಣ್ಣೀರು ತರಿಸುತ್ತದೆ. ಅದೇ ಲೇಖನದಲ್ಲಿ ಮುಂಚೆ ಅವರ ತಂದೆಯವರು ಆಡುವ ಮಾತುಗಳು, ಅದಕ್ಕೆ ಶ್ರೀನಿವಾಸರ (ಬರಹದಲ್ಲಿ ಮಾತ್ರ) ಟಿಪ್ಪಣಿಗಳು – ಇವು ಹೊಟ್ಟೆ ಹುಣ್ಣಾಗುವಷ್ಟು ನಗು ಬರಿಸುತ್ತದೆ.

ನನ್ನ ಶ್ರೀಮತಿಯವರು ಮೃತ್ಯುವಿನ ದವಡೆಯಿಂದ ಅದನ್ನು ಒಡೆದು ಹೊರಬಂದ ಧೀಮಂತಿಕೆಯ ಬಗ್ಗೆ ಒಂದು ಲೇಖನವನ್ನು ಬರೆದೆ. ನನಗನ್ನಿಸಿದ್ದು ಸಂಕಟ – ನರಳುಗಳ ಆಲ್ಟರ್ ಈಗೋ ಇದೆ ಹಾಸ್ಯ ಎಂದು. ಆದರೆ ಅದನ್ನು ಹಾಸ್ಯ ಪತ್ರಿಕೆಗಳಲ್ಲಿ ಪ್ರಕಟಿಸಲು ಆಗಲಿಲ್ಲ. (ನನ್ನದೇ ಖರ್ಚಿನಲ್ಲಿ ಮುದ್ರಿಸಿ, ಜಿಗಣಿಯಲ್ಲಿನ ಪ್ರಖ್ಯಾತ ಯೋಗ ಕೇಂದ್ರಕ್ಕೆ ಪ್ರತಿಗಳನ್ನೆಲ್ಲಾ ಕೊಟ್ಟು, ಅದರಿಂದ ಬರುವ ಹಣವನ್ನು ಅವರೇ ಉಪಯೋಗಿಸಿಕೊಳ್ಳುವಂತೆ ಹೇಳಿದೆ)

ಇದರಿಂದ ನನ್ನ ಅಭಿಮತ ಏನೆಂದರೆ, ಅಪರಂಜಿಯಲ್ಲಿಯೂ ಕೇವಲ ಉಪ್ಪಿನದೇ ಅಡುಗೆಯಾಗಿರದೆ, ಖಾರ, ವಗಚು, ಸಿಹಿ ಇತ್ಯಾದಿ ರುಚಿಗಳೂ ಸ್ವಲ್ಪ ಕಡಿಮೆ ಪ್ರಮಾಣದಲ್ಲಾದರೂ ಬಂದರೆ ರುಚಿ ಹೆಚ್ಚುವುದಲ್ಲವೇ? ಸ್ವಾದ ಹೆಚ್ಚಿದರೆ ಉಣ್ಣಲು ಹೆಚ್ಚು ಹೆಚ್ಚು ಜನ ಬಂದಾರಲ್ಲವೇ? ಈಗ ನಮ್ಮ ಓದುಗರು ಕೇವಲ ಇಂಗ್ಲೀಷ್ ಬಲ್ಲ ಮಿಡ್‌ಕ್ಲಾಸ್ ಕನ್ನಡ ಬಲ್ಲವರು. ಬೇರೆಯವರಿಗೂ ಅಪರಂಜಿ ಮುದ್ದಿಸ ಬೇಡವೆ? ಕನ್ನಡದ ಬಗ್ಗೆ ಹೆಮ್ಮೆಯಿಲ್ಲದ ಅಯೋಗ್ಯ, ಏನೇನೋ ಬಡಬಡಿಸಿದ್ದಾನೆ ಎಂದುಕೊಂಡರೂ ಸರಿ, ಆದರೆ ಈ ಲೇಖನ ಓದಿ ಒಂದು ಹೊಸ ಪ್ರಚೋದನೆ ಸುಳಿದರಾದರೂ ಕನ್ನಡಮ್ಮ, ಅವಳ ಮಗಳು ಕೊರವಂಜಿ, ಮೊಮ್ಮಗಳು ಅಪರಂಜಿ ಮುಗುಳ್ನಗೆಯಾದರೂ ತಂದಾರಲ್ಲವೇ?

ಈಗ ನಮ್ಮ ಮುಂದಿರುವ ಸವಾಲು: ನಮ್ಮ ಪೀಳಿಗೆಯ ಮಧ್ಯಮವರ್ಗದವರಿಗೆ, ಹೊಸ ಪೀಳಿಗೆಯ Americanised ಪೀಳಿಗೆಗೆ ಮತ್ತು ಇವೆರಡಕ್ಕೂ ಹೊರತಾದ ಕನ್ನಡವನ್ನರಿಯದ ಕನ್ನಡಪ್ರೇಮಿಗಳಿಗೆ ಇವರೆಲ್ಲರಿಗೂ ತಗುಲಬಹುದಾದ ಹಾಸ್ಯ ಯಾವುದು? ಅದನ್ನು ಹರಿಯಿಸುವುದು ಹೇಗೆ? ಇದಾಗದೆಂದು, ಕೇವಲ ನಮ್ಮ ಪೀಳಿಗೆಯ ಮಧ್ಯಮವರ್ಗಕ್ಕೆ ಪಳಗಿಕೊಂಡಿರುವ ಹಾಸ್ಯದ ಬರವಣಿಗೆ ಸುಲಭ, ಸುಭದ್ರವೇ? ನನಗೆ ಅರ್ಥ ಆಗುತ್ತಿಲ್ಲ, ಸಾರ್.



ಕಿವಿ - ಕೇಳುವ ಅಂಗವೇ ಆದರೂ ಅದರ ಒಂದು ಭಾಗ ನಮ್ಮ ದೇಹದ ಸಮತೋಲನ ಮಾಡುವ ಕೆಲಸ ನಿಭಾಯಿಸುತ್ತದೆ. ಕೇಳಿಸುವ ಭಾಗಕ್ಕೆ ತೊಂದರೆಯಾದರೆ ಕಿವುಡುತನ ಬರುತ್ತದೆ, ಹಾಗೆಯೇ ಉಳಿದ ಭಾಗಕ್ಕೆ ತೊಂದರೆಯಾದರೆ ತಲೆಸುತ್ತು ಕಿವಿಮೊರೆತ ಉಂಟಾಗುತ್ತದೆ. ಕಿವಿಮೊರೆತಕ್ಕೆ ಉಳಿದಂತೆ ಹಲವಾರು ಕಾರಣಗಳು ಇದ್ದರೂ ಈ ಸೂಕ್ಷ್ಮವಾದ ಅಂಗದ ತೊಂದರೆಯೇ ಬಹುಮಟ್ಟಿನ ಕಾರಣ. ಬಹಳ ಸಲ ಈ ತೊಂದರೆ ಔಷಧಿಗೆ ಒಗ್ಗದು. ಮೊರೆತ ಮುಚ್ಚುವಂತೆ ಶಬ್ದವನ್ನು ಹಿಯರಿಂಗ್ ಏಡ್ ಮೂಲಕ ಕೊಡಬೇಕಾಗುತ್ತದೆ. ಸದ್ಯಕ್ಕೆ ಅದೇ ಉತ್ತರ. ಕಿವಿಯ ಸೂಕ್ಷ್ಮತೆ ಕಡಿಮೆಯಾದ ನಂತರ ಹಿಯರಿಂಗ್ ಏಡ್ ಧರಿಸಿ ಎಲ್ಲರಂತೆಯೇ ಮಾತಿನ ಚಟುವಟಿಕೆಯಲ್ಲಿ ಭಾಗವಹಿಸಬೇಕು, ಅದು ಸಾಮಾನ್ಯ ಜೀವನ.

ಡಾ|| ಜಿ. ಪುರುಷೋತ್ತಮ ಇಡಿ.ಡಿ.
ವಾಕ್ - ಶ್ರವಣದೋಷ ತಜ್ಞ, ವಿಸ್ಪರ್ ವಾಕ್ - ಶ್ರವಣ ಕೇಂದ್ರ

# ‘ಕರಾನಾಮಂ’ ಕರಾಮತ್ತು

• ಇ.ಆರ್. ರಾಮಚಂದ್ರನ್

**ಕ**ರ್ನಾಟಕದಲ್ಲಿ ಗುಬ್ಬಿ ವೀರಣ್ಣ ಟೂರಿಂಗ್ ಟಾಕೀಸ್ ಒಂದು ಕಾಲದಲ್ಲಿ ಬಹಳ ಹೆಸರುವಾಸಿಯಾಗಿತ್ತು. ‘ಸದಾರಮೆ’, ‘ಭಕ್ತ ಕುಂಬಾರ’, ‘ಸತ್ಯ ಹರಿಶ್ಚಂದ್ರ’ ಮುಂತಾದ ಅನೇಕ ನಾಟಕಗಳನ್ನು ಆಡಿ ಜನರ ಮನಸ್ಸನ್ನು ಸೂರೆಗೊಂಡಿತ್ತು.

ಇತ್ತೀಚಿಗೆ ಜನಗಳ ಟೀವಿ ಮತ್ತು ಕ್ರಿಕೆಟ್ ಹುಚ್ಚಿನಿಂದ ನಾಟಕ ಕಂಪನಿಗಳ ಉಳಿವೇ ಕಷ್ಟವಾಗಿ ಹೋಗಿದೆ.

ಮೊನ್ನೆ ‘ಸದಾರಮೆ’ಯಲ್ಲಿ ಕಳ್ಳನ ಪಾತ್ರವಹಿಸಿ ಹೆಸರುವಾಸಿಯಾದವರೊಬ್ಬರು ಹೇಳಿದರು. ಈಗ ಹೊಸ ನಾಟಕ ಕಂಪನಿ ‘ಕರ್ನಾಟಕ ರಾಜಕೀಯ ನಾಟಕ ಮಂಡಳಿ’ (ಕರಾನಾಮಂ) ಬಂದಾಗಿನಿಂದ ನಮಗೆಲ್ಲಾ ಹೊಟ್ಟೆಯ ಮೇಲೆ ಸುತ್ತಿಗೆಯಿಂದ ಹೊಡೆದಂತಾಗಿದೆ. ಹಳ್ಳಿ ಪಳ್ಳಿಗಳಲ್ಲಿ – ಟೆಂಟಲ್ಲಿ ನಾಟಕವಾಡಿ ಹಾಗೂ ಹೀಗೂ ಹೊಟ್ಟೆ ತುಂಬಿಸ್ಕೊಳ್ತಿದ್ವಿ; ಈಗ ಕರಾನಾಮಂ ಬಂದಮೇಲೆ ನಮಗೆಲ್ಲಾ ಪಂಗನಾಮ! ಹೊಟ್ಟೆಗೆ ಬರೀ ಒದ್ದೆ ಬಟ್ಟೆ ಅಷ್ಟೆ!

‘ಏನು ಪ್ರಾಬ್ಲಮ್?’

‘ನಮ್ಮ ಕಂಪನಿಯಲ್ಲಿ ಹೇಳಿ ಕೇಳಿ ಐದಾರು ಜನ ಇದ್ರೆ ಹೆಚ್ಚು.. ಕರಾನಾಮಂನಲ್ಲಿ ನಾಮ ಹಾಕೋಕ್ಕೇನೆ 224 ಜನ ಇದಾರೆ... ಜೊತೆಗೆ ಒಂದು ‘ಲೌಡ್ ಸ್ಪೀಕರ್’ ಮತ್ತು ‘ಸ್ಪೀಡ್’ ಗವರ್ನರ್ ಬೇರೆ! ಪುಣ್ಯಾತ್ಮರು ಅವುಗಳಿಗೂ ಮೆಂಬರ್‌ಷಿಪ್ ಕೊಟ್ಟಿದ್ದಾರೆ! ಅದಕ್ಕೆ ಅವರ ಕಂಪನಿಯ ‘ಸ್ಟ್ರೆಂತ್’ ಈಗ ಒಟ್ಟು 226.’

‘ಈ ನಾಟಕ ಕಂಪನಿಯಿಂದ ನಿಮಗೆ ಏನು ಪ್ರಾಬ್ಲಮ್ ಸಾರ್?’

‘ರಾಜ್ಯದೆಲ್ಲಾಕಡೆಯಿಂದ ನಾಮ ಹಾಕಿಸಿಕೊಳ್ಳೋಕ್ಕೆ ಒಳ್ಳೆ ಡಿಮ್ಯಾಂಡು. ಒಳ್ಳೆ ನ್ಯಾಚುರಲ್ ಆಗಿ ಆಕ್ಟಿಂಗ್ ಮಾಡ್ತಾರೆ! ಕುಡುಕನ ಪಾತ್ರ, ಎಸ್.ಟಿ.ಡಿ. ಸ್ಪೀಡ್ನಲ್ಲಿ ಸೈಟು ಮಾಡಿಸಿಕೊಡುವ ಮಂತ್ರಿ ಉರುಫ್ ದಲ್ಲಾಳಿ, ರೇಪ್ ಸೀನ್ಸ್, ಕಿಡ್ನಾಪ್, ತೀರ್ಥ ಪಾನ, ರಾತ್ರೋ ರಾತ್ರಿ ಪರಾರಿ, ಚೇಸಿಂಗ್, ಕೊನೆಗೆ ಪಾದಯಾತ್ರೆಯಲ್ಲಿ ಕಪ್ಪು ಕನ್ನಡಕ ಹಾಕಿ ಡ್ಯಾನ್ಸ್ ಸಹಿತ ಮಾಡ್ತಾರೆ! ಕೆಲವರಿಗೆ ನರ್ಸಮ್ಮಗಳು ಅವರನ್ನು ನೋಡಿ ಪ್ರೀತಿಸುತ್ತಾರೆಂದು ಭ್ರಾಂತಿ ಬೇರೆ! ಕಣ್ಣೀರು ಸುರಿಸುವುದರಲ್ಲಿ ಇವರನ್ನು ಬಿಟ್ಟರೆ ಇಲ್ಲ! ಯಾವಾಗ ಬೇಕಾದರೂ ಗ್ಲಿಸರಿನ್

ಇಲ್ಲದೆ 'ಸ್ವಿಚ್' ಹಾಕಿದ ಹಾಗೆ ಕಾವೇರಿ ಮತ್ತು ಕಬಿನಿ ಇವರ ಕಣ್ಣಿನಿಂದ ಗಳಗಳ ಸುರಿಯುತ್ತೆ! ವರನಟ ರಾಜ್ ಕುಮಾರ್ ಮತ್ತು ಟ್ರಾಜಿಡಿ ಕಿಂಗ್ ದಿಲೀಪ್ ಕುಮಾರ್ ಏನೂ ಇಲ್ಲ ಇವರ ಮುಂದೆ!'

'ಕರನಾಮುವನ್ನು ನಾಟಕವಾಡುವುದಕ್ಕೆ ಎಲ್ಲೆಲ್ಲಿ ಆಹ್ವಾನಮಾಡಿದ್ದಾರೆ?'

'ಪುಂಗನೂರಿನ ನೀರಿಲ್ಲದೆ ಕ್ಷೌರ ಮಾಡುವರ ಸಂಘ, ಕುಕ್ಕಲಗೆರೆ ಕುಡುಕರ ಜಾತ್ರೆ, ಪುಂಡಗದ್ದೆ ಜೇಬುಗಳ್ಳರ ಪುನರುದ್ಧಾರ ವಾರ್ಷಿಕ ಕಾರ್ಯಕ್ರಮ , ಬೆಂಗಳೂರಿನ ಇನ್ನೂ ಬದುಕಿರುವ ಭಿಕ್ಷುಕರ ಮಹಾ ಸಾಗರ ಸಮಿತಿ ಇತ್ಯಾದಿ...'

'ಅಷ್ಟು ಜನಾ ಒಟ್ಟಿಗೆ ಹೇಗೆ ಪ್ರಯಾಣ ಮಾಡುತ್ತಾರೆ? ಕುರೀಮಂದೆಯಷ್ಟು ಜನಾ ಇದ್ದಾರಲ್ಲ?'

'ಎಲ್ಲಿಗೆ ಹೋಗಬೇಕಾದರೂ ವಾಲ್ವೊ ಟ್ರಿಪಲ್ ಬಸ್ಸ್ ಮಾಡಿಕೊಂಡು ಹೋಗುತ್ತಾರೆ. ಕ್ರೌಡ್ ಕಂಟ್ರೋಲ್‌ಗೆ 'ಲೌಡ್ ಸ್ಪೀಕರ್' ಇದ್ದೇ ಇರುತ್ತೆ! ಸ್ಪೀಡ್ ಕಂಟ್ರೋಲ್‌ಗೆ ಗವರ್ನರ್! ವೇಷ ಬದ್ಲಾಯಿಸಿಕೊಂಡು ಓಡಿಹೋಗೋದಕ್ಕೂ ಮೇಕಪ್ ಸಾಮಾನುಗಳು ಚೆನ್ನಾಗಿ ಇದೆ.'

'ಯಾವ ನಾಟಕಗಳು ಆಡಿದ್ದಾರೆ ಇಲ್ಲಿಯವರೆಗೆ?'

'ನೀನಾರಿಗಾದೆಯೋ ಎಲೆ ಎಮ್ಮೆ ಲೇ!', 'ಕನಸಿನೊಳಗೆ ಕನಸು', 'ನಗದು ಕೋಟಿ ನಾರಾಯಣಾ ಇಲ್ಲವೇ ಎಲ್ಲಾ ನೆಗೆದು ಹೋಗಲಿ!', 'ಬಸ್ಸಿನ ಸುತ್ತ ಹುತ್ತದಲ್ಲಿ ಹುತ್ತ ಹುಷಾರ್!', 'ರೆಸಾರ್ಟ್ ರಾಣಿ' ಇತ್ಯಾದಿ...

'ಇಷ್ಟು ಜನ ಒಟ್ಟಿಗೆ ಹೋದಾಗ ಜಗಳವಾಡಲ್ವಾ?'

'ಕಿತ್ತಾಡಿ, ಬಡಿದಾಡಿ ಎಲ್ಲಾ ಆದಾಗ, ಒಬ್ಬರೊನ್ನೊಬ್ಬರು ಮಾರಿಕೊಂಡು ಪಂಗಡಗಳಾಗಿ ಬೇರೆ ಬೇರೆ ನಾಟಕವನ್ನು ಆಡ್ತಾರೆ. ಶತ್ರು ಒಂದು ಕ್ಷಣದಲ್ಲಿ ಮಿತ್ರನಾಗುತ್ತಾನೆ! ಅವಮಾನದಲ್ಲಿ ಬೆಂದು ಇಳಿಯುತ್ತಿರುವ ಕಣ್ಣೀರು ಕ್ಷಣಾರ್ಧದಲ್ಲಿ ಆನಂದಭಾಷ್ಪವಾಗುತ್ತೆ! ಇವರ ನಾಟಕವನ್ನು ನೋಡಿ ಮಾಸ್ಟರ್ ಹಿರಣ್ಣಯ್ಯನವರೇ 'ನಾನು ಆಡುವುದು ನಾಟಕವೇ ಅಲ್ಲ.. ನಾನು ಇವರ ಕಾಲು ಧೂಳಿನ ಸಮ' ಅಂತ ಹೇಳಿಕೊಂಡ್ರು...'

'ಮುಂದೆ ಏನು ಪ್ಲಾನ್ ಕರಾನಾಮಂ ಅವರದು?'

'ಎಲ್ಲಾರಿಗೂ ನಾಮ, ಅಂದ್ರೆ ಪಂಗನಾಮ ಹಾಕೋದು ಮೈನ್ ಅಜೆಂಡಾ! ದೊಡ್ಡಣ್ಣ ಹಾಲ್‌ನಲ್ಲಿ ''ಇಪ್ಪತ್ತು ಕೊಟ್ಟರೆ ನಿನ್ನ ಕಡೆ, ಮೂವತ್ತು ಕೊಟ್ಟರೆ ಅವನ ಕಡೆ'' ಎನ್ನುವ ನಾಟಕ ಪ್ರೋಗ್ರಾಂ ಇದೆ. ರಿಹರ್ಸಲ್ ನಡೀತಾ ಇದೆ... ಅದರಲ್ಲಿ ಬರುವ ಪುಢಾರಿ ರೋಲ್ ಯಾರು ಮಾಡ್ಬೇಕೂ ಅಂತ ಈಗಲೂ ಫೈಟಿಂಗ್ ಆಗ್ತಿದೆ...'

'ಇಪ್ಪತ್ತು, ಮೂವತ್ತು?' ಏನದು?

'ಕೋಟಿ ರುಪಾಯಿ.' ಇವರಲ್ಲಿ ಮತ್ತೊಂದು ವೈಶಿಷ್ಟ್ಯ ಇದೆ.

'ಏನದು?'

'ಆಗಾಗ್ಗೆ ಜಗಳವಾದಾಗ ಒಂದು ಗ್ರೂಪ್ ಮತ್ತೊಂದು ಗ್ರೂಪ್ನ ಚೇಸ್ ಮಾಡೋ ಸೀನ್. ಸ್ಟೇಜ್ ಪೂರಾ ಸುತ್ತಿ ಜೂಟಾಟವಾಡಿ ಒಬ್ಬರನ್ನೊಬ್ಬರು ಒದ್ದು ಬಡಿದು ಕೊನೆಗೆ ತಬ್ಬಿಕೊಳ್ಳುತ್ತಾರೆ! ಈ ಸೀನ್ಗೆ ಯಾವಗಲೂ ಬಹಳ 'ಕ್ಲಾಪ್ಸ್' ಬಿದ್ದೇ ಬೀಳುತ್ತೆ!'

'ಕರಾನಾಮಂಗೆ ಏನಾದರೂ ಪ್ರಶಸ್ತಿ ಸಿಕ್ಕಿದೆಯಾ?'

'ಮುಂದಿನ ವರ್ಷ ರಾಜ್ಯೋತ್ಸವ ಪ್ರಶಸ್ತಿ ಗ್ಯಾರಂಟಿ! ಕೇಂದ್ರದ ''ಸಂಗೀತ ನಾಟಕ ಅಕಾಡೆಮಿ'' ಡೆಲ್ಲಿಗೆ ಪ್ರದರ್ಶನ ಕೊಡುವುದಕ್ಕೆ ಕರೆದಿದ್ದಾರೆ... ಅದರ ಪ್ರಶಸ್ತಿ ಸಿಗಬಹುದು.'

'ಈ ನಾಟಕ ಮಂಡಳಿಗೆ ಏನಾದರೂ ಆಸೆ ಆಕಾಂಕ್ಷೆಗಳಿದೆಯೇ?'

'ಇದೆ. 226 ಮೆಂಬರ್ಸ್‌ಗಳಿಗೆ ಮುಂದಿನ ವರ್ಷದ ಮೈಸೂರು ದಸರಾ ವಸ್ತು ಪ್ರದರ್ಶನದಲ್ಲಿ ಒಂದು ನಾಟಕ ಮಾಡಬೇಕೆಂದು ಈಗಿನಿಂದಲೇ ರಿಹರ್ಸಲ್ ಮಾಡ್ತಾಇದಾರೆ.'

'ನಾಟಕದ ಹೆಸರು ಏನು?'

'ನಾವು ಇರೋದೇ ಹೀಗೆ... ನೀವು ನೋಡದೆ ಬೇರೆ ವಿಧಿಯಿಲ್ಲ!' ಅಂತ.

'ಮೆಂಬರ್ಸ್‌ಗಳಿಗೆ ಏನಾದರೂ ಅವರದೇ ಪ್ರತ್ಯೇಕ ಆಸೆ?'

'ಖಂಡಿತ ಇದೆ. ಒಬ್ಬೊಬ್ಬರೂ ಮುಂದೆ ಎಮ್ಮೆಲೇ ಇಲ್ಲ ಎಮ್‌ಪಿ ಆಗಬೇಕೆಂದು ಕನಸು ಕಾಣುತ್ತಿದ್ದಾರೆ!'

'ಲೌಡ್ ಸ್ಪೀಕರ್ ಮತ್ತು ಸ್ಪೀಡ್ ಗವರ್ನರ್ರು?'

'ಬೇರೆ ನಾಮ ಹಾಕುವ ನಾಟಕ ಕಂಪನಿ ಕರೆದರೆ ಅಲ್ಲಿಗೆ ಜಾರಿಕೋಬಹುದು ಸ್ಪೀಕರ್ರು; ಗವರ್ನರ್ ದೆಹಲಿಗೆ ಹೋದಾಗ ರಾಷ್ಟ್ರ ಮಟ್ಟದಲ್ಲಿ ನಾಮ ಹಾಕುವ ಮಂಡಳಿ ಸಿಕ್ಕೇ ಸಿಗುತ್ತೆ! ಅದು ಸಿಕ್ಕ ತಕ್ಷಣವೇ ಅಲ್ಲಿಗೆ ಓಡಿಹೋಗುವುದು!'





# ಭಾರತೀಯರ ವೈಶಿಷ್ಟ್ಯ

**ಭಾ**ರತದ ಬೇರೆ ಬೇರೆ ರಾಜ್ಯದಲ್ಲಿ ವಾಸಮಾಡುತ್ತಿರುವ ಜನಗಳದು ಅವರದೇ ಒಂದು ವೈಶಿಷ್ಟ್ಯವಿರುತ್ತೆ. ಒಬ್ಬೊಬ್ಬೊರದೂ ಒಂದೊಂದು ಸ್ಪೆಷಾಲಿಟಿ.

ಅವರು ಒಬ್ಬರಿಂದ ಇಬ್ಬರಾಗಿ, ಕೊನೆಗೆ ನಾಲ್ವರಾದರೆ ಏನು ಮಾಡುತ್ತಾರೆಂದು ಬನ್ನಿ ನೋಡೋಣ...

★★★

**ಕಾಶ್ಮೀರಿಗಳು :**

| | | |
|---|---|---|
| ಒಬ್ಬ ಕಾಶ್ಮೀರಿ | = | ಕಲ್ಲು ಎಸೆಯುವ ವಿದ್ಯಾರ್ಥಿ |
| ಇಬ್ಬರು ಕಾಶ್ಮೀರಿಗಳು | = | ಕಾರ್ಪೆಟ್ ಫ್ಯಾಕ್ಟರಿ |
| ಮೂರು ಕಾಶ್ಮೀರಿಗಳು | = | ದಲ್ ಲೇಕ್‌ನಲ್ಲಿ ದೋಣಿ ನಡೆಸುವವರು |
| ನಾಲ್ಕು ಕಾಶ್ಮೀರಿಗಳು | = | 'ಒಮರ್ ಅಬ್ದುಲ್ಲಾ, ಹಠೋ!' ಅಂತ ಕೂಗುವರ ಗುಂಪು |

**ತಮಿಳ್ - ಬ್ರಾಹ್ಮಣ :**

| | | |
|---|---|---|
| ಒಬ್ಬ ತಂಬಿ | = | ಮೈಲಾಪೂರ್ ಕಪಾಲೀಶ್ವರ ದೇವಸ್ಥಾನದಲ್ಲಿ ಪೂಜಾರಿ |
| ಇಬ್ಬರು ತಂಬಿ | = | ಲೆಕ್ಕದ ಟ್ಯೂಷನ್ ಕ್ಲಾಸ್ |
| ಮೂವರು ತಂಬಿ | = | ಅಮೆರಿಕನ್ ಕಾನ್ಸುಲೇಟ್ ಮುಂದೆ ಬೆಳಿಗ್ಗೆ 4 ಘಂಟೆಗೆ ಕ್ಯೂನಲ್ಲಿ |
| ನಾಲ್ಕು ತಂಬಿ | = | ಸಾಂತಾ ಕ್ಲಾರಾದಲ್ಲಿ ತ್ಯಾಗರಾಜರ ಆರಾಧನೆ |

**ಕೇರಳೀಯ :**

| | | |
|---|---|---|
| ಒಬ್ಬ ಕೇರಳೀಯ | = | ಟೀ ಸ್ಟಾಲ್ |
| ಇಬ್ಬರು ಕೇರಳೀಯರು | = | ಕಥಕ್ಕಳಿ ಡ್ಯಾನ್ಸ್ |

ಮೂರು ಕೇರಳೀಯರು = ಗಲ್ಫ್ ವೀಸಾದ ಘೋಟಾಲ

ನಾಲ್ಕು ಕೇರಳೀಯರು = ಬಾಳೇಕಾಯಿ ಚಿಪ್ಸ್, ಲುಂಗಿ ಫ್ಯಾಕ್ಟರಿ

**ಯೂಪಿ ಭೈಯ್ಯ :**

ಒಬ್ಬ ಯೂಪಿ ಭೈಯ್ಯ = ಹಾಲು ಮಾರುವವ

ಇಬ್ಬರು ಭೈಯ್ಯಾಗಳು = ಹಲ್ವ ಅಂಗಡಿ

ಮೂರು ಭೈಯ್ಯಾಗಳು = ಯೂಪಿ ಅಸ್ಸೆಂಬ್ಲಿಲಿ ಮೈ ಕೈ ಕುಸ್ತಿ

ನಾಲ್ಕು ಭೈಯ್ಯಾಗಳು = ಬಾಬ್ರಿ ಮಸೀದಿ ಒಡಿಯೊ ಸ್ಕ್ವಾಡ್

**ಗುಜ್ಜು :**

ಒಬ್ಬ ಗುಜ್ಜು = ಷೇರ್ ಬ್ರೋಕರ್

ಇಬ್ಬರು ಗುಜ್ಜುಗಳು = ಮುಂಬಯಿಯ ಲೋಕಲ್ ಟ್ರೈನ್ನಲ್ಲಿ ಇಸ್ಪೀಟ್

ಮೂರು ಗುಜ್ಜುಗಳು = ಮುಂಬಯಿಯ ರೆಸ್ಟೋರೆಂಟ್‌ನಲ್ಲಿ ದಳ್ಳಾಳಿ ಕೂಟ

ನಾಲ್ಕು ಗುಜ್ಜುಗಳು = ಸ್ಟಾಕ್ ಮಾರ್ಕೆಟ್ ಸ್ಕ್ಯಾಮ್

**ಆಂಧ್ರದವ :**

ಒಬ್ಬ ಆಂಧ್ರದವ = ಮೆಣಸಿನಕಾಯಿ ರೈತ

ಇಬ್ಬರು ಆಂಧ್ರದವರು = ನ್ಯೂಜರ್ಸಿಯಲ್ಲಿ ಸಾಫ್ಟ್‌ವೇರ್ ಕಂಪನಿ

ಮೂರು ಆಂಧ್ರದವರು = ನಕ್ಸಲ್ ಗುಂಪು

ನಾಲ್ಕು ಆಂಧ್ರದವರು = ತೆಲುಗು ಸಿನಿಮಾದಲ್ಲಿ ಐಟಮ್ ಡ್ಯಾನ್ಸ್ ಗ್ರೂಪ್

**ಮುಂಬೈಕರ್ :**

ಒಬ್ಬ ಮುಂಬೈಕರ್ = ಫುಟ್ಪಾಥ್‌ನಲ್ಲಿ 'ವಡಾ ಪಾವ್' ಸ್ಟಾಲ್

ಇಬ್ಬರು ಮುಂಬೈಕರ್ = ಗಣಪತಿ ಮಂಡಳಿ

ಮೂರು ಮುಂಬೈಕರ್ = ಸ್ಲಮ್ ಡಾಗ್ ಷೂಟಿಂಗ್ ಸೀನ್‌ನಲ್ಲಿ ಎಕ್ಸ್ಟ್ರಾಸ್

ನಾಲ್ಕು ಮುಂಬೈಕರ್ = ಲೋಕಲ್ ಟ್ರೈನ್ನಲ್ಲಿ ನಿಮ್ಮ ಕಾಲು,
ತಲೆಮೇಲೆ ಕೂತಿರುವ ಜನ

**ಸಿಂಧಿ :**

ಒಬ್ಬ ಸಿಂಧಿ = ಇಂಪೋರ್ಟ್ - ಎಕ್ಸ್ಪೋರ್ಟ್ ಎಕ್ಸ್‌ಪರ್ಟ್

| | | |
|---|---|---|
| ಇಬ್ಬರು ಸಿಂಧಿಗಳು | = | ಹಪ್ಪಳದ ಫ್ಯಾಕ್ಟರಿ |
| ಮೂರು ಸಿಂಧಿಗಳು | = | ಉಲ್ಹಾಸ್ನಗರದಲ್ಲಿ ನಕಲಿ ಸಾಮಾನು ಫ್ಯಾಕ್ಟರಿ |
| ನಾಲ್ಕು ಸಿಂಧಿಗಳು | = | ಹಾಂಕಾಂಗ್ನಲ್ಲಿ ನಕಲಿ ಸಾಮಾನು ಮಾಡುವವರ ಸೆಮಿನಾರ್ |

**ಮಾರ್ವಾಡಿ :**

| | | |
|---|---|---|
| ಒಬ್ಬ ಮಾರ್ವಾಡಿ | = | ಪಕ್ಕಾ ಬನಿಯ |
| ಇಬ್ಬರು ಮಾರ್ವಾಡಿ | = | ಅರ್ಧ ಕೊಲ್ಕತ್ತಾ ನಗರ |
| ಮೂರು ಮಾರ್ವಾಡಿ | = | ಗುಜರಾತಿ ಮತ್ತು ಸಿಂಧಿ ವ್ಯಾಪಾರಿಗಳ ಸ್ವಾಹಾ! |
| ನಾಲ್ಕು ಮಾರ್ವಾಡಿ | = | ಪ್ರಪಂಚದ ಎಲ್ಲಾ ಕಸ್ಟಮರ್ಸು ಅವರ ಮುಷ್ಟಿಯಲ್ಲಿ! |

**ಹರ್ಯಾನ್ವಿ :**

| | | |
|---|---|---|
| ಒಬ್ಬ ಹರ್ಯಾನ್ವಿ | = | ಕಪಿಲ್ ದೇವ್ |
| ಇಬ್ಬರು ಹರ್ಯಾನ್ವಿ | = | ಕೃಷಿಗಾರಿಕೆ |
| ಮೂವರು ಹರ್ಯಾನ್ವಿ | = | ಲಾಠೀ ಗುಂಪು |
| ನಾಲ್ಕು ಹರ್ಯಾನ್ವಿ | = | ಭಾರತದ ಕಾಮನ್‌ವೆಲ್ತ್‌ನಲ್ಲಿ ಟೋಟಲ್ ಮೆಡಲ್ಸ್ |

**ಕನ್ನಡಿಗ :**

| | | |
|---|---|---|
| ಒಬ್ಬ ಕನ್ನಡಿಗ | = | ಸಾಫ್ಟ್‌ವೇರ್ ಎಂಜಿನಿಯರ್ |
| ಇಬ್ಬರು ಕನ್ನಡಿಗರು | = | ಸಾಫ್ಟ್‌ವೇರ್ ಪಾರ್ಕ್ |
| ಮೂರು ಕನ್ನಡಿಗರು | = | ಬಿ.ವಿ.ಕೆ. ಐಯಂಗಾರ್ನ ಹಾರ್ಡ್‌ವೇರ್ ಷಾಪ್ಗಳು |
| ನಾಲ್ಕು ಕನ್ನಡಿಗರು | = | ಬೆಂಗಳೂರಲ್ಲಿರುವ ಟೋಟಲ್ ಕನ್ನಡಿಗರು |

**ಬಿಹಾರಿ :**

| | | |
|---|---|---|
| ಒಬ್ಬ ಬಿಹಾರಿ | = | ನಿತೀಷ್ ಕುಮಾರ್ |
| ಇಬ್ಬರು ಬಿಹಾರಿ | = | ಲಾಲು + ರಬಡಿ ದೇವಿ ಪೊಲಿಟಿಕಲ್ ಪಾರ್ಟಿ |
| ಮೂರು ಬಿಹಾರಿ | = | ಐ.ಐ.ಟಿ. ಕೋಚಿಂಗ್ ಸೆಂಟರ್ |
| ನಾಲ್ಕು ಬಿಹಾರಿ | = | ಅಡುಗೆ ಮಾಡುವರ ಗುಂಪು |

**ಬೆಂಗಾಲಿ :**

| | | |
|---|---|---|
| ಒಬ್ಬ ಬೆಂಗಾಲಿ | = | ಕವಿ |
| ಇಬ್ಬರು ಬೆಂಗಾಲಿ | = | ಫಿಲ್ಮ್ ಸೊಸೈಟಿ |
| ಮೂರು ಬೆಂಗಾಲಿ | = | ಮಮ್ತಾ ದೀದಿಯ ಪಾರ್ಟಿ |
| ನಾಲ್ಕು ಬೆಂಗಾಲಿ | = | ಬೆಂಗಾಲ್ ಬಂದ್ |

**ಪಂಜಾಬಿ :**

| | | |
|---|---|---|
| ಒಬ್ಬ ಪಂಜಾಬಿ | = | 100 ಕೆ.ಜಿ. ತೂಕದ ಟೋನಿ |
| ಇಬ್ಬರು ಪಂಜಾಬಿ | = | ಟೋನಿ ಮತ್ತು ಅವನ ಅಣ್ಣ ಪಿಂಕಿ |
| ಮೂರು ಪಂಜಾಬಿ | = | ಮೆಕ್ಡೊನಾಲ್ಡ್‌ನಲ್ಲಿ ವೈಟರ್ಸ್ ಜೊತೆ ಹೊಡೆದಾಟ |
| ನಾಲ್ಕು ಪಂಜಾಬಿ | = | ಭಾರತ ಹಾಕೀಲಿ ಗೆದ್ದಾಗ ಟ್ರೈನ್ ನಿಲ್ಲಿಸಿ ಪ್ಲಾಟ್ಫಾಮ್ನಲ್ಲಿ 'ಭಾಂಗ್ಡಾ' ಡ್ಯಾನ್ಸ್ |

ಕೂರ್ಗಿ ಮತ್ತು ಪಾರ್ಸಿಗಳ ಜನಸಂಖ್ಯೆ ಈಗಲೂ ಕಡಿಮೆಯೆ. ಪ್ರಯತ್ನ ಪಟ್ಟರೆ ಸ್ವಲ್ಪ ವರ್ಷಗಳಲ್ಲಿ ಅವರೂ ಈ ಲಿಸ್ಟಿಗೆ ಸೇರಿಕೊಳ್ಳಬಹುದು!

(ಇಟರ್‌ನೆಟ್‌ನಿಂದ ಆಯ್ದದ್ದು)

---

**ಬ್ರಹ್ಮ ಕಮಲ**

ಮುಸ್ಸಂಜೆ  
ಮುಪ್ಪಿನ ಕಣ್ಣಿಗೆ  
ಕಾಣುವುದಿಲ್ಲ  
ಮುಂಗಾಣದ ಕಣ್ಣಿಗೆ  
ಕೇವಲ ಹಿನ್ನೋಟ  
ವೆನ್ನದಿರಿ  
ಹಗಲು  
ಕಾಣದ ತಾರೆ  
ಹೊಳೆಯುವುದು  
ಇರುಳಿನಲಿ  
ಅರಳುವುದು  
ಬ್ರಹ್ಮ ಕಮಲ

– *ಎನ್. ಪ್ರಕಾಶ್*

## ತುಂತುರು ತುಂತುರು ತುಂತುರು ತುಂತುರು ತುಂತುರು ತುಂತುರು ತುಂತುರು

- ದಂನಆ

- ಪಾಕಿಸ್ತಾನದ ಮಾಜಿ ಅಧ್ಯಕ್ಷ ಮುಷರ್ರಫ್ ಅವರಿಗೆ ಭಾರತಕ್ಕೆ ಭೇಟಿ ನೀಡಲು ವೀಸಾ ಸಿಕ್ಕಿಲ್ಲವಂತೆ.
  ಸೊ ವಾಟ್? ಕಸಾಬ್ ಬಂದ ಹಾಗೆ ಬೋಟ್‌ನಲ್ಲಿ ಬಂದರಾಯಿತು.
- ಲವ್ ಮ್ಯಾರೇಜ್ ಗೊತ್ತು. ಅರೇಂಜಡ್ ಮ್ಯಾರೇಜ್ ಗೊತ್ತು. ಇದು ಯಾವುದು ಅರೇಂಜ್ಡ್ ಲವ್ ಮ್ಯಾರೇಜ್?
- Never judge a book by its movie.
- ನಮ್ಮ ರಾಜಕಾರಣಿಗಳು ಕೆಬಿಸಿಯನ್ನು ಉಲ್ಟಾ ಆಡುತ್ತಾರೆ. ಮೊದಲು ಕೋಟಿಗಟ್ಟಲೆ ಸಂಪಾದಿಸಿ ನಂತರ ಪ್ರಶ್ನೆಗಳಿಗೆ ಉತ್ತರಿಸತೊಡಗುತ್ತಾರೆ.
- ಕಂಪ್ಯೂಟರ್ ಕಲಿಯಲು ಒದ್ದಾಡಿದ ವೃದ್ಧರೊಬ್ಬರು Hey RAM! ಎಂದು ಉದ್ಗರಿಸಿದರಂತೆ.

**ಮೆಲುಕು ಹಾಕುವಂತಹ ಮಾತುಗಳ ಗುಚ್ಛ**

- Eat right, exercise regularly, die anyway.
- ನಮ್ಮನ್ನು ಸರಿಯಾಗಿ ಅಳೆಯುವುದು ನಮ್ಮ ಬೆನ್ನು ಹಿಂದೆ ಎನ್ನುತ್ತಾರೆ. ಪುರಾವೆ ಬೇಕಿದ್ದರೆ WikiLeaks ಓದಿ.
- ಕನ್ನಡಿಯೊಳಗಿರುವ ಒಂದು ದಂಟು ಕೈಯಲ್ಲಿರುವ ಎರಡು ದಂಟಿಗೆ ಸಮ ಎಂದೂ ಹೇಳಬಹುದಲ್ಲವೆ?
- Does horse trading lead to stable government?
- ನಮ್ಮ ಮನೆ ಆರೋಗ್ಯಕರವಾಗಿರುವಷ್ಟು ಶುಚಿಯಾಗಿದೆ; ಸಂತೋಷವಾಗಿರುವಷ್ಟು ಅಶುಚಿಯಾಗಿದೆ.
- ಬೆಳಕಿನಂಚಿನಲ್ಲಿ ಸುರಂಗವಿದೆ ಎಂದು ಹೇಳಿದರೆ....?
- It is amazing what you can accomplish if you do not care who gets the credit.
- ತನ್ನ ಅಗತ್ಯವನ್ನು ಕ್ರಮೇಣ ಕಡಿಮೆ ಮಾಡಿಕೊಳ್ಳುವವನೇ ಉತ್ತಮ ಶಿಕ್ಷಕ.
- ಸುಲಭವಾಗುವುದಕ್ಕೆ ಮುಂಚೆ ಎಲ್ಲವೂ ಕಷ್ಟಕರವಾಗಿರುತ್ತದೆ.
- The things that come to those who wait may be the things left by those who got there first.
- ನಾನು ಹುಟ್ಟಿದಾಗ ನನಗೆ ಎಷ್ಟು ಅಚ್ಚರಿ ಆಯಿತೆಂದರೆ ನನಗೆ ಒಂದೂವರೆ ವರ್ಷ ಮಾತನಾಡಲು ಆಗಲೇ ಇಲ್ಲ.
- 'ಕಟ್ಟಾ ಭೂಮಿಗೆ ಬಂದು ಕೆಟ್ಟ' ಎಂಬ ಹೊಸ ಗಾದೆ ಸೃಷ್ಟಿಸಬಹುದಲ್ಲವೆ?

✵

ಹುರುಳಿ ಕಟ್ಟು...

# ನೆಮ್ಮದಿ ಬೇಕೇ?

• ಎಚ್. ಗೋಪಾಲಕೃಷ್ಣ

ಹವ್ಯಾಸಗಳನ್ನು ಬೆಳೆಸಿ ಉಳಿಸಿಕೊಳ್ಳುವುದರಿಂದ ನಮ್ಮಲ್ಲಿ ಆಗುವ ಪರಿವರ್ತನೆಯನ್ನು ಕುರಿತು ನಮ್ಮೆಲ್ಲರಲ್ಲೂ ನಮ್ಮದೇ ಆದ ಒಂದು ವಿಶಿಷ್ಟವಾದ ಅನುಭವವಿರುತ್ತದೆ. ಅದರಲ್ಲೂ ವಯಸ್ಸಾದಂತೆ ನಮ್ಮತನವನ್ನು ಕಾಪಾಡಿಕೊಳ್ಳುವ ಹೊಣೆ ಸರಿ ಸುಮಾರಾಗಿ ಎಲ್ಲರಲ್ಲೂ ಮೈಗೂಡಿರುತ್ತದೆ. ಅಂತಹ ಸ್ವಭಾವವನ್ನು ಅಳವಡಿಸಿಕೊಂಡಿರುವ ನೂರ ಎರಡು ವರ್ಷದ ಹಿರಿಯರೊಬ್ಬರು ಬದುಕನ್ನು ನಾವು ಹೇಗೆ ಸ್ವೀಕರಿಸಬೇಕು ಎಂಬುವುದನ್ನು ವಿವರಿಸುತ್ತಾರೆ.

ಹಿರಿಯರು ನೀಡುವ ಸಲಹೆಗಳು :

ನಿಮ್ಮ ಅಂಕಿ ಸಂಖ್ಯೆಗಳನ್ನು ದೂರವಿಡಿ – ಇದರಲ್ಲಿ ಮುಖ್ಯವಾದದ್ದು ನಿಮ್ಮ ವಯಸ್ಸು ನಿಮ್ಮ ತೂಕ, ನಿಮ್ಮ ಎತ್ತರ – ಇದನ್ನು ಕುರಿತು ಚಿಂತಿಸಲು ವೈದ್ಯರು ಇದ್ದಾರೆ – ವೈದ್ಯರಿಗೆ ನಾವು ಹಣ ನೀಡುತ್ತೇವೆ, ಇದು ಅವರ ಕೆಲಸ – ಲೆಕ್ಕದ ಬಗ್ಗೆ ಅವರು ಚಿಂತಿಸಲಿ. ಬ್ಯಾಂಕಿನ ಹಣಕಾಸಿನ ಲೆಕ್ಕ ನೋಡಿಕೊಳ್ಳಲು ನಮ್ಮವರೇ ಜನರಿದ್ದಾರೆ – ಅವರು ಅದನ್ನು ಗಮನಿಸಲಿ. ಈ ಚಿಂತೆಗಳು ನಮ್ಮಿಂದ ದೂರವಿರಲಿ.

ನಿರ್ಯೋಚನೆಯಿಂದ, ಖುಷಿಯಿಂದಿರುವ ಸ್ನೇಹಿತರು ಮಾತ್ರಾ ನಿಮಗಿರಲಿ – ಇಲ್ಲವಾದಲ್ಲಿ ಅವರ ತಲೆನೋವುಗಳನ್ನು ನಿಮಗೆ ಅಂಟಿಸಿಬಿಡುತ್ತಾರೆ. ನಿಮಗೆ ನಿಮ್ಮ ತಲೆನೋವೇ ಸಾಕಷ್ಟು ಇರುವಾಗ ಬೇರೆಯವರ ತಲೆನೋವು ನಿಮಗೆ ಬೇಕೇ? ಅದನ್ನು ತಲೆಗೆ ಅಂಟಿಸಿಕೊಂಡು ಕೊರಗಲು ನಿಮಗೆ ವ್ಯವಧಾನ ಇಲ್ಲ. ಇದನ್ನ ಸ್ನೇಹಿತರಿಗೆ ಸ್ಪಷ್ಟವಾಗಿ ತಿಳಿಸಿ ಹೇಳಿ.

ಯಾವಾಗಲೂ ಹೊಸ ವಿಷಯಗಳನ್ನು ಈವರೆಗೆ ಕಲಿತಿರುವುದನ್ನು ಬಿಟ್ಟು ಹೊಸಹೊಸಾದನ್ನು ಕಲಿಯುವತ್ತ ನಿಮ್ಮ ಚಿತ್ತ ಹರಿಯಲಿ. ನಿಮ್ಮ ವಯಸ್ಸಿಗೆ ನೀವು ಕಂಪ್ಯೂಟರು ಕಲಿಯಬಹುದು, ವೇದಾಂತವನ್ನು ಅಭ್ಯಾಸ ಮಾಡಬಹುದು, ಮರಗೆಲಸ ಕಲಿಯಬಹುದು, ತೋಟಗಾರಿಕೆ ನಡೆಸಬಹುದು, ವಿಶ್ವವಿದ್ಯಾಲಯದ ಪರೀಕ್ಷೆಗಳನ್ನ ಕಟ್ಟಬಹುದು. ಮತ್ತೆ ಸ್ಕೂಲಿನ, ಕಾಲೇಜಿನ ಪಾಠಗಳನ್ನೂ ಓದಬಹುದು. ಇನ್ನೂ ಹೆಚ್ಚು ಸಂತೋಷ ನೀಡುವ ಸಂಗತಿ ಎಂದರೆ ಮಕ್ಕಳಿಗೆ ಪಾಠ ಹೇಳಿಕೊಡುವುದು. ನೀವು

ವೃತ್ತಿಯಲ್ಲಿದ್ದಾಗ ಅದೆಷ್ಟೋ ಪುಸ್ತಕಗಳನ್ನು ಓದಬೇಕು ಎಂದುಕೊಂಡಿರುತ್ತೀರಿ – ಈಗ ಸಮಯವಿದೆ ಅವುಗಳನ್ನು ಓದಿ. ಅಲ್ಲದೆ ಹೊಸ ಭಾಷೆಗಳನ್ನೂ ಕಲಿಯಬಹುದು.

ಯಾವುದಾದರೂ ಒಂದು ಹವ್ಯಾಸದಲ್ಲಿ ನಿಮ್ಮನ್ನು ತೊಡಗಿಸಿಕೊಳ್ಳಿ, ಮನಸ್ಸನ್ನು ಅಲೆಯಲು ಬಿಡಬೇಡಿ, ಅದು ದೆವ್ವದ ಕಾರ್ಯಾಗಾರ ಎಂದು ಈಗಾಗಲೇ ಹೆಸರನ್ನು ಪಡೆದುಕೊಂಡಿದೆ. ಅದರ ಜತೆಜತೆಗೆ ಋಣಾತ್ಮಕ ಅಂದರೆ ನೆಗೆಟೀವ್ – ಚಿಂತನೆಗಳನ್ನು ದೂರವಿಡಿ, ನಿಮ್ಮ ಹೃದಯದಲ್ಲಿ ಯಾವಾಗಲೂ ಧನಾತ್ಮಕ ಅಂದರೆ ಪಾಸಿಟೀವ್ ಚಿಂತನೆಗಳು ಹೊರಹೊಮ್ಮಲಿ. ಮನುಕುಲದ ಬಗ್ಗೆ ಇದು ನಿಮಗೆ ಹೆಚ್ಚಿನ ಭರವಸೆಯನ್ನು ತುಂಬುತ್ತದೆ.

ಹೊಟ್ಟೆ ನೋವು ಬರುವ ಹಾಗೆ ನಗುತ್ತಾರೆ ಎನ್ನುವುದನ್ನು ನೀವು ಓದಿರುತ್ತೀರಿ. ಅದು ಹೇಗೆ ಎಂದು ನಿಮಗೆ ತಿಳಿಯದು. ಉಸಿರು ಹಿಡಿಯುವ ಹಾಗೆ ಗಟ್ಟಿಯಾಗಿ ನಗಿ ಮತ್ತು ಈ ನಗು ನಿಮ್ಮಲ್ಲಿ ಹೊಸ ಹುರುಪನ್ನು ತುಂಬುತ್ತದೆ. ಹೊಟ್ಟೆ ನೋವು ಬರುವ ಹಾಗೆ ನಗುವುದು ಎನ್ನುವುದನ್ನು ಅರಿಯುವಿರಿ. ಮೊಮ್ಮಕ್ಕಳಿದ್ದರೆ ಅವರ ಸಂಗಡ ಹೆಚ್ಚು ಸಮಯ ವಿನಿಯೋಗಿಸಿ – ಅಥವಾ ನಿಮ್ಮ ರಸ್ತೆಯಲ್ಲಿನ ಪುಟ್ಟ ಮಕ್ಕಳ ಸ್ನೇಹ ಸಂಪಾದಿಸಿ ಅವರೊಡನೆ ಆಟವಾಡಿ – ನಿಮ್ಮನ್ನು ಇದು ನಿಮ್ಮ ಬಾಲ್ಯಕ್ಕೆ ಕರೆದೊಯ್ಯುತ್ತದೆ ಮತ್ತು ನಿಮ್ಮನ್ನು ವಯಸ್ಸಿನಲ್ಲಿ ಚಿಕ್ಕವರನ್ನಾಗಿಸುತದ್ತೆ – ಗ್ರೋಯಿಂಗ್ ಯಂಗ್ ಅನ್ನುತ್ತಾರೆ ನೋಡಿ ಹಾಗಾಗುವಿರಿ.

ಜೀವಮಾನ ಪೂರ್ತಿ ನಿಮ್ಮೊಂದಿಗೆ ಇರುವವರು ನೀವೊಬ್ಬರೇ ಎಂಬುವುದು ಸದಾ ನಿಮ್ಮ ಮನಸ್ಸಿನಲ್ಲಿರಲಿ.

ಜತೆಯವರ ಕಷ್ಟ ಸುಖದಲ್ಲಿ ತುಂಬು ಮನಸ್ಸಿನಿಂದ ಭಾಗಿಗಳಾಗಿ. ಇದೊಂದೇ ನೀವು ಅವರಿಗೆ ನೀಡಬಹುದಾದ ಸಾಂತ್ವನ.

ನಿಮ್ಮ ಸುತ್ತಲೂ ನೀವು ಇಷ್ಟಪಡುವ ವಸ್ತುಗಳನ್ನು ಇಟ್ಟುಕೊಳ್ಳಿ – ಇದು ನೀವು ತುಂಬಾ ಇಷ್ಟ ಪಡುವ ಪುಸ್ತಕಗಳಾಗಬಹುದು, ನಿಮ್ಮ ಪ್ರೀತಿಯ ಸಾಕುಪ್ರಾಣಿಗಳಿರಬಹುದು, ನೀವು ಮೆಚ್ಚಿದ ಒಂದು ಚಿತ್ರವಾಗಬಹುದು, ನಿಮ್ಮ ಫೋಟೋ ಆಲ್ಬಂ ಇರಬಹುದು, ನೀವು ನಿಮ್ಮ ಯೌವನದಲ್ಲಿ ಇಷ್ಟ ಪಟ್ಟ ಚಲನಚಿತ್ರದ ನಾಯಕನ ಅಥವಾ ನಾಯಕಿಯ ಫೋಟೋ ಆಗಿರಬಹುದು, ನಿಮ್ಮ ಸಂಸಾರದ ಆದರ್ಶ ಚಿತ್ರಗಳಿರಬಹುದು, ನಿಮ್ಮ ಹೆಂಡತಿಯ/ಗಂಡನ ಸಂಗಡ ನೀವು ತೆಗೆಸಿಕೊಂಡ ಮೊದಲ ಫೋಟೋ ಇರಬಹುದು ಮತ್ತು ನೀವು ಕಾಲೇಜಿನಲ್ಲಿ ರನ್ನಿಂಗ್ ರೇಸಿನಲ್ಲಿ ಮೊದಲ ಬಹುಮಾನವಾಗಿ ಪಡೆದ ಪುಟ್ಟ ಕಪ್ ಇರಬಹುದು – ನಿಮ್ಮ ಮೆಚ್ಚಿನ ಸಾಕು ನಾಯಿ, ಬೆಕ್ಕು ಯಾವುದೇ ಇರಲಿ ಅದು ನಿಮಗೆ ಸಂತೋಷ ನೀಡುವಲ್ಲಿ ಅದು ನಿಮ್ಮ ಬಳಿಯಲ್ಲಿಯೇ ಇರಲಿ, ಇವೆಲ್ಲವೂ ನಿಮಗೆ ಹಳೆಯ ನೆನಪನ್ನು ಅದರೊಂದಿಗಿನ ಖುಷಿಯನ್ನೂ ಮತ್ತೆ ಮತ್ತೆ ತರಲು ನೆರವಾಗುತ್ತದೆ. ವಯಸ್ಸಾಗಿರುವ ಭಾವನೆಯಿಂದ ನಿಮ್ಮನ್ನು ರಕ್ಷಿಸುತ್ತದೆ. ಓದು ಬರಹದಲ್ಲಿ ಆಸಕ್ತಿ ಇರುವವರಾಗಿದ್ದರೆ ನೀವು ನಿಮ್ಮ ವೃತ್ತಿಯ ಅನುಭವಗಳನ್ನು ಬರಹದಲ್ಲಿ ಇರಿಸಿ ಮುಂದಿನ ಪೀಳಿಗೆಗೆ ಅದನ್ನು ರವಾನಿಸಲೂ ಬಹುದು.

ಇನ್ನು ನಿಮ್ಮ ಆರೋಗ್ಯ - ಅದು ಉತ್ತಮವಾಗಿದ್ದಲ್ಲಿ ಅದನ್ನು ಜಾಣತನದಿಂದ ಕಾಪಾಡಿಕೊಳ್ಳಿ, ತೊಂದರೆ ಇದ್ದಲ್ಲಿ ಸರಿಪಡಿಸಿಕೊಳ್ಳಿ ಮತ್ತು ವೈದ್ಯಕೀಯ ನೆರವು ಬೇಕಿದ್ದಲ್ಲಿ ಪಡೆಯಿರಿ - ಆರೋಗ್ಯವೇ ಭಾಗ್ಯವೆಂಬುದು ನಿಮ್ಮ ನೆನಪಿನಲ್ಲಿ ಸದಾ ಇರಲಿ. ಅದೂ ಅಲ್ಲದೇ ಒಂದು ಗುಟ್ಟು - ಈ ವಯಸ್ಸಿನಲ್ಲಿ ಯಾವುದೇ ಹೊಸಾ ಚಟಗಳಿಗೆ ಆಸ್ಪದ ನೀಡಬೇಡಿ.

ಕಹಿ ನೆನಪುಗಳನ್ನು ಮನಸ್ಸಿನಿಂದ ಕಿತ್ತುಹಾಕಿಬಿಡಿ. ಹಳೆಯ ಕಹಿ ನೆನಪುಗಳನ್ನು ತರುವ ಸ್ಥಳಗಳು ಮತ್ತು ವ್ಯಕ್ತಿಗಳೊಂದಿಗೆ ಸ್ನೇಹ ಬೆಳೆಸಲು ಸಾಧ್ಯವೇ ನೋಡಿ. ಅವಶ್ಯಬಿದ್ದಲ್ಲಿ ಹೊಸ ಜಾಗಗಳಿಗೆ, ಹೊಸ ಊರುಗಳಿಗೆ, ಹೊಸ ಪ್ರದೇಶಗಳಿಗೆ, ಆಗಾಗ್ಗೆ ಭೇಟಿ ಕೊಡಿ. ಹೊಸ ಗೆಳೆಯರನ್ನು ಸಂಪಾದಿಸಿಕೊಳ್ಳಿ. ಇದು ನಿಮ್ಮಲ್ಲಿ ಹೊಸ ಚೈತನ್ಯವನ್ನು ತುಂಬುತ್ತದೆ. ಈ ಕಾರಣಕ್ಕಾಗಿಯೇ ನಮ್ಮ ಪೂರ್ವಿಕರು ವಯಸ್ಸಾದ ನಂತರ ಬದರಿ ಕೇದಾರಗಳಿಗೆ ಹೋಗಿಬರುತ್ತಿದ್ದರು. ವಯಸ್ಸಾದ ನಂತರ ಹೊಸ ಗೆಳೆತನಗಳನ್ನು ಬೆಳೆಸುತ್ತಿದ್ದರು. ಪುರಾಣ ಪುಣ್ಯಕಥೆಗಳನ್ನು ಆಲಿಸುತ್ತಿದ್ದರು.

ಸಣ್ಣಪುಟ್ಟ ನೆರವು ನೀಡಿದವರಿಗೂ ವಂದನೆಗಳನ್ನು ಬಾಯಿ ತುಂಬಾ ಸಲ್ಲಿಸಿ ಮತ್ತು ಪ್ರತಿಯೊಬ್ಬರಿಗೂ ಅವರನ್ನು ನೀವು ಇಷ್ಟಪಡುವುದನ್ನು ಬಿಚ್ಚು ಮನಸ್ಸಿನಿಂದ ಹೇಳಿ - ಅವರಿಗೆ ಒಳ್ಳೆಯದನ್ನು ಹಾರೈಸಿ - ವಯಸ್ಸಾದವರ ಬಾಯ ಹರಕೆ ಫಲಿಸುತ್ತದೆ ಎನ್ನುವುದು ಸಾಮಾನ್ಯ ನಂಬಿಕೆ - ನಿಮ್ಮ ಈ ಹಾರೈಕೆಯಿಂದ ಕೆಲವು ಸಾವಿರ ಮನಸ್ಸುಗಳು ಅರಳುವ ಹಾಗಿದ್ದರೆ ಅರಳಲಿ.

ಒಬ್ಬ ಮನುಷ್ಯನನ್ನು ಆತ ಎಷ್ಟು ವರ್ಷ ಬದುಕಿದ್ದ ಎನ್ನುವುದರಿಂದ ಅಳೆಯುವ ಕಾಲ ಇದಲ್ಲ, ಬದಲಿಗೆ ಆತ ಹೇಗೆ ಬದುಕಿದ ಎಷ್ಟು ಸ್ನೇಹಿತರನ್ನು ಹೊಂದಿದ್ದ ಎನ್ನುವುದು ಮುಖ್ಯವಾಗುತ್ತದೆ.

---

## ಫ್ರೀ ಅಲ್ಲ

'ನೊ ಫ್ರೀ ಲೆಫ್ಟ್ ಟರ್ನ್' ಎಂದು ಬೋರ್ಡ್ ಹಾಕಿದ್ದರೂ ಅದನ್ನು ನಿರ್ಲಕ್ಷಿಸಿ ಹೋದ ಸ್ಕೂಟರ್ ಸವಾರನನ್ನು ಪೋಲೀಸರು ಹಿಡಿದು ದಂಡ ಕಟ್ಟಲು ಸೂಚಿಸಿದರು. ಅವನು ಎಷ್ಟು ಗೋಗರೆದರೂ, ಯಾರ ಯಾರ ಹೆಸರು ಹೇಳಿದರೂ ಪೋಲೀಸರು ಬಿಡಲಿಲ್ಲ. ದಂಡ ಕಕ್ಕಲೇ ಬೇಕಾಯಿತು.

ರಸೀದಿ ಹಿಡಿದು ಹೋಗುವಾಗ ಅವನಿಗೆ ಎಸ್ ಈ ಹೇಳಿದ: ಲೆಫ್ಟ್ ಟರ್ನ್ ಫ್ರೀ ಅಲ್ಲ ಎಂದು ಈಗಲಾದರೂ ತಿಳಿಯಿತೆ?

# ಜಿಜ್ಞಾಸಾ ಪ್ರಶ್ನೆಗಳು....!

• ಗುರು

ನಾನು ವಕೀಲಿ ಓದಬೇಕಾದರೆ ಜನಸಾಮಾನ್ಯರಿಗೆ - ಅದರಲ್ಲೂ ನಾನು ಕೆಲಸ ಮಾಡುವ ಕಡೆ ಇದ್ದ ಕಾರ್ಮಿಕರಿಗೆ ಬರುವ ಸಂಶಯಗಳನ್ನು ನನ್ನ ಹತ್ತಿರ ತೋಡಿಕೊಳ್ಳುತ್ತಿದ್ದರ ಕುರಿತು ಹೇಳಿದ್ದೆ. ಒಂದು ದಿವಸ ರಾತ್ರಿ ಹೀಗೇ ಆಫೀಸಿನಲ್ಲಿ ಯಾವುದೋ ದಪ್ಪನೆಯ ಲಾ ಪುಸ್ತಕ ಹಿಡಿದು ಕೂತಿದ್ದಿನಿ. ನಾಲ್ಕೈದು ಕಾರ್ಮಿಕರು ಬಾಗಿಲ ಹತ್ತಿರ ನಿಂತು ಗುಸ ಗುಸ ಮಾತನಾಡುವ ಶಬ್ದ ಕೇಳಿಸಿತು. ಬನ್ರೀ ಒಳಗೆ ಅಂತ ಕರೆದೆ. ಒಳಗೆ ಬಂದರು – ಸಾರ್ ಒಂದು ಡೌಟು ಬಂದಿದೆ.... ಅಂದರು. ಏನು ಅಂದೆ.

ನೀವು ಲಾ ಓದ್ತಿದೀರೀ ತಾನೇ? ನಮಗೊಂದು ಪ್ರಶ್ನೆಗೆ ಉತ್ತರ ಬೇಕಲ್ಲಾ ...

ಪ್ರಶ್ನೆ ಏನು ಕೇಳಿ ಉತ್ತರ ಗೊತ್ತಿದ್ದರೆ ಹೇಳ್ತೀನಿ..

ಈಗ ಯಾರಿಗಾದರೂ ಗಲ್ಲು ಶಿಕ್ಷೆ ವಿಧಿಸ್ತಾರಲ್ಲಾ, ಅವಾಗ ಜಡ್ಜು ಪೆನ್ನು ಮುರೀತಾರೆ ತಾನೇ?

ಸಿನಿಮಾದಲ್ಲಿ ಪೆನ್ನು ಮುರಿಯುವ ದೃಶ್ಯಗಳನ್ನ ನಾನೂ ನೋಡಿದ್ದೆ - ಆದರೆ ನಿಜ ಜೀವನದಲ್ಲಿ ನಿಜಕ್ಕೂ ನನಗೆ ಪೆನ್ನು ಮುರಿಯೋದು ಗೊತ್ತಿರಲಿಲ್ಲ. ನನಗೆ ತಿಳೀದು ಅಂದೆ. ನಾನೂ ಇವರೂ ಬೆಟ್ಟಿಂಗ್ ಕಟ್ಟಿದೀವಿ – ಯಾರನ್ನಾದರೂ ಕೇಳಿಕೊಂಡು ಬಂದು ಹೇಳ್ತೀರಾ?

ಇದನ್ನ ಯಾರಾದರೂ ಜಡ್ಜುಗಳನ್ನೇ ಕೇಳಬೇಕೂರೀ ನನಗೆ ಯಾವ ಜಡ್ಜೂ ಗೊತ್ತಿಲ್ಲ ಅಂತ ತಪ್ಪಿಸಿಕೊಂಡೆ. ಇದು ಅವತ್ತಿನ ಮಟ್ಟಿಗಾದರೂ ಈ ರೀತಿಯ ಪ್ರಶ್ನೆಗಳನ್ನು ನನಗೆ ಈಗಲೂ ಯಾರಾದರೂ ಕೇಳುತ್ತಾರೆ.

ಗಲ್ಲು ಶಿಕ್ಷೆ ವಿಧಿಸಿದ ಮೇಲೆ ಜಡ್ಜಿನ ಟೇಬಲ್ಲು ಖುರ್ಚಿ ಎಲ್ಲಾ ಬದಲಾಯಿಸ್ತಾರಂತೆ ಹೌದಾ? ಅಂತ ಒಬ್ಬರು ಮೊನ್ನೆ ಕೇಳಿದರು. ನನಗೆ ಯಾಕೋ ಇವರನ್ನ ಕೀಟಲೆ ಮಾಡಬೇಕು ಅನಿಸಿತು. ಗಲ್ಲು ಶಿಕ್ಷೆ ವಿಧಿಸಿದ ಮೇಲೆ ಜಡ್ಜು ಕೂತ್ಕೋತಾ ಇದ್ದರಲ್ಲಾ ಆ ಬಿಲ್ಡಿಂಗನ್ನ ಇಡಿಯಾಗಿ ಬೀಳಿಸಿಬಿಡ್ತಾರೆ. ಆಮೇಲೆ ಅದನ್ನ ಮತ್ತೆ ಕಟ್ತಾರೆ ಅಂದೆ. ಅವರು ಸೀರಿಯಸ್ ಆಗಿ ಹಾಗಾದರೆ ಬಿಲ್ಡಿಂಗು ಮತ್ತೆ ಕಟ್ಟೋವರೆಗೂ ಮಿಕ್ಕ ಕೇಸುಗಳು ಏನಾಗುತ್ತವೆ? ಅಂದರು! ಮಿಕ್ಕಿರೋ ಕೇಸು ಅಡ್‌ಜಾರ್ನ್ ಆಕ್ಕೊಂಡು ಹೋಗುತ್ತವೆ - ಅದಕ್ಕೇ ಕೋರ್ಟಿನಲ್ಲಿ ಅಷ್ಟೊಂದು ಕೇಸುಗಳು ತೀರ್ಮಾನವಾಗದೇ ಇರೋದು... ಅಂದೆ. ಅದಕ್ಕೇ ಇರಬೇಕು –

ನಮ್ಮ ತಾತನ ಕಾಲದಲ್ಲಿ ಹಾಕಿದ ಪಾರ್ಟಿಷನ್ ಕೇಸು ಇನ್ನೂ ಹಾಗೇ ಇದೆ ಅಂತ ಸಮಾಧಾನ ಪಟ್ಟುಕೊಂಡರು.

ಗಲ್ಲು ಶಿಕ್ಷೆ ತೀರ್ಮಾನ ಕೊಟ್ಟ ನಂತರ ಜಡ್ಜು ಮನೆಗೆ ಹೋಗಿ ಸ್ನಾನ ಮಾಡ್ತಾರಾ ಅಂತ ಒಬ್ಬರು ಮಡಿಯವರು ಕೇಳಿದ್ದರು.

ನನಗೂ ಗೊತ್ತಿಲ್ಲಾ ಇವರೇ, ಸ್ನಾನ ಮಾಡಬಹುದು ಜತೆಗೇ ತಲೇನೂ ಬೋಳಿಸಿಕೊಳ್ಳಬಹುದು.... ಜನಿವಾರವಿದ್ದರೆ ಅದನ್ನು ಬದಲಾಯಿಸಬಹುದು....

ಅದು ಯಾಕೆ?

ಶಿಕ್ಷೆ ಕೊಟ್ಟರಲ್ಲಾ ಅದಕ್ಕೆ. ಇನ್ನೊಂದು ಮನೇಲಿ ಹೆಂಡತಿ ಗಲ್ಲು ಶಿಕ್ಷೆ ಕೊಟ್ಟಿದೀರೀ ಸ್ನಾನ ಮಾಡಿ, ಕೂದಲು ತೆಗೀರೀ ಅಂತ ಹುಕುಂ ಕೊಟ್ಟರೆ? ಹಾಗೇ ಜನಿವಾರ ಬದಲಾಯಿಸಿ ಅಂದರೆ...

ಮಡಿಯವರು ಮುಖ ಸಿಂಡರಿಸಿಕೊಂಡರು – ಪಾಪ ಅವರ ಮನೇಲಿ ಅವರ ಶ್ರೀಮತಿ ಹಾಗೇ ಹುಕುಂ ಜಾರಿ ಮಾಡುವವರ ಗುಂಪಿನವರಂತೆ!

ಗಲ್ಲಿಗೆ ಹಾಕೋದಿಕ್ಕೆ ಅಂತ ಒಬ್ಬ ಇರ್ತಾನಲ್ಲಾ ಅವನು ಗೌರ್ಮೆಂಟು ಸರ್ವೆಂಟಾ ಅಂತ ಒಂದು ಪ್ರಶ್ನೆ ಎದುರಿಸಿದ್ದೆ.

ಯಾಕೆ ಈ ಪ್ರಶ್ನೆ? ಅಂತ ಕೇಳಿದೆ.

ಅಲ್ಲಾ ಆತ ಗೌರ್ಮೆಂಟು ಸರ್ವೆಂಟಾಗಿದ್ದರೆ ಅವನಿಗೆ ಬೇರೆ ಕೆಲಸವೇ ಇರೋದಿಲ್ಲವಲ್ಲಾ?

ಅದು ಹೇಗೆ?

ಅಲ್ಲಾ ಸಾರ್, ವರ್ಷಕ್ಕೆ ಎಷ್ಟು ಜನ ಗಲ್ಲಿನ ಶಿಕ್ಷೆಗೆ ಬೀಳ್ತಾರೆ ಹೇಳಿ? ಹತ್ತು ಜನ ಬೀಳಬಹುದಾ? ಮಿಕ್ಕಿದ ದಿವಸ ಇವನಿಗೆ ಏನು ಕೆಲಸ ಇರುತ್ತೆ? ಸುಮ್ಮನೆ ಸಂಬಳ ಕೊಡುತ್ತಲ್ಲಾ ಸರ್ಕಾರ?

ಹೌದಲ್ಲಾ ಅನಿಸಿತು. ಇಲ್ಲಾ ಇವರೇ ಅವನಿಗೆ ಕೆಲಸ ಇಲ್ಲದೇ ಇರಬೇಕಾದರೆ ಹೈಯರು ಪೋಲೀಸು ಅವನನ್ನ ಮನೇಲಿ ಕೋಳಿ ಕತ್ತರಿಸೋಕ್ಕೆ ಇಟ್ಕೋತಾರಂತೆ ಅಂತ ಹೇಳಿ ಅವರ ಸಂಶಯ ಪರಿಹರಿಸಿದ್ದೆ .

ಗಲ್ಲಿಗೆ ಹಾಕಿದವನು ಆಮೇಲೆ ಸ್ನಾನ ಮಾಡ್ತಾನಾ, ಶಾಂತಿ ಮಾಡ್ಕೋತಾನಾ, ದೇವರ ಹತ್ತಿರ ಪಾಪ ಪರಿಹರಿಸು ಅಂತ ಬೇಡ್ಕೋತಾನಾ... ಈ ತರಹದ ಪ್ರಶ್ನೆಗಳ ಜತೆಗೆ ಮತ್ತೊಂದು ಸಂಶಯ ನನ್ನ ಮಿತ್ರರೊಬ್ಬರಿಗೆ ಇತ್ತು. ಮನೇಲಿ ತಿಥಿ ಮಾಡಿಸುವ ಪುರೋಹಿತರಿಗೆ ವಸ್ತ್ರದಾನ ಗೋದಾನ ಮಾಡುವ ಹಾಗೆ ಈತನಿಗೂ ಯಾವುದಾದರೂ ದಾನ ನೀಡುವ ಕಾನೂನು ಇದೆಯೇ, ಇದ್ದರೆ ಅದನ್ನ ಆತ ಒಬ್ಬನೇ ಅನುಭವಿಸಬೇಕೋ ಅಥವಾ ಅದರಲ್ಲಿ ಕೋರ್ಟಿನ ಇತರ ಯಾರಿಗಾದರೂ ಪಾಲಿದೆಯೋ? ಗಲ್ಲಿನ ಶಿಕ್ಷೆಗೆ ಒಳಗಾದ ಹೆಣದ ಮೇಲಿನ ಬಟ್ಟೆಗಳು ಯಾರಿಗೆ ಸೇರಬೇಕು, ಆತನ ಮೇಲೆ ಒಡವೆಗಿಡವೆ ಇರುತ್ತಾ? ಜಡ್ಜುಗಳಿಗೆ ಇದರಲ್ಲಿ ಪಾಲುಸಿಗುತ್ತಾ?

ಮೊನ್ನೆ ನನ್ನ ನೆಂಟರೊಬ್ಬರ ಮನೆಯಲ್ಲಿ ಚೌಲವಾಯಿತು. ಹೀಗಂದರೆ ಗೊತ್ತಲ್ಲಾ ಮಕ್ಕಳಿಗೆ ಹುಟ್ಟುಕೂದಲನ್ನು ಮೊದಲಬಾರಿಗೆ ತೆಗೆಸುವುದು. ಕೂದಲು ತೆಗೆಯಲು ಬಂದವರಿಗೆ ಶಾಸ್ತ್ರದ ರೀತ್ಯಾ ಒಂದು ತಟ್ಟೆಯಲ್ಲಿ ಅಕ್ಕಿ ಹಣ್ಣು ಹೂವು, ಪಂಚೆ ಶಲ್ಯ ಕವರು ಇನ್ನೂ ಏನೇನೋ ನೀಡಿದರು. ಕೂದಲು ತೆಗೆಸಬೇಕಾದರೆ ಇದನ್ನೆಲ್ಲವನ್ನೂ ನೀಡಬೇಕಾದರೆ ಪ್ರಾಣ ತೆಗೆಸಬೇಕಾದರೆ ನೀಡಲೇಬೇಕಾದಂತಹವು ಇನ್ನೂ ಹೆಚ್ಚಿರಲೇ ಬೇಕು ಅನಿಸಿತು! ಹಿಂದೆ ಗೆಳೆಯರೊಬ್ಬರು ಕೇಳಿದ್ದ ಸಂಶಯ ನನಗೂ ಹುಟ್ಟಿತು!

ಸಿನಿಮಾಗಳಲ್ಲಿ ಕೇಳುವ ಹಾಗೆ ನಿಜಜೀವನದಲ್ಲಿಯೂ ಗಲ್ಲು ಶಿಕ್ಷೆಗೆ ಒಳಗಾಗಿರುವವರನ್ನು ನಿನ್ನ ಕೊನೇ ಆಸೆ ಏನು ಅಂತ ಕೇಳ್ತಾರಾ? ಅವಾಗ ಅವನು ಅಕಸ್ಮಾತ್ ನನಗೆ ಹತ್ತು ಮಕ್ಕಳಾಗಬೇಕು ಹತ್ತು ಮಕ್ಕಳ ತಂದೆ ಅಂತ ಅನಿಸಿಕೋಬೇಕು ಅಂತ ಅಂದರೆ ಅವನಿಗೆ ಹತ್ತು ಮಕ್ಕಳು ಆಗುವವರೆಗೆ ಗಲ್ಲು ಶಿಕ್ಷೆ ಮುಂದೆ ಹೋಗುತ್ತಾ? ನನಗೆ ತಿಳೀದು ಎನ್ನುವ ಒಂದೇ ಉತ್ತರ ಕೊಡ್ತಿದ್ದೆ ಮತ್ತು ಈಗಲೂ ಇಂತಹ ಎಷ್ಟೋ ಪ್ರಶ್ನೆಗಳಿಗೆ ನನಗೆ ಉತ್ತರ ತಿಳೀದು .

ಸಂಶಯಾತ್ಮಾ ವಿನಶ್ಯತಿ ಅಂತೇನೋ ಗೀತೆಯಲ್ಲಿ ಒಂದು ಶ್ಲೋಕ ಇದೆಯಂತೆ. ಬಹುಶಃ ಯೋಚಿಸುವವರು ಇರುವವರೆಗೂ ಸಂಶಯಗಳೂ ಇರುತ್ತವೆ. ಲಾಯರಗಿರಿ ಮಾಡುವುದಕ್ಕಿಂತಲೂ ಲಾಯರಿಕೆಗೆ ಓದಬೇಕಾದರೆ ಪರಿಹರಿಸಬೇಕಾದಂತಹ ಸಂಶಯಗಳ ಆಳ ಹೆಚ್ಚು ವಿಸ್ತಾರವಾದವುಗಳು!

---

### ಬಾಳ ಬೌದಾ

ನನ್ನ ಮೂರು ವರ್ಷದ ಮಗಳು ಚೆನ್ನಾಗಿ ಕನ್ನಡ ಕಲಿಯಲು ಅನುಕೂಲವಾಗಲಿ ಎಂದು ಮನಸೆಳೆಯುವ ಅಕ್ಷರ, ಚಿತ್ರಗಳಿರುವ ಪರಿಚಯ ಪುಸ್ತಕಕ್ಕಾಗಿ ಹುಡುಕಾಟ ಆರಂಭಿಸಿದೆ. ನನ್ನ ಈ ಆತಂಕ ಮಗುವಿಗೂ ಅರ್ಥ ಆಯಿತೆಂದು ಕಾಣುತ್ತದೆ. ಒಂದು ಪುಸ್ತಕದ ಅಂಗಡಿಯ ಮುಂದೆ ಗಾಡಿ ನಿಲ್ಲಿಸಿದಾಗ ಅವಳೇ ಅಂಗಡಿಗೆ ಓಡಿ ಹೋಗಿ ಮಾಲೀಕನನ್ನು 'ಅಂಕಲ್ ಕನ್ನಡ ಬಾಳ ಬೌದಾ...?' ಎಂದು ಕೇಳತೊಡಗಿದಳು. ಮಾಲೀಕನಿಗೆ ಅರ್ಥವಾಗದೆ 'ಏನ್ ಮರಿ..' ಅಂದಾಗ ಅವಳು 'ಅದೇ ಕನ್ನಡ ಬಾಳ ಬೌದಾ' ಎಂದು ಮತ್ತೊಮ್ಮೆ ಹೇಳಿದಾಗ ಅಲ್ಲಿದ್ದವರೆಲ್ಲಾ ಗೊಂದಲದಲ್ಲಿ ಬಿದ್ದರು. ನಾನು 'ಏನ್ ಪುಟ್ಟೀ ಹಂಗೆಲ್ಲಾ ಕೇಳ್ತಾರಾ?' ಎಂದು ಅವಳನ್ನು ಕೇಳಿದೆ. 'ಅದೇ ಲತಾ ಆಂಟಿ ಹೇಳಿದ್ರಲ್ಲಾ ಬುಕ್ಕು ಅದು' ಎಂದಾಗ ನನಗೆ ಫಕ್ಕನೆ ನೆನಪಾಯಿತು. ನನ್ನ ಗೆಳತಿ ಲತಾ 'ಲಕ್ಷ್ಮೀ ಮಗೂಗೆ ಕನ್ನಡ ಕಲಿಸಬೇಕಾದರೆ ಕನ್ನಡ ಬಾಲ ಬೋಧೆ ತುಂಬಾ ಸಹಾಯಕ್ಕೆ ಬರತ್ತೆ ಎಂದು ಮಗು ಮುಂದೆ ಹೇಳಿದ್ದಳು. ಆ ಬಾಲಬೋಧೆ ಮಗುವಿನ ಬಾಯಿಯಲ್ಲಿ 'ಬಾಳ ಬೌದಾ' ಆಗಿತ್ತು.

– ಸಾಯಿಲಕ್ಷ್ಮಿ ಎಸ್.

# ಶ್ರೀ ಭಾರತ ದರ್ಶನಂ

• *ಸಿ.ಆರ್. ಸತ್ಯ*

ನಿಮಗೆ ಎಂಟನೇ ಸ್ಟಾಂಡರ್ಡ್‌ನಲ್ಲಿ ಓದುತ್ತಿರುವ ಮೊಮ್ಮಕ್ಕಳು ಯಾರಾದರೂ ಇದ್ದರೆ ಅವರು ಇನ್ನೂ ಚಿಕ್ಕವರು ಅಂತ ಮಾತ್ರ ಭಾವಿಸಬೇಡಿ. ಅವರಿಗಿರೋ ಚಾಣಾಕ್ಷ್ಯ ಬುದ್ಧಿ, ವಿವೇಚನಾ ಶಕ್ತಿ ಎಂಥಹವರನ್ನೂ ಮೀರಿಸುತ್ತವೆ. ಮೊನ್ನೆ ನನ್ನ ಮೊಮ್ಮಗ ನನ್ನ ಮುಂದೆ ಬಂದು ನಿಂತ, ''ಅಜ್ಜಾ, ನಿನ್ಹತ್ರ ನಾನು ಏನೋ ಹೇಳಬೇಕಿತ್ತು'' ಅಂದ. ''ಹೇಳಪ್ಪಾ'' ಅಂದೆ, ಟ್ಯೂಷನ್ನು, ಆರ್ಟ್ಸ್ ಕ್ಲಾಸು, ಕ್ರಿಕೆಟ್ ಕ್ಯಾಂಪ್, ಹೋಮ್ ವರ್ಕ ಅಂತ ಈ ಹುಡುಗ ನನ್ನ ಕಣ್ಣಿಗೆ ಬೀಳೋದೇ ಅಪರೂಪ.

''ಅಜ್ಜಾ, ನಮ್ಮ ಸ್ಕೂಲಿನಲ್ಲಿ ನಮಗೆಲ್ಲಾ ಮಹಾಭಾರತದ ಕತೆ ಓದಿ ಅದರ ಬಗ್ಗೆ ನಮಗೆ ಏನು ಅನ್ನಿಸುತ್ತೆ ಅನ್ನೋದರ ಬಗ್ಗೆ ಬಂದು ಹೇಳಿ ಅಂತ ನಮ್ಮ ಟೀಚರ್ ಹೇಳಿದ್ರು'' ಅಂದ.

''ಗಾಡ್ ಬ್ಲೆಸ್ ದಿ ಟೀಚರ್! ನಿಮ್ಮಂತಹವರ ಸ್ಕೂಲಿನಲ್ಲಿ ಮಹಾಭಾರತದ ಬಗ್ಗೇನೂ ಅರಿವಿದೆಯೆಲ್ಲಾ'' ಅಂತ ಅಂದೆ

ಆಗಲೇ ಅವನ ಸಹನೆ ಮೀರ್‍ತಿತ್ತು ಅಂತ ಕಾಣುತ್ತೆ.

''ನನ್ನ ಕಾಮೆಂಟ್ಸ್‌ನ ಓದ್ತೀನಿ. ಮುಂಚೆ ನೀನು ಅದೆಲ್ಲಾ ಕೇಳಿಸ್ಕೋ. ಆಮೇಲೆ ನಿನ್ನ ಕಾಮೆಂಟ್ಸು'' ಅಂತ ಹೇಳಿದ.

''ಆಗ್ಲಪ್ಪಾ'' ಅಂದೆ

ಡಾಕ್ಟರೇಟ್ ಥೀಸಿಸ್ ಸಬ್ಮಿಟ್ ಮಾಡೋ ರೀತೀಲಿ, ಈ ಹನ್ನೆರಡು ವರ್ಷದ ಪೋರ ಹೇಳಿದ್ದೆಲ್ಲಾ ಅಕ್ಷರಶಃ ಕೆಳಗೆ ಒಪ್ಪಿಸಿದ್ದೀನಿ:

- ಒಬ್ಬ ಗಂಡಸು ಐದು ಜನ ಹೆಂಡತಿಯರನ್ನ ಇಟ್ಕೋಬಹುದು. ಆದರೆ ಒಬ್ಬ ಹೆಂಗಸು ಐದು ಜನ ಗಂಡಂದಿರನ್ನ ಇಟ್ಕೋಳ್ಳೋದು ಸರಿಯಲ್ಲ. ಇದರಿಂದ ದ್ರೌಪದಿಗೆ ಮನೆ ಕೆಲಸ ಐದು ಪಟ್ಟು ಜಾಸ್ತಿಯಾಯ್ತು.
- ಗಾಂಧಾರಿ ಕಣ್ಣಿಗೆ ಬಟ್ಟೆ ಕಟ್ಟಿಕೊಂಡಿದ್ದು ಗಂಡ ಕುರುಡ ಧೃತರಾಷ್ಟ್ರನ ಬಗ್ಗೆ ಸಂತಾಪಕ್ಕಲ್ಲ. ನೂರು ಜನ ಮಕ್ಕಳು ಮಾಡ್ತಿದ್ದ ಗಲಾಟೆಗಳನ್ನ ನೋಡಕ್ಕಾಗದೆ ಕಣ್ಣು ಮುಚ್ಚಿಕೊಂಡಳು ಅಷ್ಟೆ

- ಪಾಂಡವರು ಅರಗಿನ ಮನೆಯಲ್ಲಿ ಹೋಗಿ ಮಲಗಿ ಬೆಂಕಿಯಲ್ಲಿ ಸಿಕ್ಕಿಕೊಂಡಿದ್ದು ಅವರ ತಪ್ಪಿನಿಂದಲೇ! ಕೈನಲ್ಲಿ ದುಡ್ಡಿದ್ದಾಗ ಹಸ್ತಿನಾಪುರಿಯಲ್ಲೇ 60'x40' ಸೈಟ್ ತೊಗೊಂಡು ಬೇಗ ಮನೆ ಕಟ್ಟಿಕೊಳ್ಳಬೇಕಿತ್ತು.
- ಕುಂತಿಗೆ ಜೀವನದಲ್ಲಿ ಮಹಾ ಮೋಸವಾಯಿತು. ಪಾಪ ಅವಳಿಗೆ ಅಷ್ಟೊಂದು ಗಂಡು ಮಕ್ಕಳಾದರೂ, ವರದಕ್ಷಿಣೆ ಕೇಳೊಕ್ಕೆ ಸಿಕ್ಕಿದ್ದು ಒಂದೇ ಸೊಸೆ!
- ಜೀವನದಲ್ಲಿ ಎಂದೂ ಪಗಡೆಯಾಡಬಾರದು. ಮೊಬೈಲ್‌ನಲ್ಲೋ, ಗೇಮ್ಸ್ ಪಾರ್ಲರ್‌ನಲ್ಲೋ ಎಲೆಕ್ಟ್ರಾನಿಕ್ ಗೇಮ್ಸ್ ಆಡಿದ್ರೆ ಉತ್ತಮ.
- ಪಾಂಡವರು ಪೆದ್ದರು. ಪಗಡೆ ಆಟದಲ್ಲಿ ಸೋತು ನಿಜವಾಗ್ಲೂ ವನವಾಸ ಅಜ್ಞಾತವಾಸ ಅಂತ ಹೊರಟ್ರು. ನಾನೇನಾದ್ರೂ ಆಗಿದ್ರೆ, ದುಬಾಯ್‌ಗೆ ಹೊರಟುಹೋಗ್ತಿದ್ದೆ.
- ಭೀಮ, ಕೀಚಕ ಬಕಾಸುರ – ಇವರೆಲ್ಲಾ ಊಟಮಾಡ್ತಿದ್ದ ರೀತಿ ನೋಡಿದ್ರೆ, ನಂತರ ಬಂದ ಕಲಿಯುಗದಲ್ಲಿ ನಾವು ಕ್ಷಾಮ, ರೇಶನ್ ಅನ್ನೋದೆಲ್ಲಾ ಯಾಕೆ ಅನುಭವಿಸ್ತಿದೀವಿ ಅಂತ ಅರ್ಥವಾಗುತ್ತೆ.
- ಮಹಾಭಾರತ ಯುದ್ಧದಲ್ಲಿ ನಾಯಕರು, ಸೈನಿಕರೆಲ್ಲಾ ಕಚ್ಚೆ ಪಂಚೆ ಉಟ್ಟಿದ್ದು ಅಷ್ಟು ಪ್ರಾಕ್ಟಿಕಲ್ ಅಲ್ಲ. ಜೀನ್ಸ್‌ಪ್ಯಾಂಟ್ ಹಾಕ್ಕೊಂಡಿದ್ದರೆ ಓಡಾಡೊಕ್ಕೆ ಸುಲಭವಾಗಿ ಯುದ್ಧ ಇನ್ನೂ ಬೇಗನೇ ಮುಗೀತ್ತಿತ್ತೋ ಏನೋ!
- ಅವರೆಲ್ಲಾ ಓಡಾಟಕ್ಕೆ, ಯುದ್ಧಕ್ಕೆ ಉಪಯೋಗಿಸುತ್ತಿದ್ದ ರಥಗಳು ಬಹಳ ಎಕೋ ಫ್ರೆಂಡ್ಲಿ, ಪೆಟ್ರೋಲ್, ಡೀಸೆಲ್ ಬೇಕಾಗಿರಲಿಲ್ಲ, ಹೊಗೆಯ ಮಾಲಿನ್ಯ ಇರ್ತಿರಲಿಲ್ಲ. ಚಕ್ರಕ್ಕೆ ಪಂಕ್ಚರ್ ಅನ್ನೋದೇ ಇರಲ್ಲ. ಏನಿದ್ರೂ ಕುದುರೆ ಲದ್ದಿ ಬೀಳೋದು – ಆದ್ರೆ ಅದು ಬಯೋ ಕಂಪ್ಯಾಟಿಬಲ್. ಹಾಗಾಗಿ ಯಾವ ಪ್ರಾಬ್ಲಮ್ಮೂ ಇರಲಿಲ್ಲ.
- ಅಭಿಮನ್ಯು ಕೌರವರ ಚಕ್ರವ್ಯೂಹದಲ್ಲಿ ಸಿಕ್ಕಿ ಹಿಂತಿರುಗಿ ಬರೋದಕ್ಕೆ ಆಗದೆ ಸತ್ತ ಅನ್ನೋದು ಸ್ವಲ್ಪ ದುಃಖದ ಸಂಗತಿ. ಯಾಕೆ, ಆಗಿನ ಕಾಲದಲ್ಲಿ ಒನ್‌ವೇಗಳು ಇದ್ದವೆ? ನಮ್ಮ ಬೆಂಗಳೂರಿನ ದ್ವಿಚಕ್ರ ವಾಹನಕಾರರು ಎಂತದೋ ಜಾಮ್‌ಗಳಿಂದಾನೂ ತಪ್ಪಿಸಿಕೊಂಡು ಹೊರಕ್ಕೆ ರಾಜಾರೋಷವಾಗಿ ಬರೋದು ನೋಡಿ, ಅಭಿಮನ್ಯುವಿನ ಸಾವು ವ್ಯರ್ಥ ಅನ್ನಿಸುತ್ತೆ.
- ಯುದ್ಧ ಭೂಮೀಲಿ ಕೃಷ್ಣ ಅರ್ಜುನನಿಗೆ ಗೀತೋಪದೇಶ ಮಾಡ್ತಿದ್ದಾಗ, ಆ ಗಲಾಟೆಯಲ್ಲಿ ಅರ್ಜುನನಿಗೆ ಎಲ್ಲಾ ಹೇಗೆ ಕೇಳಿಸ್ತು? ಆಗೇನು ಈಗಿನ ತರಹ ಧ್ವನಿವರ್ಧಕ ಯಂತ್ರಗಳಿದ್ದವೆ? ಈ ಗೀತೋಪದೇಶ ಮುಗಿಯೋ ತನಕ, ಆ ಕೌರವರೆಲ್ಲಾ ಕೈ ಕಟ್ಟಿಕೊಂಡು ಸುಮ್ಮನೆ ನಿಂತಿದ್ದರೆ? ಅಥವಾ ಅದೊಂದು ಕಾಫೀ ಬ್ರೇಕ್ ಆಗಿತ್ತೆ?

- ಏಕಲವ್ಯ ಅಷ್ಟು ಸ್ಮಾರ್ಟ್ ಹುಡುಗ ಅಲ್ಲ. ದ್ರೋಣಾಚಾರ್ಯರು ಅವನನ್ನ ಹೆಬ್ಬೆಟ್ಟನ್ನೇ ಗುರುದಕ್ಷಿಣೆಯಾಗಿ ಕೊಡು ಅಂತ ಕೇಳಿದಾಗ, ಏಕಲವ್ಯ – 'ಗುರುಗಳೇ, ಬರೇ ಬೆಟ್ಟೇಕೆ, ನನ್ನ ಕೈಯೇ ಕೊಡುತ್ತೀನಿ, ಮನೇಲಿದೆ, ತಂದು ಬಿಡ್ತೀನಿ' ಅಂತ ಹೇಳಿ, ಅಲ್ಲಿಂದ ಮೊದಲು ಪಲಾಯನ ಮಾಡಿ, ದ್ರೋಣರಿಗೆ ನಿಜವಾಗ್ಲೂ 'ಕೈ' ಕೊಡಬೇಕಿತ್ತು! ಇದೊಂದು ವಿಷಯದಲ್ಲಿ ನಾವೆಲ್ಲಾ ಲಕ್ಕಿ. ಟ್ಯೂಶನ್ ಫೀಸ್‌ನ ಕ್ಯಾಶ್ ಡೌನ್ ಅಂತ ಅಡ್ವಾನ್ಸ್ ಅಂತ ತೆತ್ತುಬಿಟ್ರೆ ನಾವು ಪಾಠಕ್ಕೆ ಹೋಗಲಿ ಬಿಡಲಿ, ಯಾರೂ ಕೇಳೋರೆ ಇಲ್ಲ.
- ಕೊನೆಯದಾಗಿ, ವ್ಯಾಸ ಮುನಿಗಳು ಗಣೇಶನ ಕೈನಲ್ಲಿ ಭಾರತದ ಕತೆಯನ್ನ ಬರೆಸಿದ ಮೇಲೆ "ಎಲ್ಲಾ ಹಕ್ಕುಗಳನ್ನೂ ಕಾದಿರಿಸಿವೆ" ಅಂತ ಹೇಳಲಿಲ್ಲ. ಹೀಗಾಗಿ ಈ ಬರಹವನ್ನು ಸಿನಿಮಾದವರು, ನಾಟಕದವರು, ಕವಿಗಳು, ಸಾಹಿತಿಗಳು ಯದ್ವಾತದ್ವಾ ಉಪಯೋಗಿಸುತ್ತಿದ್ದಾರೆ. ಹಾಗಾಗಿ ಈಗ ನಾವು ಕೇಳೋ ಮಹಾಭಾರತದ ಕತೆ ಒರಿಜಿನಲ್ ವರ್ಶನ್ನೋ ಹೇಗೆ ಅಂತ ಎಲ್ಲರಿಗೂ ಸಂಶಯ ಕಾಡ್ತಿದೆ.

"ಹೇಗಿದೆ ಅಜ್ಜ, ನನ್ನ ಕಾಮೆಂಟ್ಸು?" ಅಂತ ಕೇಳಿದ ಮೊಮ್ಮಗ.

"ಗ್ರೇಟ್ ಮರಿ, ಗ್ರೇಟ್" ಅಂದೆ. ಎಷ್ಟಾದರೂ ನನ್ನ ಮೊಮ್ಮಗ ಅಲ್ವೆ?

"ಮುಂದಿನ ಸೆಮಿಸ್ಟರ್‌ನಲ್ಲಿ ರಾಮಾಯಣದ ಮೇಲೂ ಇದೇ ರೀತಿ ಬರೀಬೇಕಂತೆ. ನಾನು ಬರ್ತೀನಿ ಅಜ್ಜಾ. ಕ್ರಿಕೆಟ್ ಕ್ಯಾಂಪ್‌ಗೆ ಲೇಟಾಯ್ತು" ಅಂತ ಮಿಂಚಿನ ಹಾಗೆ ಹೊರಟೇ ಹೋದ.

ಸರಿ, ನನಗೆ ಇನ್ನು ಸ್ವಲ್ಪ ದಿನಗಳಲ್ಲೇ "ರಾಮಾಯಣ ದರ್ಶನಂ" ಕಾದಿದೆ.



ಸೈಕಲ್ ಬಿಡಿ ಭಾಗಗಳನ್ನು ಮಾರುತ್ತಿದ್ದ ಅಂಗಡಿಯ
ಮುಂದೆ ತಗುಲಿ ಹಾಕಿದ್ದ ಬೋರ್ಡ್ :

**ಇಲ್ಲಿ ಸೈಕಲ್ ಬಿಡಿ**
**ಭಾಗಗಳು ದೊರೆಯುತ್ತವೆ**

– ಸಾಯಿಲಕ್ಷ್ಮಿ ಎಸ್.

# ದೇವರಿಗೆ ಒಂದು ಪತ್ರ

## ನಮ್ಮ ದೇಹ ರಚನೆ ಸರಿ ಇದೆಯೆ?

**(ಓದುಗರು ಸ್ಪಂದಿಸಿದ್ದು, ವಿಶೇಷ ಸಂಚಿಕೆಗೆ ನಮಗಿದು ಬರೆದ ಲೇಖನಗಳಿವು)**

# ಎರಡೆರಡು ಇರಲಿ

• ದಿನೇಶ್ ಕುಂದರ್

**ಸೃ**ಷ್ಟಿಕರ್ತನ ಚರಣಕಮಲಗಳಿಗೆ ತಾವರೆ ಕೆರೆ ಕಮಲ ಬರೆಯುವ ಪತ್ರ.

ನಾನು ಕ್ಷೇಮವಾಗಿಲ್ಲದ ಕಾರಣ ನಿನ್ನ ಕ್ಷೇಮ ಸಮಾಚಾರ ವಿಚಾರಿಸದೆ Direct matterಗೆ ಬರ್ತಿದ್ದೇನೆ.

ಅಲ್ಲಪ್ಪಾ, ನಮ್ಮನ್ನೆಲ್ಲ ಸೃಷ್ಟಿಸಿ, ಭೂಲೋಕಕ್ಕೆ ರಫ್ತು ಮಾಡಿ ರಾಷ್ಟ್ರಪತಿಯಂತೆ ಮೇಲೆ ಕುಳಿತಿದ್ಯಲ್ಲ.. ನಿನಗೆ Sense ಅನ್ನೋದು ಇದ್ಯಾ? ನೀನೂ ಏನೇ ಹೇಳು, ನೀನು ತಯಾರಿಸಿದ body design perfect ಇಲ್ಲ. Importent partsಗಳನ್ನೆಲ್ಲ ನೀನು ಒಂದೊಂದೇ fix ಮಾಡಿದ್ದು ಯಾಕೆ? ಅದೇನಾದ್ರು failure ಆದ್ರೆ ಏನು ಗತಿ? ಇಲ್ಲಿ ಭೂಲೋಕದಲ್ಲಿ ಪ್ರತಿ ಅಂಗಡಿಯಲ್ಲೂ ಒಂದು ಕೊಂಡರೆ ಇನ್ನೊಂದು ಉಚಿತ ಕೊಡ್ತಿದ್ದಾರೆ!

ಎರಡೆರಡು ಇರಲಿ
ಹೊಟ್ಟೆ ನಿನ್ನಿಂದ ಕೆಟ್ಟೆ

ಚಿರಂಜೀವಿಯಾದ ನಿನಗೆ ಚಿರಕಾಲವೂ ನರಕಯಾತನೆ ಪಡುತ್ತಿರುವ ನಮ್ ಕಷ್ಟ ಏನು ಗೊತ್ತು? ಹೆಚ್ಚೇನು ಬೇಡ, ನನ್ನ Heart next week weak ಆದ್ರೆ ನಾನು ಏನು ಮಾಡ್ಲಿ? ಅದಲ್ಲದೆ ಇಲ್ಲಿ ದಿನಕ್ಕೊಂದು veg fever (ಟೊಮೆಟೊಜ್ವರ) non-veg fever (ಹಂದಿಜ್ವರ) ಬರುತ್ತಿರುವಾಗ ಅದನ್ನು ಎದುರಿಸೊ capacity ನಮ್ bodyಗೆ ಕೊಟ್ಟಿದ್ಯಾ? ಇಲ್ವಲ್ಲಾ. ಮತ್ತೆ ನಮ್ bodyಗೆ ಒಂದೊಂದೇ parts fix ಮಾಡಿದ್ದೀಯ... ಕಣ್ಣುಗಳನ್ನು ತಲೆಯ ಹಿಂಭಾಗದಲ್ಲೂ ಕೊಡ್ಬೇಕಿತ್ತು! ಯಾಕೆ ಗೊತ್ತಾ...? ನಮ್ ಕಡೆ ಎಲ್ಲಾ ಬೆನ್ನಹಿಂದಿನಿಂದ ಚೂರಿ ಹಾಕುವವರೇ ಇರೋದು! ಇನ್ನು ಏನಂದ್ರೆ ಕಾಯಕವೇ ಕೈಲಾಸವೆಂದು ನಂಬಿರುವ ನಮಗೆ ಬಿತ್ತನೆ, ಕೆತ್ತನೆ ಎಲ್ಲ ಮಾಡ್ಬೇಕಿದ್ರೆ ಎರಡು ಕೈಗಳು ಸಾಲುತ್ತಾ..? ನಿನ್ನಂತೆ ನಾಲ್ಕು ಜೊತೆ ಕೈಗಳನ್ನು ಕೊಡ್ಲೇಬೇಕು!

ನಾವು ಬಡವರು. Plane, trainಗಳಲ್ಲಿ journey ಮಾಡೋಕೆ ಸಾಧ್ಯವೇ ಇಲ್ಲ. ಅದಕ್ಕೆ ನಮ್ಮ ದೇಹದಲ್ಲಿ ಸೂಕ್ಷ್ಮ H.N. ಕ್ರಿಮಿಯಂತಾಗುವ adjustment motar fix ಮಾಡಿದ್ರೆ ಉಚಿತವಾಗಿ ವಿದೇಶ ಪ್ರವಾಸ ಮಾಡಬಹುದೇನೋ... ನನ್ನದೊಂದು ಆಸೆ. My dear

God, ನಾಡಿದ್ದು 'ವಿಶ್ವಸ್ವರ್ಗಸ್ಥರ ದಿನಾಚರಣೆ'ಯಂದು ನಾನು ಅತ್ತೆಯೊಂದಿಗೆ ದೇವಲೋಕಕ್ಕೆ ಪಿಕ್‌ನಿಕ್ ಬರುವವಳಿದ್ದೇನೆ. ಆಗ ನನ್ನ bodyಯನ್ನು full service ಮಾಡಿ ಬಿಡ್ಬೇಕು. ಹಾಗೇ ಎರಡು ಜೊತೆ Heart, 2 ಜೊತೆ Kidney, 2 ಜೊತೆ ಮೆದುಳು fix ಮಾಡ್ಲೇಬೇಕು.

God, ನನ್ನದೊಂದು ಸಲಹೆ. ಇನ್ಮುಂದೆ 'ಹೆರಿಗೆ ವ್ಯವಸ್ಥೆ'ಯನ್ನು ಗಂಡಸರಿಗೆ ವರ್ಗಾವಣೆ ಮಾಡಿದ್ರೆ ಹೇಗೆ? ಯೋಚಿಸಿ ನೋಡು ಆಯ್ತಾ? ಮತ್ತೆ 2012ಕ್ಕೆ ಗ್ಯಾರಂಟಿ ಪ್ರಳಯ ಆಗುವುದಿದ್ದರೆ ಒಂದು message ಮಾಡು. ಬ್ಯಾಂಕಿನಲ್ಲಿ 10 ಲಕ್ಷ ಲೋನ್ ಮಾಡಬೇಕೆಂದಿದ್ದೇನೆ.

ಇನ್ನೇನು ವಿಶೇಷವಿಲ್ಲ.

# ಹೊಟ್ಟೆ ನಿನ್ನಿಂದ ಕೆಟ್ಟೆ

**• ಶ್ರೀನಿವಾಸ ಕುಂಡಂತಾಯ**

ಪ್ರಿಯ ಬ್ರಹ್ಮ



ನನ್ನನ್ನು ಅಳತೆಗೆ ಸರಿಯಾಗಿ ಅಚ್ಚುಕಟ್ಟಾಗಿ ಪ್ರತಿ ಒಂದು ಅಂಗವನ್ನೂ ರಚಿಸಿದೆ. ನನ್ನ ಹೊಟ್ಟೆಯನ್ನು ರಚಿಸುವ ವೇಳೆಯಲ್ಲಿ ವರ ಬೇಡುವ ದುರ್ಬುದ್ಧಿ ನನಗೆ ಬಂದು ಹೇ ಸೃಷ್ಟಿಕರ್ತಾ, ಹೊಟ್ಟೆಗೆ ಕಡಿಮೆ ಆಗದಂತೆ ಅನುಗ್ರಹಿಸು ಎಂದು ವರ ಬೇಡಿದ್ದೇ ದೊಡ್ಡ ತಪ್ಪಾಯ್ತು. ನನ್ನ ಕೀರಲು ಧ್ವನಿ ನಿನ್ನ ಚತುರ್ಮುಖದ ಎಂಟು ಕಿವಿಗಳಿಗೆ ಹೇಗೆ ಕೇಳಿಸಿತೋ ಏನೋ ಹೊಟ್ಟೆ ಕಡಿಮೆ ಆಗದಂತೆ ಬೃಹದ್ ಹೊಟ್ಟೆ ನೀನು ನನಗೆ ಕೊಟ್ಟೇ ಬಿಟ್ಟೆ.

ಈಗ ನಾನು ಬರುವುದನ್ನು ಕಂಡ ಜನ ''ಲೋ... ನೋಡೋ... ಹೊಟ್ಟೆ ಬರ್ತಾ ಇದೆ' ಎನ್ನುವಾಗ ''ಹಾಗಾದರೆ ಹೊಟ್ಟೆ ಹೊರತಾಗಿ ನನಗೆ ಬೇರೆ ಅಂಗಗಳೇ ಇಲ್ಲವೇ ಎಂದು ಆಮೂಲಾಗ್ರ ಮುಟ್ಟಿ ನೋಡಿದ್ದಿದೆ.

ನನ್ನ ಮೂರು ವರ್ಷದ ಮಗಳಿಗೆ ಅಪ್ಪನ ಹೊಟ್ಟೆ ಮೇಲೆ ಕಾಲುಹಾಕಿ ಮಲಗಬೇಕೆಂಬ ಆಸೆ. ಅಷ್ಟೆತ್ತರಕ್ಕೆ ಆ ಪುಟ್ಟಕಾಲು ಎತ್ತಿಹಾಕಲು ಸಾಧ್ಯವೇ ನೀನೇ ಹೇಳು.

ಸ್ನೇಹಿತರು, ಬಂಧುಗಳು ನನ್ನ ಬೃಹತ್ ಹೊಟ್ಟೆ ನೋಡಿ ''ಸದಾ ಹೊಟ್ಟೆ ತುಂಬಿದವ' ಎಂದು ಹೇಳುತ್ತಾ ನನಗೆ ಕೊಡದೆ ಅವರವರೇ ತಿನ್ನುವಾಗ ಎಷ್ಟು ಹೊಟ್ಟೆ ಉರಿ ಆಗುತ್ತೆ ಗೊತ್ತಾ?

ನನ್ನ ಹೊಟ್ಟೆಪಾಡಿನ ವಿವರ ತಿಳಿದರೆ ಶ್ರೀ ಜಯಂತ ಕಾಯ್ಕಿಣಿ 'ಮುಂಗಾರು ಮಳೆಗೆ' ಬರೆದ ಹಾಡುಗಳಿಗಿಂತ (ಹೃದಯಹಿಂಡುವ) ಸಾರಿ ಹೊಟ್ಟೆ ಹಿಡಿಯುವ, ಹೊಟ್ಟೆ ತಾಳಹಾಕುವಂತಹ ಉದರಗೀತೆ ರಚಿಸಿಯಾರು!

ಈ ಪತ್ರ ಅಂಚೆಯವರ ಅನುಗ್ರಹದಿಂದ ಅಕಸ್ಮಾತ್ ನಿನಗೇನಾದರೂ ತಲುಪಿಯೇ ಬಿಟ್ಟರೆ ನನಗೆ ''ಗಜನಿ''ಯ ಅಮೀರ್ ಖಾನ್ ತರಹದ ಹೊಟ್ಟೆಯಲ್ಲವಾದರೂ ''ಓಂ ಶಾಂತಿ ಓಂ''ನ ಶಾರೂಖ್ ಖಾನ್ ತರಹದ ಹೊಟ್ಟೆಯನ್ನು ನೀಡು. ಹೆಚ್ಚಿಗೆ ಉಳಿದ ಹೊಟ್ಟೆಯನ್ನು ಬೆನ್ನುಹೊಟ್ಟೆ ಬೆಸೆದ ನರಪೇತಲಗಳು ನಾಲ್ಕು ಜನಕ್ಕೆ ಹಂಚಿಬಿಡು.

ನನ್ನ ಯಾವುದೇ ಜನ್ಮದ ಪಾಪದ ಶಿಲ್ಕು ಉಳಿದಿದ್ದರೆ, ನಿನ್ನ ಹೊಟ್ಟೆಗೆ ಹಾಕಿಕೊಂಡು ಮನ್ನಿಸಿ ಸಮತಟ್ಟಾದ, ಅಸಿಡಿಟಿ ಉಂಟಾಗದ, ಜೀರ್ಣಕ್ರಿಯೆ ಚೆನ್ನಾಗಿ ಜರುಗುವ, ಎಷ್ಟು ತಿಂದರೂ ಹೊಟ್ಟೆ ಉಬ್ಬದಂತಹ, ಕೊಬ್ಬದಂತಹ, ಹೊಟ್ಟೆಕಿಚ್ಚಿಲ್ಲದಂತಹ, ಸುಂದರ ಹೊಟ್ಟೆ ದಯವಿಟ್ಟು ಕರುಣಿಸು ಹೇ ಬ್ರಹ್ಮ!



ಒಬ್ಬ ಮಹಿಳೆ ವೈದ್ಯರ ಬಳಿ ಹೋಗುತ್ತಾಳೆ. ಅವಳಿಗೆ ಹಿಗ್ಗಾ ಮುಗ್ಗಾ ಹೊಡೆಯಲಾಗಿದೆ. ಗಾಯದ ಗುರುತುಗಳು ಎದ್ದು ಕಾಣುತ್ತಿವೆ.

'ಏನಾಯಿತು?' ವೈದ್ಯರು ಕೇಳಿದರು.

'ನನಗೆ ಏನು ಮಾಡಬೇಕೋ ತೋಚುತ್ತಿಲ್ಲ. ಪ್ರತಿ ದಿನ ರಾತ್ರಿ ನನ್ನ ಗಂಡ ಕುಡಿದು ಬಂದು ನನಗೆ ಹೊಡೆಯುತ್ತಾನೆ.' ಅವಳು ವಿವರಿಸಿದಳು.

'ಅಷ್ಟೇನೇ? ಅದಕ್ಕೆ ನನ್ನ ಬಳಿ ಒಳ್ಳೇ ಔಷಧಿ ಇದೆ. ಅವನು ಕುಡಿದು ಬಂದಾಗ ನೀನು ಒಂದು ಕಪ್ ಚಾ ಮಾಡಿಕೊಂಡು ಬಾಯಿಯ ಬಳಿ ಹಿಡಿದು ಸಿಪ್ ಮಾಡತೊಡಗು. ನಿಲ್ಲಿಸಬೇಡ. ಅವನು ನಿದ್ರಿಸುವವರೆಗೂ ಸಿಪ್ ಮಾಡುತ್ತಿರು. ಬೇರೇನೂ ಮಾಡಬೇಡ' ಎಂದರು. ೧೦೦ ರೂಪಾಯಿ ಸಲಹಾ ಶುಲ್ಕ ಪಡೆದು ಅವಳನ್ನು ಸಾಗಿ ಹಾಕಿದರು.

೧೫ ದಿನಗಳ ನಂತರ ಅವಳು ಕ್ಲಿನಿಕ್ಕಿಗೆ ಬಂದಾಗ ನಳನಳಿಸುತ್ತಿದ್ದಳು. ಯಾವ ಗಾಯದ ಗುರುತೂ ಇರಲಿಲ್ಲ.

'ಡಾಕ್ಟ್ರೇ ನೀವು ಹೇಳಿದಂತೆ ಮಾಡಿದೆ. ಅವನು ಕುಡಿದು ಬಂದಾಗ ಒಂದು ಕಪ್ ಚಾ ಮಾಡಿಕೊಂಡು ಸಿಪ್ ಮಾಡತೊಡಗಿದೆ. ಅವನು ನಿದ್ರಿಸುವವರೆಗೂ ಸಿಪ್ ಮಾಡುತ್ತಿದ್ದೆ. ಬೇರೇನೂ ಮಾಡಲಿಲ್ಲ. ಅವನು ನನ್ನನ್ನು ಮುಟ್ಟಲೇ ಇಲ್ಲ." ಎಂದು ಎಕ್ಸೈಟಾಗಿ ಹೇಳಿದಳು.

'ಮಾತಾಡದೇ ಇದ್ದರೆ ಎಷ್ಟು ಉಪಯೋಗ ಇದೆ ಎಂದು ಈಗ ಗೊತ್ತಾಯಿತೆ?' ಎಂದು ಹೇಳಿ 'ಅದೇ ಔಷಧಿ ಮುಂದುವರೆಸು' ಎಂದು ಸಲಹೆ ಮಾಡಿ, ಸಲಹಾ ಶುಲ್ಕ ಪಡೆಯದೆ ಅವಳನ್ನು ಕಳಿಸಿದರು.

# ಸಾಹಿತ್ಯ ಸ್ಫೂರ್ತಿ

• ವಿಶಾಲಾಕ್ಷಿ ದೇಶಪಾಂಡೆ

***ಯಾವುದೋ ಸ್ಫೂರ್ತಿ ಈ ಸಾಹಿತಿಗಳನ್ನು ನಡೆಸುತ್ತಿತ್ತು. ಸಾಹಿತ್ಯ ಸರಸ್ವತಿಯ ಆರಾಧನೆಯನ್ನು ಅವರು ಅನವರತ ನಡೆಸಿದ್ದರು.***

**ನಾ**ನೂ ಒಬ್ಬ ಸಾಹಿತಿ, ಉದಯೋನ್ಮುಖ ಸಾಹಿತಿ. ಬಿಳಿ ಹುಣ್ಣಿಮೆಗೊಮ್ಮೆಯೋ, ಕರಿ ಅಮಾವಾಸ್ಯೆಗೊಮ್ಮೆಯೋ ನನ್ನ ನಾಲ್ಕು ಸಾಲಿನ ಚುಟುಕುಗಳು, ನಾಲ್ಕಾರು ಸಾಲಿನ 'ನವ್ಯ' ಕವನಗಳು ಪ್ರಕಟವಾದಾಗ ನಾನು ಹಿರಿ ಹಿರಿ ಹಿಗ್ಗಿದ್ದು ನಮ್ಮ ಸುತ್ತಮುತ್ತಲಿನವರಿಗೆಲ್ಲ ಗೊತ್ತು. ನನ್ನ ಚುಟುಕು ಕವನಗಳಲ್ಲಿ ನಾನೇ ಕಂಡಿರದ ಅರ್ಥ ಹೆಕ್ಕಿ ತೆಗೆದು ಚಿತ್ರ ಬರೆದ ಆ ಪತ್ರಿಕೆಯ ಕಲಾಕಾರನ ಸಾಮರ್ಥ್ಯ ನನಗೆ ದಂಗು ಬಡಿಸಿದ್ದೂ ಉಂಟು. ರವಿ ಕಾಣದ್ದನ್ನು ಕವಿ ಕಂಡನಂತೆ. ಅದು ಸತ್ಯ. ಆದರೆ ಕವಿ ಕಾಣದ್ದನ್ನು ಪತ್ರಿಕೆಯ ಕಲಾಕಾರ ಕಂಡ? ಅದು ಸುಳ್ಳಲ್ಲ.

ನನ್ನ ಚುಟುಕು ಪ್ರಕಟವಾದಾಗ ಅಂದಿನ ಪತ್ರಿಕೆಯನ್ನು ಕೈಯಲ್ಲಿ ಹಿಡಿದು, ಮನೆಯ ಮುಂದೆ ತಲೆ ಸುಡುವ ಬಿಸಿಲಿನಲ್ಲಿ ನಿಂತು, ರಸ್ತೆಯಲ್ಲಿ ನನ್ನ ಪರಿಚಯಸ್ಥರಾರಾದರೂ ಹೋಗುತ್ತಿದ್ದಾರೇನೋ ಎಂದು ಜಾತಕಪಕ್ಷಿಯಂತೆ ನಿಲ್ಲುತ್ತೇನೆ. ಅಂಥವರು ಕಂಡಾಗ ಅವರು ಓದು ಬಲ್ಲವರಾಗಿರಲಿ, ಓದು ಬರದವರಿರಲಿ, ಓದಲು ತಿರಸ್ಕಾರ ತೋರುವವರೇ ಆಗಿರಲಿ ಅವರನ್ನು ಕೈಬೀಸಿ ಕರೆದು ಅವರ ಕ್ಷೇಮ ಸಮಾಚಾರ ಕೇಳುವ ನಟನೆ ಮಾಡಿ ನನ್ನ ಕೈಯಲ್ಲಿರುವ ಅಂದಿನ ಪತ್ರಿಕೆಯನ್ನು ಅವರು ಗಮನಿಸುವರೇನೋ ಎಂದು ಕಾತುರನಾಗಿರುತ್ತೇನೆ. ಅವರು ಅಂಥ ಉಸಾಬರಿಗೆ ಹೋಗದಿದ್ದಾಗ ಅವರ ಮೇಲಿನ ನನ್ನ ಸಿಟ್ಟನ್ನು ಸಂಯಮದಲ್ಲಿಟ್ಟುಕೊಂಡು ಕೃತಕ ನಗೆ ಸೂಸಿ ನನ್ನ ಚುಟುಕನ್ನು ಅವರ ಮುಖದ ಮುಂದೆ ತಿವಿಯುತ್ತೇನೆ. ನನ್ನ ಚುಟುಕನ್ನು ಓದದೇ ಓದಿದರೂ ಅದರ ಅರ್ಥ ಗ್ರಹಿಸದೇ ಆ ಪುಟದಲ್ಲಿನ ಬೇರೊಂದು ಚಿತ್ರವನ್ನು ಅವರು ಅವಲೋಕಿಸತೊಡಗಿದಾಗ ಇವರು ಸಾಹಿತ್ಯಾಭಿರುಚಿ ಇಲ್ಲದ ಮಂಗಗಳು ಎಂದು ನನಗೆ ನಾನೇ ಸಮಾಧಾನ ಹೇಳಿಕೊಂಡಿದ್ದೇನೆ.

ಆದರೆ ಮನೆಯೊಳಗೆ ನನ್ನ ಅಣ್ಣ ತಮ್ಮ ಅಕ್ಕ ತಂಗಿ ನನಗೆ ಅಭಿನಂದನೆ ಹೇಳುತ್ತಾರೆ ಅಂದುಕೊಂಡಿರಾ? ಇಲ್ಲ. ಅವರೆಲ್ಲ ಕೇಳೋದು ಒಂದೇ ಪ್ರಶ್ನೆ – ಆ ಚುಟುಕಿಗೆ ಸಂಪಾದಕರು ಎಷ್ಟು ಸಂಭಾವನೆ ಕೊಡುತ್ತಾರೆ, ನೀನು ಹಾಳೆ ಪೆನ್ನು, ಪೋಸ್ಟೇಜ್ ಸ್ಟಾಂಪಿಗೆ ಎಷ್ಟು ಖರ್ಚು ಮಾಡಿದಿ? ಎಂದು. ಥೇಟ್ ಆಡಿಟ್ ಆಫೀಸರುಗಳಂತೆ ವರ್ತಿಸುತ್ತಾರೆ. ಇಂಥ ಪರಿಸ್ಥಿತಿಯಲ್ಲಿ

ನಾನು ನನ್ನ ಸಾಹಿತ್ಯ ಕೃಷಿ ಹೇಗೆ ಮಾಡಬಹುದು ಹೇಳಿ! ಇಂಥ ಪರಿಸರದಲ್ಲಿದ್ದವರು ಮಹಾಕವಿಗಳಾಗಲು ಸಾಧ್ಯವೇ? ಪ್ರತಿಭೆಗೆ ಸ್ಫೂರ್ತಿ ಬೇಡವೇ ಮಹಾಕಾವ್ಯ ರಚಿಸಲು?

ಹೆಸರಾಂತ ಪತ್ರಿಕೆಗಳಿಗೆ ಕಳಿಸಿದ ನನ್ನ ಲೇಖನ, ಕತೆ, ಕವನಗಳು ಅಸ್ವೀಕೃತವಾಗಿ ಎಲ್ಲಿಗೆ ಬಂತೋ ಸಂಗಯ್ಯ ಎಂದರೆ ಅಲ್ಲಿಯೇ ಇದ್ದೇನೆ ಎಂಬಂತೆ ಮತ್ತೆ ನನ್ನ ಫೈಲಿನಲ್ಲಿ ಸೇರುತ್ತಿದ್ದವು. ಅಸ್ವೀಕೃತವಾದ ನನ್ನ ಎಲ್ಲ ಸಾಹಿತ್ಯ ಸೇರಿಸಿ ''ಅಸ್ವೀಕೃತ'' ಎಂಬ ದೊಡ್ಡ ಗ್ರಂಥ ಮಾಡುವ ವಿಚಾರವಿದೆ. ಆದರೆ ನನ್ನ ಇಂಥ ನಿರಾಶಾದಾಯಕ ವಾತಾವರಣದಿಂದ ಪಾರು ಮಾಡಲು ಭಗವಂತ ಮುಂದೆ ಬಂದ.

ಸೋಮನ ಹಳ್ಳಿಗೆ ಟ್ರಾನ್ಸಫರ್ ಆಗಿತ್ತು. ಅಲ್ಲಿ ನನ್ನ ಸಹೋದ್ಯೋಗಿ ಮಿತ್ರರು ನನ್ನ ಸಾಹಿತ್ಯ ಕೃಷಿ ಕಂಡು ಸಂತೋಷಿತರಾಗಿದ್ದರು. ನನ್ನಿಂದ ಮುಂದೊಮ್ಮೆ ಹುಲುಸಾದ ಫಸಲು ಬೆಳೆಯುವದೆಂಬ ಭರವಸೆ ನನಗಿಂತ ಅವರಿಗೇ ಹೆಚ್ಚಿಗೆಯಾಗಿತ್ತು. ಆ ಊರಲ್ಲಿ ಸಾಹಿತ್ಯ ರತ್ನಗಳು ತುಂಬಿದ್ದು ತಿಳಿದಾಗ ನನಗಾದ ಸಂತೋಷ ಅಷ್ಟಿಷ್ಟಲ್ಲ. ಊರಲ್ಲಿನ ಸಾಹಿತ್ಯ ಬಳಗದ ವಿಳಾಸ ಕೊಟ್ಟು ಹುರಿದುಂಬಿಸಿದರು. ಶುಭಸ್ಯ ಶೀಘ್ರಂ. ಆ ಸಾಹಿತ್ಯ ಮಿತ್ರರನ್ನು ಸಂಪರ್ಕಿಸಲೆಂದು ನನ್ನ ಕೆಲಸದ ಮಧ್ಯದಲ್ಲಿಯೂ ಅಲೆದೆ.

ಮೊದಲು ಭೇಟಿಯಾದುದು ಆ ಊರಿನಲ್ಲಿ ಸುಪ್ರಸಿದ್ಧರಾದ ಸಾಹಿತಿ, ಕವಿ ಶಂಕರ ಪ್ರಸಾದರನ್ನು. ಈಗಾಗಲೇ ತಾವೇ ಸ್ವತಃ ನಾಲ್ಕು ಕವನ ಸಂಗ್ರಹ, ಎರಡು ಕಥಾ ಸಂಗ್ರಹ ಪ್ರಿಂಟು ಮಾಡಿದ್ದಾಗಿ ಹೇಳಿದರು. ಹಲವಾರು ಬಿಡಿ ಲೇಖನ, ಕವನಗಳು, ಸುಪ್ರಸಿದ್ಧ ಪತ್ರಿಕೆಗಳಲ್ಲಿ ಪ್ರಕಟವಾದುದಾಗಿ ತಿಳಿಸಿದರು. ಕನ್ನಡ ಕತೆಗಳನ್ನು, ಕಾವ್ಯಗಳನ್ನು ಓದುವವರು ಈಗ ಉಳಿಯುತ್ತಿಲ್ಲ ಎಂದು ತಮ್ಮ ಸಾಹಿತ್ಯ ಕೃಷಿಗೊದಗಿದ ಆಪತ್ತು ಕನ್ನಡಾಂಬೆಗೆ ಒದಗಿದೆ ಎಂಬ ಸಮೀಕರಣ ಸಿದ್ಧಮಾಡಿ ತೋರಿಸಿದರು. ಅವರ ಉತ್ತಮ ಸಾಹಿತ್ಯ ನಿರ್ಮಾಣ ಪದ್ಧತಿ ಕೇಳಿದೆ. ಅವರು ಬಾಣ ಬಿಟ್ಟಂತೆ ಉತ್ತರಿಸಿದರು. ''ಎಲ್ಲದಕ್ಕೂ ಸ್ಫೂರ್ತಿ ಮುಖ್ಯ. ಮತ್ತೊಬ್ಬರು ಬರೆದದ್ದನ್ನು ಓದಲು ನನಗೆ ವ್ಯವಧಾನವಿಲ್ಲ. ಮತ್ತೊಬ್ಬರು ಬರೆದದ್ದನ್ನು ಓದತೊಡಗಿದರೆ ನಾನು ಯಾವಾಗ ಬರೆಯಬೇಕು? ನಾನೊಬ್ಬ ಸ್ವಯಂಭೂ ಸಾಹಿತಿ. ಉಳಿದ ಸಾಹಿತಿಗಳ ಕೃತಿಗಳ ಗೊಡವೆ ನನಗೆ ಬೇಕಿಲ್ಲ. ನೋಡಿ ಪ್ರತಿದಿನ ನೀವು ಟಿ.ವಿ.ಯಲ್ಲಿ ಅಡಿಗೆ ತಯಾರಿಸುವುದನ್ನು ನೋಡುತ್ತ ಕುಳಿತು ಬಿಟ್ಟರೆ ಅಡಿಗೆ ಮನೆಯಲ್ಲಿ ನಿಮ್ಮ ಅಡಿಗೆ ಹೇಗೆ ತಯಾರಾಗುತ್ತದೆ? ಅದೇ ತತ್ವ ನನ್ನದು'' ಎಂದರು.

ನಂತರ ಪ್ರಾಥಮಿಕ ಶಾಲಾ ಶಿಕ್ಷಕ ಸತೀಶರನ್ನು ಭೇಟಿ ಮಾಡಲು ಶಾಲೆಗೆ ನಡೆದೆ. ನನ್ನ ಪರಿಚಯವಾದ ನಂತರ ಅವರ ಸಾಹಿತ್ಯ ಪ್ರಕಟಣೆಯ ಬಗ್ಗೆ ಕೇಳಿದಾಗ ಅವರಿಗೆ ಹೆಮ್ಮೆಯಾಯಿತು. ಕೆಲವು ಮಕ್ಕಳ ಕವನಗಳು ಪ್ರಕಟವಾದುದಾಗಿ ಹೇಳಿದ ಅವರು ನನಗೆ ''ಮನೆಯಲ್ಲೇ ಬರೆಯಬೇಕೆಂದೇನೂ ಇಲ್ಲ. ಪಾಠ ಹೇಳುತ್ತಿದ್ದಂತೆ ಒಮ್ಮೊಮ್ಮೆ ಕವನ ರಚನೆಯ ಸ್ಫೂರ್ತಿ ಉಂಟಾಗುತ್ತದೆ. ಆಗ ಇಲ್ಲಿಯೇ ಬರೆದಿಡುತ್ತೇನೆ'' ಎಂದರು. ಹಾಗೆ ಬರೆದ ಕೆಲ ಮಕ್ಕಳ ಪದ್ಯ ತೋರಿಸಿದರು. ವಿದ್ಯಾರ್ಥಿಗಳು ಒಬ್ಬರನ್ನೊಬ್ಬರು ಬಡಿಯುತ್ತ ಗಲಾಟೆ ಮಾಡುತ್ತಿದ್ದುದರ ಪರಿವೆ ಅವರ ಕವನ ರಚನೆಗೆ ಅಡ್ಡ ಬಂದಿಲ್ಲವೆನಿಸಿತು.

ಮತ್ತೊಂದು ದಿನ ಬ್ಯಾಂಕಿನೆಡೆ ನಡೆದೆ. ಶೇಖರ್ ಅಲ್ಲಿನ ಉದ್ಯೋಗಿಗಳಲ್ಲಿ ಒಬ್ಬರು. ಅವರನ್ನು ಹುಡುಕಲು ಬಹಳ ವೇಳೆ ಹಿಡಿಯಲಿಲ್ಲ. ಕಣ್ಣಾಡಿಸಿದಾಗ ಹಾಳೆ – ಪೆನ್ನು ಹರವಿ ಕುಳಿತು ಅದರಲ್ಲೇ ತಲ್ಲೀನರಾದ ಲೇಖಕರ ಬಳಿ ಹೋಗಿ ''ನಮಸ್ಕಾರ'' ಎಂದಾಗ ಕತ್ತೆತ್ತಿ ಪ್ರಶ್ನಾರ್ಥಕವಾಗಿ ದೃಷ್ಟಿಸಿದರು. ''ನೀವು ಲೇಖ...'' ಎನ್ನುವಷ್ಟರಲ್ಲಿಯೇ ನಾನು ಪತ್ರಿಕೆಗೆ ಸಂದರ್ಶನ ಪಡೆಯಲು ಬಂದಿರಬಹುದೆಂದು ಧಿಗ್ಗನೆದ್ದು ಕುರ್ಚಿಯಲ್ಲಿ ಕೂಡಿಸಿದರು. ಪರಿಚಯವಾದ ನಂತರ ತಮ್ಮ ಎರಡು – ಮೂರು ಬಿಡಿ ಲೇಖನಗಳು ಪ್ರಕಟವಾದುದಾಗಿಯೂ ಹೇಳಿದರು. ''ನಮ್ಮ ಮ್ಯಾನೇಜರ್ ತುಂಬ ಒಳ್ಳೆಯವರು. ನಾನು ಕವಿತೆ ಬರೆಯಲು ನನಗೆ ಅನುವು ಮಾಡಿಕೊಟ್ಟಿದ್ದಾರೆ. ಅವರ ಹೆಂಡತಿ ನನ್ನ ಕವನ ಮೆಚ್ಚಿದ್ದಾರೆ ನೋಡಿ. ಇಲ್ಲೇ ಸಾಕಷ್ಟು ಬಿಡುವಿರುತ್ತಲ್ಲ. ಕೆಲಸದ ಮಧ್ಯ ತೋಚಿದ್ದನ್ನು ಗೀಚುತ್ತೇನೆ'' ಎನ್ನುತ್ತ ಅದೀಗ ಮುಗಿಸಿದ ಲೇಖನವನ್ನು ಮಡಿಚುತ್ತ ಕವರಿನಲ್ಲಿ ತುರುಕಿದರು. ಸಾಹಿತ್ಯ ರಚನೆಗೆ ಮನೆಯಲ್ಲಿ ಅನಾನುಕೂಲಗಳೆ ಹೆಚ್ಚು ಎಂದು ತಮ್ಮ ಹೆಂಡತಿ ಮಕ್ಕಳ ಕಿರಿಕಿರಿಯನ್ನು ತಿಳಿಸಿ ನಗೆ ಬೀರಿದರು. ಅಟೆಂಡರನನ್ನು ಕರೆದು ಆ ಪತ್ರವನ್ನು ಅಂಚೆಪೆಟ್ಟಿಗೆಯಲ್ಲಿ ಅರ್ಜೆಂಟಾಗಿ ಹಾಕಿ ಬರಲು ಕಳಿಸಿದರು. ಅವರ ಬ್ಯಾಂಕಿನವರೆಲ್ಲ ಆ ಲೇಖನ ಪ್ರಕಟವಾಗುವುದನ್ನು ತವಕದಿಂದ ನಿರೀಕ್ಷಿಸುತ್ತಿದ್ದಾರೆ. ಅದೊಂದು ಬಗೆಯ ಟೀಮ್ ಸ್ಪಿರಿಟ್.

ಕತೆಗಾರ ಕಲ್ಲಪ್ಪ ಎಂದೇ ಸೋಮನಹಳ್ಳಿಯಲ್ಲಿ ಪ್ರಸಿದ್ಧಿ ಪಡೆದ ಕಲ್ಲಪ್ಪನವರನ್ನು ಕಾಣಲು ಹೋದೆ. ಅವರು ಒಬ್ಬ ನಿರುದ್ಯೋಗಿಗಳು. ನಾನು ಬಂದುದಕ್ಕಾಗಿ ಸಂತೋಷಪಟ್ಟರು. ''ಈಗಾಗಲೇ ನೂರು – ಇನ್ನೂರು ಕಥೆ ಬರೆದಿದ್ದೇನೆ. ಇನ್ನೂ ಯಾವೂ ಪ್ರಕಟವಾಗಿಲ್ಲ ನೋಡಿ'' ಎಂದು ಒಂದು ದೊಡ್ಡ ಫೈಲ್ ತೆರೆದರು. ಎಲ್ಲಿಯೂ ಜಾಗ ಬಿಡದೆ ಹಾಳೆಯ ಎರಡೂ ಬದಿ ಎಲ್ಲ ಬರೆದಿದ್ದಾರೆ. ಅಕ್ಷರ ಸುಲಭದಲ್ಲಿ ತಿಳಿಯಲಿಲ್ಲ. ಸುಮ್ಮನೇ ಪುಟ ತಿರುವುತ್ತ ಬಂದೆ. ಪಾಪ, ಎಷ್ಟು ಹಣ ಖರ್ಚು ಮಾಡಿದ್ದಾರೋ ಹಾಳೆ ಪೆನ್ನು ಪೋಸ್ಟೇಜ್‌ಗಾಗಿ. ಅವರ ಸುದೈವ. ನನಗಿರುವಂಥ ಅಣ್ಣ – ತಮ್ಮ ಅಕ್ಕ – ತಂಗಿ ಅವರಿಗಿಲ್ಲ! ಆಯವ್ಯಯದ ಲೆಕ್ಕಪತ್ರ ಕೇಳಲು.

''ನೋಡಿ ರವಿಪ್ರಕಾಶ್ ಅವರೇ, ನಾನು ಒಮ್ಮೆ ಬರೆದರೆ ಹೊರಳಿ ನೋಡುವುದಿಲ್ಲ. ಕಥೆ ಪ್ರಾರಂಭವಾದರೆ ಮುಕ್ತಾಯಕ್ಕೇ ನಿಲ್ಲಿಸುತ್ತೇನೆ. ಮುಗಿದ ಕೂಡಲೇ ಪೋಸ್ಟ್ ಆಗುತ್ತದೆ. ಅತೀ ಹೆಚ್ಚು ಕತೆ ಬರೆದವನೆಂಬ ದಾಖಲೆ ಮಾಡುವ ಅಭಿಲಾಷೆ ನನಗಿದೆ. ನೋಡುತ್ತಿರಿ, ಒಂದು ದಿನ ಗಿನ್ನೆಸ್ ಬುಕ್‌ನಲ್ಲಿ ನನ್ನ ಹೆಸರು ಬರುವುದು'' ಎಂದರು. ಅವರ ವಯಸ್ಸು, ದೇಹದಾರ್ಢ್ಯ ನೋಡಿದಾಗ ಅವರು ಅದನ್ನು ಸಾಧಿಸಬಲ್ಲರು ಎಂದು ಮನವರಿಕೆ ಆಯಿತು.

ಕವಿ ಸೋಮಣ್ಣನವರನ್ನು ಭೇಟಿ ಮಾಡಲು ಅವರ ಮನೆಗೆ ಹೋದರೆ ಇರಲಿಲ್ಲ. ನನ್ನ ಚುಟುಕೊಂದನ್ನು ಪತ್ರಿಕೆಗೆ ಪೋಸ್ಟ್ ಮಾಡಲಿದ್ದುದರಿಂದ ಪೋಸ್ಟಾಫೀಸಿನೆಡೆ ನಡೆದೆ. ಅಲ್ಲಿನ ಬೂತ್‌ನ ಪಕ್ಕದ ಕಟ್ಟೆಗೆಯ ಇಳಿಜಾರಾದ ಫಲಕದ ಮೇಲೆ ಇನ್‌ಲ್ಯಾಂಡಿನಲ್ಲಿ ಬರೆಯುತ್ತಿದ್ದ ಸೋಮಣ್ಣನವರ ಭೆಟ್ಟಿಯಾದೆ. ಅವರು ಇನ್‌ಲ್ಯಾಂಡ್ ತೋರಿಸುತ್ತ ''ಕವನ ರಚನೆಗೆ ನನಗೆ

ಸ್ಫೂರ್ತಿ ಇಲ್ಲಿಯೇ. ನೋಡಿ ನನ್ನ ಕವನ' ಎಂದರು. ಪೋಸ್ಟ್ ಆಫೀಸಿನಲ್ಲಿ ಇನ್‌ಲ್ಯಾಂಡ್ ಕೊಂಡು ಅಲ್ಲೇ ಕವನ ರಚಿಸಿ ಪೋಸ್ಟ್ ಮಾಡುವ ''ಸ್ಫೂರ್ತಿ ಕವಿ''ಗಳನ್ನು ಕಂಡು ಆಶ್ಚರ್ಯವಾಯಿತು. ನಾನು ಮನೆಯಲ್ಲಿ ಎಷ್ಟೊಂದು ಪ್ರಶಾಂತವಾಗಿ ಕುಳಿತು ಬರೆದು ವೇಳೆ ಹಾಳು ಮಾಡುತ್ತಿರುವೆನಲ್ಲ ಎನಿಸಿತು.

ಮಹಿಳಾ ಪತ್ರಿಕೆಗಳಿಗೆ ಬರೆಯುತ್ತಿರುವ ಶ್ರೀಮತಿಯವರನ್ನು ರವಿವಾರ ಬೆಳಿಗ್ಗೆ ಒಂಬತ್ತು ಗಂಟೆಗೆ ಭೇಟಿ ಮಾಡ ಹೋದೆ. ಅವರ ಮಗಳು ತಮ್ಮ ತಾಯಿ ಅಡಿಗೆ ಮನೆಯಲ್ಲಿದ್ದಾರೆಂದು ಹೇಳಿ ಕುಳಿತುಕೊಳ್ಳಲು ಹೇಳಿ ಒಳಹೋದಳು. ಅಡಿಗೆ ಕೆಲಸದ ವೇಳೆಯಲ್ಲಿ ಬಂದು ತೊಂದರೆ ಕೊಟ್ಟೆನೇನೋ ಎನಿಸಿತು. ಆ ಕ್ಷಣ ಅವರ ಮಗಳು ಬಂದವಳೇ ''ಅಲ್ಲೇ ಬರಬೇಕಂತೆ'' ಎಂದಾಗ ಒಳನಡೆದೆ. ಲೇಖಕಿ ಶ್ರೀಮತಿಯವರು ಗ್ಯಾಸ್ ಕಟ್ಟೆಯ ಮೇಲೆಯೆ ಅರ್ಧವಾಗಿದ್ದ ಲೇಖನವೊಂದನ್ನು ಕೆಳಗಿರಿಸಿ ನನ್ನತ್ತ ಹೊರಳಿದರು. ಇಷ್ಟು ಕೆಲಸದ ಮಧ್ಯದಲ್ಲಿ ಲೇಖನ ಬರೆಯುವುದು ಸಾಮಾನ್ಯವಲ್ಲ ಎಂದು ಪೀಠಿಕೆ ಹಾಕಿದೆ.

''ಹೌದ್ರಿ, ಮನೆ ಕೆಲಸ ಮತ್ತು ಹೊರಗಿನ ಕೆಲಸದಾಗ ಬಿಡುವೆ ಸಿಗುವುದಿಲ್ಲ. ಹನ್ನೊಂದಕ್ಕೆ ಹೊರಡಬೇಕು. ಇಂಥ ವೇಳೆಯಲ್ಲೇ ಆದಾದಾಗ ಅರ್ಧ ಅರ್ಧ ಎಷ್ಟೆಷ್ಟಾಗುತ್ತೋ ಅಷ್ಟಷ್ಟು ಬರೆಯುತ್ತೇನೆ' ಎಂದು ಸೌತೆಕಾಯಿಯನ್ನು ಕೊಚ ಕೊಚ ಕತ್ತರಿಸತೊಡಗಿದರು. ಚಪಾತಿ ಹಿಟ್ಟಿನ ಮುದ್ದೆ ಒಂದೆಡೆ ಇತ್ತು. ಅಷ್ಟರಲ್ಲೇ ಕುಕ್ಕರ್ ವಿಸಲ್ ಮಾಡಿತ್ತು. ಕಣಕವನ್ನು ನಾದುವಂತೆಯೇ ಕವನವನ್ನು ನಾದುವ ಶೈಲಿಗೆ ಮೆಚ್ಚುಗೆ ಎನಿಸಿತು. ಹೊತ್ತಿದ ತೊಗರೆ ಬೇಳೆಯ ವಾಸನೆ ನನ್ನ ಮೂಗಿಗೆ ಬಡಿದಾಗ ಶ್ರೀಮತಿಯವರ ಗಂಡನ ಅಂದಿನ ಊಟದ ಬಗ್ಗೆ ಅಯ್ಯೋ ಪಾಪವೆನಿಸಿತು.

'ಅಬ್ಬಾ! ಸಾಹಿತ್ಯ ಸೃಷ್ಟಿಯೇ ಎನ್ನಿಸಿ' ನಿಮ್ಮ ಬರವಣಿಗೆ ಹೀಗೇ ಮುಂದುವರಿಯಲೆಂದು ಹಾರೈಸಿ ಹೊರಬಂದೆ.

ಅದಾವುದೋ ಸ್ಫೂರ್ತಿ ಈ ಕವಿಗಳನ್ನು ಕತೆಗಾರರನ್ನು ನಡೆಸುತ್ತಿತ್ತು. ಮನೆಯಲ್ಲಿನ ಅನಾನುಕೂಲಗಳನ್ನೆಲ್ಲ ಬದಿಗೊತ್ತಿ ಸಾಹಿತ್ಯ ಸರಸ್ವತಿಯ ಆರಾಧನೆಯನ್ನು ಅವರು ಅನವರತ ನಡೆಸಿದ್ದರು. ಅವರ ಆ ಪೂಜಾ ವಿಧಿಯಲ್ಲಿ ನಾನು ಭಾಗವಹಿಸಲು ಸಾಧ್ಯವೇ ಎಂದು ಸಂದೇಹ ಮೂಡಿತ್ತು. ನಾನು ಅಂಥ ಭಕ್ತನೇ ಎಂದು ನನ್ನನ್ನು ನಾನೇ ಪ್ರಶ್ನಿಸಿಕೊಂಡೆ.

ರಾತ್ರಿ ನಿದ್ರೆ ಕೂಡ ಬೇಗ ಬರಲಿಲ್ಲ. ಅದೇ ಕೊರೆಯಲು ಶುರು ಮಾಡಿತು.

ಬೆಳಿಗ್ಗೆ ಆಫೀಸಿನಲ್ಲಿ ಕಾಲಿಡುತ್ತ ಬಾಸ್‌ಗೆ ''ಗುಡ್ ಮಾರ್ನಿಂಗ್'' ಕೂಡ ಹೇಳುವುದನ್ನೂ ಮರೆತು ನನ್ನ ಟೇಬಲ್ ಬಳಿ ನಡೆಯುತ್ತಿದ್ದಂತೇ ನನಗೆ ಲೇಖನ ರಚನೆಯ ಸ್ಫೂರ್ತಿ ಉಂಟಾಗತೊಡಗಿತು. ನಾನು ಆಗ ಏನು ಮಾಡಿದೆನೆಂಬುದನ್ನು ನಿಮಗೆ ಬೇರೆ ಹೇಳಬೇಕಿಲ್ಲ.

# ಟೂ - ಇನ್- ಒನ್ ಡಾಕ್ಟರ್

• ಇ.ಆರ್.ಆರ್.

**ನ**ನ್ನ ಜೊತೆ ಓದಿದ ರಾಮಿ ಈಗ ದೊಡ್ಡ ಡಾಕ್ಟ್ರು. ಡಾ॥ ರಾಮ್‌ಪ್ರಸಾದ್ ಉರುಫ್ ರಾಮಿ. ದೊಡ್ಡ ಹಾಸ್ಪಿಟಲ್‌ನಲ್ಲಿ ಅವನು ಈಗ ಸ್ಪೆಷಲಿಸ್ಟ್. MBBSನಲ್ಲಿ ಶುರುವಾಗಿ ಬಾಲಾಂಗುಚ್ಚಿಯ ಹಾಗೆ ಬೆಳಕೊಂಡಿವೆ ಅವನ ಡಿಗ್ರೀನು.

ಮೊನ್ನೆ ಮಾರ್ಕೆಟ್ನಲ್ಲಿ ಸಿಕ್ಕಿ, 'ಹಾಸ್ಪಿಟಲ್‌ಗೆ ಬಾರಮ್ಮ ಟೈಮ್ ಸಿಕ್ಕಾಗ, ಗಪ್ಪ ಹೊಡೆಯೋಣ' ಅಂತ ಹೇಳಿದ್ದ.

ರಾಮಿಯ ಹಾಸ್ಪಿಟಲ್ ಯಾವ 5 ಸ್ಟಾರ್ ಹೋಟೆಲ್‌ಗೂ ಕಡಿಮೆ ಇರಲಿಲ್ಲ. ಹೊರಗಡೆ ಫೌಂಟನ್; ಗೋಡೆಗೆ 'ಹುಸೇನ್' ಪೇಂಟಿಂಗ್, ಇಟಾಲಿಯನ್ ಗ್ರಾನೈಟ್ ಫ್ಲೂರ್ ಹಾಕಿದ್ರು.

ರೆಸೆಪ್ಷನಿಸ್ಟ್ ತೋರಿಸಿದ ರೂಮಿಗೆ ಹೊರಟೆ; ಅಪ್ಪಿ ತಪ್ಪಿ ವಿಜಯ್ ಮಲ್ಯನ ಆಫೀಸೆಗೋ ಇಲ್ಲ ಅಂಬಾನಿ ಆಫೀಸಿಗೆ ಬಂದುಬಿಟ್ನಾ ಅಂದುಕೊಂಡು ಹಾಗೆ ಅಳುಕುತ್ತಾ ಮುಂದೆ ನಡೆದೆ.

'ಬಾರೋ ಸೀನಿ' ಅಂತ ಕೂಗ ಬಂತು ಮೂಲೆಯಿಂದ.

6' ಕಾಶ್ಮೀರ್ ಕಾರ್ಪೆಟ್‌ನ ಮೇಲೆ ನಡೀತಾ ಕಾಲು ಹೂತ್ಕೊಂಡು ತೊಸೆಯನ ತರಾ ನಡೀತಾ ಅವನು ತೋರಿಸಿದ ಸೋಫಾ ಮೆಲೆ ಕುಕ್ಕರಿಸಿದೆ. ಡಬಲ್ ಕುಶವನಿಂದಲೋ ಏನೋ. ಒಂದಡಿ ಒಳಗೆ ಹೋಯಿತು ನನ್ನ ತೂಕದ ದೇಹ.

ರಾಮಿ ತೂತಿರುವ ಬೆತ್ತದ ಚೇರ್ ಮೇಲೆ ಹಾಸಿದ ಜಿಂಕೆ ಚರ್ಮದ ಮೇಲೆ ಕೂತ. ಸೂಟ್ ಹಾಕಿ ಸಾಕ್ಸಿನ ಕೆಳಗೆ ಮೂಳೆ ಇರುವ ಅಕ್ಯುಪ್ರೆಸ್ಸರ್ ಚಪ್ಪಲಿ ತೊಟ್ಟಿದ್ದ.

ಪಕ್ಕದಲ್ಲಿದ್ದ ಮಿನಿ ಫ್ರಿಡ್ಜ್‌ನಿಂದ ಒಂದು ಪೆಪ್ಸಿ ಗ್ಲಾಸ್ನಲ್ಲಿ ಹಾಕಿ ನನಗೆ ಕೊಟ್ಟು, ಒಂದು ಕಮಂಡಲಕ್ಕೆ ತಣ್ಣೀರು ಸುರ್ಕೊಂಡ.

''ನೀನು ಯಾಕಯ್ಯ ಪೆಪ್ಸಿ ತೊಗೊಳಿಲ್ಲ? ಏನಿದು ಕಮಂಡಲ?''

''ಕಮಂಡಲ ನಾಚುರಲ್ ಕಣೋ.. ನನಗೆ ಪೆಪ್ಸಿ ಇದ್ಯಾವುದಲ್ಲೂ ನಂಬಿಕೆ ಇಲ್ಲ. ಹಾಲಾದ್ದು! ನಮ್ಮ ಲಿವರ್ನೆ ತಿಂದುಹಾಕುತ್ತೆ. ನಾನು ಪ್ರತಿವಾರ ಹರಿದ್ವಾರದಿಂದ ಗಂಗಾಜಲ ತರಿಸ್ಕೊಳ್ತೀನಿ. ಜೀರಿಗೆ, ಹಳೆ ಬೆಲ್ಲ, ಹಳೆ ಹುಣಸೆಹಣ್ಣು ಸಮತೂಕ ತೊಡೊಂಡು, ಕುಟ್ಟಿ ಉಂಡೆ ಮಾಡಿ, ಗೋಲಿ ಗಾತ್ರದ ಉಂಡೆಯನ್ನು ಬಾಯ್ಲ್ಡ್ ಗಂಗಾಜಲದಲ್ಲಿ ಸೇರಿಸಿ,

ಬಾಯಲ್ಲಿ ಇಟ್ಟುಕೊಂಡು ಚಪ್ಪರಿಸಿ ರಸ ನುಂಗುತ್ತಿದ್ದರೆ ಪಿತ್ತ ದೋಷಗಳು ಮಾಯವಾಗುತ್ತೆ ಸೀನೂ! ಶೂರ್ ಶಾಟ್ ಅದು. ರಾಮ ಬಾಣ!'

ನಾನು ಪೆಪ್ಸಿ ಕುಡಿಯುವಾಗ ನನ್ನ ಲಿವರ್ ಗತಿ ಏನೆಂದು ಯೋಚಿಸ್ದೆ. ಇವನು 'ಡಾಕ್ಟರಾ ಅಥವಾ ಅಳಲೆಕಾಯಿ ಪಂಡಿತನಾ?' ಅಂತ ಡೌಟೂ ಬಂತು. ಸಣ್ಣಗೆ ಕೈ ಕಾಲು ಅದುರುವುದಕ್ಕೆ ಶುರುವಾಯಿತು. ಹಣೆಯ ಮೇಲೆ ಬೆವರು ಹನಿ ಶುರುವಾಯಿತು. ಯಾವುದೋ.. ಅಂತೂ ಡಾಕ್ಟರ್.. ಎದುರಿಗೆ ಇದಾನಲ್ಲ ಅಂತ ಧೈರ್ಯ ಮಾಡಿ ಹಾಗೂ ಹೀಗೂ ಮುಗಿಸಿದೆ.

'ನಿಂದು ಬೆಳಗ್ಗಿನ ರೌಂಡ್ಸ್ ಆಯ್ತಾ?' ನನ್ನ ಗಂಟಲು ಒಣಗಿತ್ತು.

ಈಗ 'ಕಾನ್ಸೆಪ್ಟ್' ಚೇಂಜ್ ಆಗಿದೆ ಸೀನೂ... ನಾವು ರೌಂಡ್ಸ್ ಹೋಗೋಲ್ಲ... ಪೇಶಂಟ್ನ ರೌಂಡ್ಸ್‌ಗೆ ಕಳಿಸ್ತೀವಿ ಅಂದ ರಾಮಿ.

ಈಗೀಗ ಡಾಕ್ಟರ್‌ಗಳು ಪೇಶಂಟ್‌ನ ಎಲ್ಲಿಗೆ ಬೇಕಾದರೂ ಕಳಿಸ್ತಾರೆ... ಸೀದಾ ಮೇಲೆ ಬೇಕಾದ್ರೂ ಸರಿ...

'ನಂಗೆ ಅರ್ಥವಾಗಲಿಲ್ಲ ರಾಮಿ. ಅದೇನು ಸರಿಯಾಗಿ ಹೇಳೋ' ಅಂದೆ.

ರಾಮಿ ಜೋಬಿನಿಂದ ಒಂದು ಹಳದಿ ಬಣ್ಣದ ಸಣ್ಣ ಚಾಕ್‌ಪೀಸ್ ಸೈಜ್‌ನ ಮಾಲಿಕೆನ ಬಾಯಿಗೆ ಹಾಕ್ಕೊಂಡು, ನನಗೂ ಒಂದು ಕೊಟ್ಟ

'ಇದೇನಿದು.. ಡ್ರಗ್ ಅಭ್ಯಾಸ ರಾಮಿ.. ಯಾವಾಗ್ಲಿಂದ?'

'ಇದು ಆಮ್ಲ.. ಬಾಬ ರಾಮ್ದೇವ್ ಅವರ ಆಶ್ರಮಕ್ಕೆ ಹೋದಾಗಲೆಲ್ಲಾ ಅವರೇ ಪ್ರಿಪೇರ್ ಮಾಡಿ ಕೊಡ್ತಾರೆ.... ಇದು ತಿಂದರೆ ಕೊಬ್ಬು toxin ಎಲ್ಲ ತೆಗೆದುಹಾಕುತ್ತೆ ಬಾಡಿಯಿಂದ... ಯಾವಾಗಲೂ ಮೈಂಡ್ ಕೂಲ್ ಆಗಿ ಇರುತ್ತೆ... ಸೀನೂ ನಿಂಗೆ ರೌಂಡ್ಸ್ ವಿಚಾರ ಹೇಳ್ತಿದ್ದೆ... ಬೆಳಿಗ್ಗೆಯಿಂದ ಇಲ್ಲಿ ತನಕ ಇವತ್ತು 6 ಪೇಶಂಟ್ಸ್ ಬಂದೀದಾರೆ.

ಮೊದಲನೆಯವನು ಸಾಫ್ಟ್‌ವೇರ್ ಇಂಜಿನಿಯರ್ 23 ವರ್ಷ. ಎರಡು ದಿವಸದಿಂದ ಜ್ವರ, ತಲೆನೋವು, ನಿದ್ದೆ ಇಲ್ಲ. ಅವನಿಗೆ CTಸ್ಕ್ಯಾನ್ ಮತ್ತು MRIಗೆ ಕಳಿಸಿದೀನಿ. ಇನ್ಫೆಕ್ಷನ್ ಇದ್ದರೆ ಗೊತ್ತಾಗುತ್ತೆ. ನಿದ್ದೆ ಇಲ್ಲ ಬೇರೆ. ಸ್ಟ್ರೆಸ್, ಲವ್ ಏನು ಕಥೆಯೋ.. ECG, ಟ್ರೆಡ್ಮಿಲ್, ಡಾಪ್ಲರ್‌ಗೆ ಹಾಕಿ ಡಯಾಗ್ನೋಸ್ ಮಾಡ್ಬೇಕು. ಪಾಪ ಅನ್ಸುತ್ತೆ. ಆದರು ಚಾನ್ಸ್ ತೊಗೊಬಾರ್ದು ನೋಡು.

'ನಿಜ, ನಿಜ'

'ಎರಡನೆ ಪೇಶಂಟ್‌ಗೆ 70 ಮೇಲೆ ವಯಸ್ಸಾಗಿದೆ. ಲೂಸ್ ಮೋಷನ್ಸ್ ಪಾಪ. ನಿದ್ದೆ ಇಲ್ಲ, ಮೈ ಕೈ ನೋವಂತೆ. ಬ್ಲಡ್ ಯೂರಿನ್ ಟೆಸ್ಟ್ ಮಾಡ್ಸಿ, ಲಿವರ್, ಅಬ್ಡೊಮೆನ್, ಪನ್ಕ್ರಿಆಸ್ ಅಲ್ಟ್ರಾ ಸೌಂಡ್ ಸ್ಕ್ಯಾನ್ ಮಾಡ್ಸೋದಕ್ಕೆ ಕಳ್ಸಿದೀನಿ. ಲಿವರ್ ಫಂಕ್ಷನ್ ಟೆಸ್ಟ್‌ನಿಂದ, ಲಿವರ್ ಹೇಗೆ ಕೆಲಸ ಮಾಡುತ್ತೆ ಅಂತ ಗೊತ್ತಾಗುತ್ತೆ. ಬಹಳ ಹಣವಂತೆ ಎಷ್ಟು ಖರ್ಚಾದರೂ ಪರವಾಗಿಲ್ಲ ಅಂತಾರೆ ಅವನ ಮಗಾ, ಸೊಸೆ.. ಪಾಪ!'

ಅಯ್ಯೋ ಪಾಪ.. ಇಲ್ಲಿ ಬಂದು ಸಿಕ್ಕಿ ಹಾಕಿಕೊಂಡಿದ್ದನಲ್ಲಾ ಬಡಪಾಯಿ! ಅಂತಾ ಅನ್ನಿಸ್ತು...

ರಾಮಿ ಕಮಂಡಲದಿಂದ ಒಂದು ಗುಟುಕು ನೀರು ಕುಡಿದು 'ನಿನಗೆ ಇನ್ನೊಂದು ಪೆಪ್ಸಿ ಬೇಕಾ?' ಅಂದ.

'ಸಾಕಪ್ಪ ಸಾಕು. ರಾಮಿ, ಈಗ ಅರ್ಥ ಆಯ್ತು ನೋಡು 'ಪೇಶಂಟ್ಸ್ ರೌಂಡ್ಸ್ ಹೊಡೀತಾರೆ' ಅಂದ್ಯಲ್ಲ ಅದು ಏನೂ ಅಂತ ಎಲ್ಲಾ ಡಿಪಾರ್ಟ್‌ಮೆಂಟ್‌ಗೆ ರೌಂಡ್ ಹೊಡೆದು ಟೆಸ್ಟ್ ಮಾಡಿಸಿ ನಿನ್ನ ಹತ್ತಿರ ಬರ್ತಾರೆ ರಿಸಲ್ಟ್ ತೊಗೊಂಡು, ಅಲ್ವಾ?' ಅಂದೆ.

ರಾಮಿ ನನ್ನ ಮಾತು ಕಿವಿಗೆ ಹಾಕಿಕೊಳ್ಳಲಿಲ್ಲ. ಪಾದದಿಂದ ಚಪ್ಪಲಿಯನ್ನು ದರ್ಜಿ ಸೂಯಿಂಗ್ ಮಶೀನ್ ತುಳಿಯೋ ಹಾಗೆ ತುಳೀತಿದ್ದ.

'ಈಗ ಅವರಿಗೆ ಗ್ಲೂಕೋಸ್ – ಬ್ರಯ್ನ್ ಡ್ರಿಪ್‌ಗೆ ಹಾಕೀದೀನಿ. ಇಲ್ಲೇ ಎರಡು ದಿವಸ ಇಟ್ಕೊಂಡು ಬೇರೆ ಟೆಸ್ಟ್, ಸ್ಕ್ಯಾನ್ನಿಂಗ್, ಎಕ್ಸ್-ರೇ ಮಾಡಿಸ್ತಿವಿ. ವಯಸ್ಸು ಆಗಿದೆ ನೋಡು ಕೇರ್ಫುಲ್ ಆಗಿ ಇರ್ಬೇಕು' ಅಂದ ರಾಮಿ.

ಮತ್ತೊಂದು ಜೋಬಿನಿಂದ ಒಂದು ಸಣ್ಣ ಸಾಲಿಗ್ರಾಮದಷ್ಟು ಡಬ್ಬಿ ತೆಗೆದು ಒಂದು ಚಮಚದಿಂದ ಲೇಹ್ಯ ಬಾಯಿಗೆ ಹಾಕಿಕೊಂಡ, ನನಗೂ ಕೊಟ್ಟ.

ಅಷ್ಟು ಕಹಿ ತಿಂದದ್ದು ಲೈಫ್‌ನಲ್ಲಿ ಮೊದಲಬಾರಿಗೆ.

'ರಾಮ ರಾಮ.. ಎಂತಹ ಕಹಿ... ಇದೇನಿದು ರಾಮಿ, ಪಾಷಾಣ ತಿನ್ನಿಸ್ಬಿಟ್ಯಲ್ಲೋ' ಅಂತ ಕೂಗಿದೆ.

'ಒಂದು ಟೀ ಚಮಚ, ಶುದ್ಧ ತುಪ್ಪ, ಒಂದು ಟೀ ಚಮಚ ಬಿಳಿ ಈರುಳ್ಳಿ ರಸ ಮತ್ತು ಒಂದು ಟೀ ಚಮಚ ಜೇನುತುಪ್ಪ ಮಿಶ್ರ ಮಾಡಿ, ಅದಕ್ಕೆ ಒಂದು ಕೋಳಿ ಮೊಟ್ಟೆ ಒಡೆದು ಸುರಿದು ಅದನ್ನು ಚೆನ್ನಾಗಿ ಕಲಕಿ ದಿನಕ್ಕೆ ಎರಡು ಸರ್ತಿ ಸೇವಿಸಿದರೆ ಜ್ಞಾಪಕ ಶಕ್ತಿ ಹೆಚ್ಚುತ್ತೆ. ಲೈಂಗಿಕ ಶಕ್ತಿ ಕೂಡ ವೃದ್ಧಿ ಆಗುತ್ತೆ ಸೀನೂ! ಪಾಂಡವರಿಗೆ ಮದುವೆ ಆದ್ಮೇಲೆ ದ್ರೌಪದಿ ದಿನಾ ಅವರಿಗೆ ತಪ್ಪದೆ ಕೊಡ್ತಿದ್ದಳಂತೆ. ಸ್ವಲ್ಪ ದಿವಸ ತೊಗೋ ನಿನಗೇ ಗೊತ್ತಾಗುತ್ತೆ ಇದರ ಎಫೆಕ್ಟು. ನನಗೆ ಹಿಮಾಲಯದಲ್ಲಿ ಬಾಬ ರಾಮ್ದೇವ್ ಅವರ ಗುರುಗಳು ಕೊಟ್ಟರು. ರಾಮ್ದೇವ್ ಅವರಿಗೂ ಇದು ಗೊತ್ತಿಲ್ಲ!' ಅಂದ ರಾಮಿ.

ರಾಮಿ 'ಜೆಕಲ್ ಅಂಡ್ ಹೈಡ್' ತರಹ ಟೂ-ಇನ್-ವನ್ ಆಸಾಮೀನಾ ಅಂತ ಅನ್ನಿಸ್ತು. ತನಗೆ ಎಲ್ಲ ದೇಶೀ, ಪರರಿಗೆ ವಿದೇಶಿ ಟ್ರೀಟ್ ಮೆಂಟ್.

'ರಾಮಿ, ಫ್ಯಾಮಿಲಿ ಡಾಕ್ಟರ್‌ಗಳು, ಬಾಟಲ್‌ನಲ್ಲಿ ಕಲರ್ ಮಿಕ್ಸ್ಚರ್ ಕೊಟ್ಟು ಖಾಯಿಲೆ ವಾಸಿ ಮಾಡೋವ್ರಲ್ಲ.. ಅವರೆಲ್ಲಾ ಇಲ್ವಾ ಈಗ?'

'ಆ ಕಾನ್ಸೆಪ್ಟ್ ಸತ್ತು ಹೋಗಿ ಬಹಳ ವರ್ಷಗಳಾಯ್ತು. ಆ ತರಹ ಡಾಕ್ಟರ್ ಇದ್ದರೂ ಅವರಿಗೆ ಈ ಮಾರ್ಡನ್ ಮಶೀನ್ಸ್ ಬಗ್ಗೆ ಏನೂ ಅರ್ಥವಾಗಲ್ಲ. ಅಟ್‌ಲೀಸ್ಟ್ 10 ವರ್ಷ ಬೇಕು ಇವೆಲ್ಲ ಹೇಗೆ ಕೆಲಸ ಮಾಡುತ್ತೇಂತ ತಿಳಕೊಳಕ್ಕೆ' ಅಂದ ರಾಮಿ.

ಖಾಯಿಲೆ ವಾಸಿ ಮಾಡೋದು ಮುಖ್ಯವಲ್ಲ; ಟೆಸ್ಟ್, ಸ್ಕ್ಯಾನ್ನಿಂಗ್ ಮಾಡೋದು ಮುಖ್ಯ.

'ನಾನು ಬರ್ತೀನಯ್ಯ, ನೀನು ಚೆನ್ನಾಗಿ ಟ್ರಿಮ್ಮಾಗಿ ಮೇನ್‌ಟೈನ್ ಮಾಡಿದೀಯ ರಾಮಿ! ನಿನ್ನ ಹೆಲ್ತ್ ಸೀಕ್ರೆಟ್ ಏನೋ?'

'ನಾನು ಫಾಲೋ ಮಾಡೋದು ನನ್ನ ಅಜ್ಜಿ ಪ್ರಿನ್ಸಿಪಲ್ – ಚೆನ್ನಾಗಿ ನೀರುಕುಡಿ; ಬೆಳಗ್ಗೆ ಸಂಜೆ ವಾಕ್ ಮಾಡು; ಪಾರ್ಕ್ಗೆ ಹೋಗಿ 'ಲಾಫ್ಟರ್ ಕ್ಲಬ್' ಅವರನ್ನು ನೋಡಿ ಸ್ವಲ್ಪ ಲಾಫ್ ಮಾಡಿ, ಕೋಪಾನ ಕಂಟ್ರೋಲ್‌ನಲ್ಲಿ ಇಟ್ಕೊ.'

ಮನೆಗೆ ಹೋದಮೇಲೆ ಪೇಶಂಟ್ಸ್‌ನ ಮರೆತ್ಬಿಡ್ಬೇಕು. ಆಗ ಲೈಫ್ ಆರಾಮ ಇರುತ್ತೆ' ಏನಂತೀಯ?

'ಹೌದು ರಾಮಿ. ನಿನ್ನ ಪರ್ಸನಲ್ ಲೈಫ್ ಬಹಳ ಸಿಂಪಲ್ ಆಗಿದೆ. ನಿನ್ನ ಅಡ್ವೈಸ್ಗೆ ಥ್ಯಾಂಕ್ಸ್. ಇದಕ್ಕೆ ಏನೂ ಫೀಸ್, ರೌಂಡ್ಸ್ ಇಲ್ಲಾ ತಾನೇ!' ಅಂತ ಹೇಳಿ ಮತ್ತೆ ಸ್ಲೋ ಮಾರ್ಚ್ ಮಾಡಲು ರೆಡಿ ಆದೆ.



## ಅಮೇರಿಕಾದ ಜೈಲಿನಲ್ಲಿ ಗೊರೂರು

ಗೊರೂರು ರಾಮಸ್ವಾಮಿ ಅಯ್ಯಂಗಾರರು ಅಮೇರಿಕೆಗೆ ಪ್ರವಾಸ ಹೋಗಿದ್ದಾಗ ಒಮ್ಮೆ ದಾರಿ ತಪ್ಪಿದರು. ರಾತ್ರಿ ಒಂಬತ್ತು ಗಂಟೆಯಾಗಿಬಿಟ್ಟಿದೆ. ಅವರ ಕಣ್ಣಿಗೆ ಈ ಸಮಯದಲ್ಲಿ ಒಬ್ಬ ಟ್ರಾಫಿಕ್ ಪೋಲೀಸು ಕಣ್ಣಿಗೆ ಬೀಳುತ್ತಾನೆ. ಅವನ ಬಳಿ ನಡೆದು ಇವರ ಸಮಸ್ಯೆ ವಿವರಿಸಿದರು.

"ಈಗ ನೀವು ನನ್ನ ವಶವಾದಿರಿ, ನಿಮ್ಮನ್ನು ಹಾಗೇ ಬಿಡುವಹಾಗಿಲ್ಲ.." ಅಂತ ಅವರನ್ನು ಅವನ ಕಾರಿನಲ್ಲಿ ಮನೆಗೆ ಕರೆದೊಯ್ದು. ಹಣ್ಣು ಹಾಲು ನೀಡಿದ.

"ನಮ್ಮ ಮನೆ ಹಾಸಿಗೆ ತುಂಬಾ ದಿವಸದಿಂದ ಉಪಯೋಗವಾಗಿಲ್ಲ ಅದರಿಂದ ಧೂಳು ತುಂಬಿದೆ. ನೀವು ಏನೂ ತಿಳಿದುಕೊಳ್ಳದಿದ್ದರೆ ನನ್ನ ಕಂಟ್ರೋಲಿನಲ್ಲಿ ಒಂದು ಕೋಣೆ ಲಾಕಪ್ ನಲ್ಲಿದೆ. ಅದರಲ್ಲಿ ಪ್ರತಿದಿವಸ ಸ್ವಚ್ಛ ಮಾಡಿರುವ ಹಾಸಿಗೆ ಕಂಬಳಿ ಎಲ್ಲವೂ ಇದೆ. ಅಲ್ಲಿ ಮಲಗಿ" ಎಂದ.

ರಾತ್ರಿ ಗೊರೂರರು ಅಲ್ಲಿ ಮಲಗಿದರು. ಸೊಗಸಾಗಿ ನಿದ್ದೆಯನ್ನೂ ಮಾಡಿದರು. ಭಾರತದ ಜೈಲಿನಲ್ಲಿ ಸುಮಾರು ತಿಂಗಳು ಕಳೆದಿದ್ದ ಗೊರೂರರು ಅಮೇರಿಕದ ಲಾಕಪ್ಪಿನಲ್ಲಿಯೂ ಒಂದು ದಿವಸ ಕಳೆದು ಅಪರೂಪದ ಅನುಭವವನ್ನು ಪಡೆದು ಅದನ್ನು ದಾಖಲಿಸಿಯೂ ಬಿಟ್ಟರು!

